


# ಭಜನ ಕೌಸ್ತುಭ

ಶ್ರೀ ಹರಿದಾಸ ಸಾಹಿತ್ಯ ಪ್ರಚಾರ ಗ್ರಂಥಮಾಲೆ

॥ ಶ್ರೀ ಹರಿಃ ಓಂ ॥

ಶ್ರೀ ಹರಿದಾಸ ಸಾಹಿತ್ಯ ಪ್ರಚಾರ ಗ್ರಂಥಮಾಲೆ

# ಭಜನ ಕೌಸ್ತುಭ

## ಸಂಪುಟ—೧

## ದಾಸಕಕ್ಷ ಮತ್ತು ಯತಿಕಕ್ಷ

ಪ್ರಕಾಶಕರು
ಹೆಚ್.ಎಸ್. ಶ್ರೀನಿವಾಸಮೂರ್ತಿ
"ಶ್ರೀ ಉರಗಾದ್ರಿ", ನಂ. 61, 5ನೆಯ ಅಡ್ಡರಸ್ತೆ,
ನರಸಿಂಹರಾಜಾ ಕಾಲೋನಿ, ಬೆಂಗಳೂರು—560 019

**BHAJANA KOUSTUBHA- VOLUME NO ONE**
Crown 1/8 Size.
No. of Pages - 450.

ಪ್ರಥಮ ಮುದ್ರಣ : ಆಗಸ್ಟ್ 1993
ಪ್ರತಿಗಳ ಸಂಖ್ಯೆ : 1000

**ಬೆಲೆ : ನಲವತ್ತು ರೂಪಾಯಿಗಳು**

*ಪ್ರತಿಗಳು ದೊರೆಯುವ ಸ್ಥಳ :*

**ಹೆಚ್. ಎಸ್. ಶ್ರೀನಿವಾಸಮೂರ್ತಿ**
"ಶ್ರೀ ಉರಗಾದ್ರಿ", ನಂ. 61, 5ನೆಯ ಅಡ್ಡರಸ್ತೆ,
ನರಸಿಂಹರಾಜ ಕಾಲೋನಿ, ಬೆಂಗಳೂರು—560 019.

**ವೇದಾಂತ ಬುಕ್ ಹೌಸ್**
ಉಮಾ ಚಿತ್ರ ಮಂದಿರದ ಬಳಿ,
ಚಾಮರಾಜಪೇಟೆ,
ಬೆಂಗಳೂರು—560 018.

**ನ್ಯೂ ವೇದಾಂತ ಬುಕ್ ಹೌಸ್**
ನಂ. 65/2, ಆರ್.ಕೆ. ಪ್ಲಾಜಾ, 8ನೆಯ ಕ್ರಾಸ್,
ಮಲ್ಲೇಶ್ವರಂ,
ಬೆಂಗಳೂರು—560 003.

*ಮುದ್ರಣಕಾರರು :* ವ್ಯಾಸ ವೆಂಕಟ ಎಂಟರ್ ಪ್ರೈಸಸ್
ಬೆಂಗಳೂರು — 560 004.

*ಮುಖ ಚಿತ್ರ :* ಶ್ರೀ A.P.M. RAJ URS
ಸರಸ್ವತೀ ನಗರ, ಬೆಂಗಳೂರು — 560 040.

## ಶ್ರೀ ಪಾದಂಗಳವರ ಆಶೀರ್ವಚನ

ಶ್ರೀ ಭಂಡಾರಕೇರಿ ಪಲಿಮಾರು ಉಭಯ ಮಠಾಧೀಶರಾದ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರ ಕರಕಮಲ ಸಂಜಾತರಾದ ಶ್ರೀ ಶ್ರೀ ವಿದ್ಯೇಶ ತೀರ್ಥ ಶ್ರೀ ಪಾದಂಗಳವರ ಆಶೀರ್ವಚನ.

ಶ್ರೀ ಹೆಚ್.ಎಸ್. ಶ್ರೀನಿವಾಸಮೂರ್ತಿಯವರು "ಭಜನ ಕೌಸ್ತುಭ" ವೆಂಬ ಗ್ರಂಥವನ್ನು ಪ್ರಕಾಶನಗೊಳಿಸುತ್ತಿರುವುದು ಅತ್ಯಂತ ಅಭಿನಂದನೀಯವಾಗಿದೆ. ಈ ಗ್ರಂಥದಲ್ಲಿ ಶ್ರೀನಿವಾಸಮೂರ್ತಿಯವರು ನಾನಾ ದಾಸರು ಹಾಗೂ ಯತಿಪುಂಗವರ ಬಗೆಗಿನ ಜ್ಞಾನವರೇಣ್ಯರಿಂದ ರಚಿಸಲ್ಪಟ್ಟ ಕೀರ್ತನೆಗಳನ್ನು ಸಂಗ್ರಹಿಸಿದ್ದಾರೆ. ಇದಲ್ಲದೆ, ತಾರತಮ್ಯಕ್ಕನುಸಾರವಾಗಿ ಭಜನೆ ಮಾಡಲು ಉಪಯುಕ್ತಗಳಾದ ದೇವತಾ ತಾರತಮ್ಯಕ್ಕನುಗುಣವಾದ ಕೀರ್ತನೆಗಳನ್ನು ಇಲ್ಲಿ ಅಳವಡಿಸಿದ್ದು ಅತ್ಯಂತ ಉಪಯುಕ್ತವೆನಿಸಿದೆ. ಈ ಗ್ರಂಥವನ್ನು "ಭಾಗವತ ಕೀರ್ತನಾಸಾಗರ" ವೆಂದು ಹೇಳಿದರೆ ಅತಿಶಯೋಕ್ತಿವೆನಿಸಲಾರದು. ಭಜಕರು ಈ ಸಾಗರವನ್ನು ತಲುಪಿದರೆ, ಭಗವಂತ–ಭಾಗವತರ ಗುಣರತ್ನಗಳನ್ನು ತಮ್ಮ ಬುದ್ಧಿಯಲ್ಲಿ ಪಡೆಯುವಲ್ಲಿ ಯಶಸ್ವಿಯಾಗಬಲ್ಲರು. ಮೂರ್ತಿಯವರ ಪ್ರಕಾಶನ ಕಾರ್ಯವು ಹರಿ–ಗುರು–ದಾಸರಿಗೆ ಪ್ರಿಯವಾಗಿ ಸಫಲವಾಗಲಿ ಎಂದು ನಮ್ಮ ಉಪಾಸ್ಯಮೂರ್ತಿಯಾದ ಶ್ರೀ ಕೋದಂಡ ರಾಮಚಂದ್ರನನ್ನು ಈ ಸಂದರ್ಭದಲ್ಲಿ ವಿಶೇಷವಾಗಿ ಪ್ರಾರ್ಥಿಸುತ್ತೇವೆ.

ಇಂತೀ ನಾರಾಯಣ ಸ್ಮರಣೆಗಳು

ಮೊಕ್ಕಾಂ ಬೆಂಗಳೂರು
(ಚಾತುರ್ಮಾಸ್ಯ)
ದಿನಾಂಕ 3–8–1993

ಶ್ರೀ ವಿದ್ಯೇಶ ತೀರ್ಥರು
(ಸಹಿ)

# ಶ್ರೀ ಹರಿದಾಸ ಸಾಹಿತ್ಯ ಪ್ರಚಾರ ಗ್ರಂಥಮಾಲೆ

## ನಮ್ಮಲ್ಲಿ ದೊರೆಯುವ ಪುಸ್ತಕಗಳು

೧. ಶ್ರೀಮದ್ಧರಿಕಥಾಮೃತಸಾರ ಸಂಧಿ ೧ (ಮಂಗಳಾಚರಣ ಸಂಧಿ)
(ತೃತೀಯ ಮುದ್ರಣ) ...... ಬೆಲೆ: ೧೫ ರೂ.ಗಳು

೨. ,, ,, ಸಂಧಿ ೨ (ಕರುಣಾ ಸಂಧಿ)
(ದ್ವಿತೀಯ ಮುದ್ರಣ) ...... ಬೆಲೆ: ೨೫ ರೂ.ಗಳು

೩. ,, ,, ಸಂಧಿ ೬
(ಪಂಚಮಹಾಯಜ್ಞಸಂಧಿ) ...... ಬೆಲೆ: ೨೫ ರೂ.ಗಳು

೪. ,, ,, ಸಂಧಿ ೭
(ಪಂಚತನ್ಮಾತ್ರಾ ಸಂಧಿ) ...... ಬೆಲೆ: ೨೫ ರೂ.ಗಳು

೫. ,, ,, ಸಂಧಿ ೮
(ಮಾತೃಕಾ ಸಂಧಿ) ...... ಬೆಲೆ: ೨೫ ರೂ.ಗಳು

೬. ,, ,, ಸಂಧಿ ೯
(ವರ್ಣಪ್ರಕ್ರಿಯಾ ಸಂಧಿ) ...... ಬೆಲೆ: ೨೫ ರೂ.ಗಳು

೭. ,, ,, ಸಂಧಿ ೧೦
(ಸರ್ವಪ್ರತೀಕ ಸಂಧಿ) ...... ಬೆಲೆ: ೨೫ ರೂ.ಗಳು

೮. ,, ,, ಸಂಧಿ ೧೧
(ಸ್ಥಾವರಜಂಗಮ ಸಂಧಿ) ...... ಬೆಲೆ: ೩೦ ರೂ.ಗಳು

೯. ,, ,, ಸಂಧಿ ೧೨
(ನಾಡೀಪ್ರಕರಣ ಸಂಧಿ) ...... ಬೆಲೆ: ೩೦ ರೂ.ಗಳು

೧೦. ,, ,, ಸಂಧಿ ೧೩
(ನಾಮಸ್ಮರಣ ಸಂಧಿ) ...... ಬೆಲೆ: ೩೦ ರೂ.ಗಳು

ಅಚ್ಚಿನಲ್ಲಿ ೧೧. ಸಂಧಿ ೧೪ (ಪಿತೃಗಣ ಸಂಧಿ)
೧೨. ಸಂಧಿ ೧೫ (ಶ್ವಾಸಸಂಧಿ)

ಸಂಧಿ ೩, ೪ ಮತ್ತು ೫ ಪುನರ್ಮುದ್ರಣವಾಗಬೇಕಾಗಿವೆ.

೧೩. ಭಜನ ಕೌಸ್ತುಭ (ದ್ವಿತೀಯ ಸಂಪುಟ)
(ದೇವತಾ ತಾರತಮ್ಯ) ..... ಬೆಲೆ: ೩೦ ರೂ.ಗಳು

೧೪. ,, ,, (ತೃತೀಯ ಸಂಪುಟ)
(ಶ್ರೀ ಹರಿಯ ಪರವಾದ ಕೀರ್ತನೆಗಳ ಸಮಗ್ರ ಸಂಗ್ರಹ)
(ಅಚ್ಚಿನಲ್ಲಿ)

# ಪ್ರಕಾಶಕರ ನುಡಿ

ಬಹುದಿನಗಳ ಕನಸು ಈಗ ನನಸಾಗಿದೆ. ಭಗವನ್ನಾಮಕೀರ್ತನೆಯಲ್ಲಿ ಆಸಕ್ತರಾದ ನಮ್ಮ ವಾಚಕವೃಂದದವರು ಬಹು ದಿನಗಳಿಂದ ಕಾದು ನಿರೀಕ್ಷಿಸುತ್ತಿದ್ದ ಭಜನಕೌಸ್ತುಭ ಈಗ ಪ್ರಕಟವಾಗಿದೆ.

ಪ್ರಥಮ ಹಂತದಲ್ಲಿ ಈ ಕೀರ್ತನ ಸಂಗ್ರಹವನ್ನು ಸುಮಾರು 300 ಪುಟ ವ್ಯಾಪ್ತಿಯುಳ್ಳ ಪುಸ್ತಕವನ್ನಾಗಿ ಪ್ರಕಟಿಸುವ ಯೋಜನೆ ಇತ್ತು. ಆದರೆ ಹಂತ ಹಂತವಾಗಿ ತಾರತಮ್ಯ ಕ್ರಮದಲ್ಲಿ ಲಭ್ಯವಾಗಿರುವ ಕೀರ್ತನೆಗಳನ್ನು ಸಂಗ್ರಹಿಸುತ್ತಿರುವ ಸಮಯದಲ್ಲಿ ನಮ್ಮ ಪೂರ್ವೀಕರಿಂದ ಸಂಗ್ರಹಿಸಿಲ್ಪಟ್ಟ ಅಪೂರ್ವ ಕೀರ್ತನೆಗಳ ಹಸ್ತ ಪ್ರತಿಗಳಲ್ಲಿ ಮುದ್ರಿತವಾಗದಿರುವ ಅಪೂರ್ವ ಕೀರ್ತನೆಗಳು ದೊರೆತ ಕಾರಣದಿಂದ, ಅವುಗಳನ್ನು ಕ್ರಮವಾಗಿ ವಿಂಗಡಿಸಿ ಸಂಪಾದಿಸುವ ಕಾರ್ಯ ದೀರ್ಘಕಾಲ ಹಿಡಿಯಿತು. ಇದರಿಂದ ಪುಟಗಳ ವ್ಯಾಪ್ತಿ ಹೆಚ್ಚಿ ಸಂಗ್ರಹ ದೊಡ್ಡದಾಯಿತು. ಇದರಿಂದ ಪ್ರಕಟಿಸಲು ವಿಳಂಬವಾಯಿತು. ಈ ವಿಳಂಬಕ್ಕಾಗಿ ಸಹೃದಯರಾದ ತಮ್ಮಲ್ಲಿ ಕ್ಷಮೆ ಯಾಚಿಸುತ್ತೇನೆ.

ಈ ಗ್ರಂಥವನ್ನು ಎರಡು ಸಂಪುಟಗಳ ರೂಪದಲ್ಲಿ ಪ್ರಕಟಿಸಲಾಗಿದೆ. ದಾಸಕಕ್ಷ ಮತ್ತು ಯತಿ ಕಕ್ಷಗಳನ್ನು ಪ್ರಥಮ ಸಂಪುಟದಲ್ಲಿಯೂ, ದೇವತಾ ತಾರತಮ್ಯ ಕಕ್ಷವನ್ನು ದ್ವಿತೀಯ ಸಂಪುಟದಲ್ಲಿಯೂ ಅಳವಡಿಸಲಾಗಿದೆ. ದಾಸಕಕ್ಷದಲ್ಲಿ ಶ್ರೀಜಗನ್ನಾಥದಾಸಾರ್ಯರಿಂದ ಪ್ರಾರಂಭಿಸಿ ಶ್ರೀಪುರಂದರದಾಸ ವರೇಣ್ಯರಪರ್ಯಂತ ಅವರನ್ನು ಕುರಿತು, ಅವರ ಶಿಷ್ಯರುಗಳಿಂದ ರಚಿತವಾದ ಕೀರ್ತನೆಗಳನ್ನು ಸಂಗ್ರಹಿಸಲಾಗಿದೆ. ಯತಿಕಕ್ಷದಲ್ಲಿ ಮಠಗಳ ಗುರುಪರಂಪರಾ ಸ್ತೋತ್ರಗಳು ಆಯಾಯಾ ಮಠಗಳ ಯತಿಪರಂಪರೆಯ ವಿವರವಾದ ಪಟ್ಟಿ ಯತಿವರೇಣ್ಯರ ಪರವಾದ ಲಭ್ಯವಿರುವ ಕೀರ್ತನೆಗಳ ಬೃಹತ್ ಪ್ರಮಾಣದಲ್ಲಿ ಸಂಗ್ರಹ ಈ ವಿವರಗಳನ್ನು ಕೊಡಲಾಗಿದೆ.

ದ್ವಿತೀಯ ಸಂಪುಟದಲ್ಲಿ ಶ್ರೀ ವರಸಿದ್ಧಿ ವಿನಾಯಕನಿಂದ ಪ್ರಾರಂಭಿಸಿ ಶ್ರೀರಮಾದೇವಿಯರ ಪರ್ಯಂತ ಹಂತ ಹಂತವಾಗಿ ದೇವತಾ ತಾರತಮ್ಯ ಪರವಾದ ಕೀರ್ತನೆಗಳ ಬೃಹತ್ ಸಂಗ್ರಹವಿದೆ. ಈ ಭಾಗದಲ್ಲಿ ಮಾತ್ರ ಪ್ರತಿ ಕೀರ್ತನೆಗೂ ಪ್ರತಿಪದಾರ್ಥ, ಅರ್ಥವಿವರಣೆ, ವಿಶೇಷ ವಿಚಾರಾಂಶಗಳನ್ನು ಕೊಡಲಾಗಿದೆ. ಇದೇ ಈ ಪ್ರಕಟಣೆಯ ವೈಶಿಷ್ಟ್ಯ.

ಪ್ರತಿ ಸಂಪುಟವೂ 400 ಪುಟಗಳನ್ನು ಮೀರಿದೆ. ಪ್ರತಿ ಸಂಪುಟದ ಬೆಲೆ 30 ರೂಗಳು. ಕಾಗದ ಮತ್ತು ಮುದ್ರಣ ದರಗಳು ಏರಿರುವ ಈ ಕಾಲದಲ್ಲಿ ಈ ಮೌಲ್ಯ ಅತಿ ಕಡಿಮೆ ಎಂದೇ ಹೇಳಬಹುದು. ಕೀರ್ತನ ಸಂಗ್ರಹವು ಬಹು ಮಂದಿಯ ಕೈ ಸೇರುವ

ಮಹೋದ್ದೇಶದಿಂದ ಬೆಲೆ ಕಡಿಮೆ ಇಟ್ಟಿದೆ. ಎರಡು ಸಂಪುಟಗಳನ್ನು ಒಟ್ಟಿಗೆ ತೆಗೆದುಕೊಳ್ಳುವವರಿಗೆ 50 ರೂ ಬೀಳುವುದು. ಇದರಿಂದ 10 ರೂ. ರಿಯಾಯಿತಿ ದೊರೆಯುವುದು. ಈ ಸಂಪುಟವನ್ನು ಆಸ್ತೀಕ ವೃಂದದವರೆಲ್ಲಾ ಪಡೆದು, ಎರಡು ಸಂಪುಟಗಳನ್ನೂ ಕೊಳ್ಳಬೇಕಾಗಿ ವಿನಂತಿ. ಅನೇಕ ದೇವಸ್ಥಾನಗಳಲ್ಲಿ, ಮಠಗಳಲ್ಲಿ, ಮನೆಗಳಲ್ಲಿ, ಸಂಘಗಳಲ್ಲಿ, ವಾರದಲ್ಲಿ ಕೆಲವು ನಿಗದಿಯಾದ ದಿನಗಳು ಅಥವಾ ಪ್ರತಿದಿನ ಭಜನಾ ಕಾರ್ಯಕ್ರಮದ ವ್ಯವಸ್ಥೆ ಇದೆ. ಅವರಿಗೆಲ್ಲಾ ಈ ಸಂಪುಟಗಳು ಹೆಚ್ಚು ಪ್ರಯೋಜನವಾಗುವುದರಲ್ಲಿ ಸಂದೇಹವೇ ಇಲ್ಲ. ಸಕಲ ವಿಷಯಗಳೂ ಒಂದೇ ಕಡೆ ಕೇಂದ್ರೀಕೃತವಾಗಿ ದೊರೆಯುವುದೇ ಈ ಪ್ರಕಟಣೆಯ ವೈಶಿಷ್ಟ್ಯ.

ಇನ್ನು ಶ್ರೀ ಹರಿಯ ಪರವಾದ ಕೀರ್ತನೆಗಳನ್ನು ಬೇರೆ ಬೇರೆ ವಿಷಗಯಳಿಗನುಗುಣವಾಗಿ ವಿಂಗಡಿಸಿ, ತೃತೀಯ ಸಂಪುಟದ ರೂಪದಲ್ಲಿ ಮುಂದೆ ಪ್ರಕಟಿಸಿರುವ ಉದ್ದೇಶವಿದೆ. ಈ ಸಂಪುಟದ ಪುಟಗಳ ವ್ಯಾಪ್ತಿಯ 800 ರಿಂದ 1000 ವಾಗಬಹುದು.

**ಗಮನಿಸಿ :**

ಹಿಂದೆ ಕೆಲವರು ಭಜನ ಕೌಸ್ತುಭಕ್ಕಾಗಿ 15 ರೂ. ಮುಂಗಡ ಹಣ ಪಾವತಿ ಮಾಡಿದ್ದರು. ಈಗ ಎರಡು ಸಂಪುಟಗಳಿಂದ ಒಟ್ಟು 50 ರೂ. ಆಗುವುದರಿಂದ, ಅವರೆಲ್ಲರೂ ಉದಾರ ಮನಸ್ಸಿನಿಂದ 35 ರೂ ಕೊಟ್ಟು ಎರಡು ಸಂಪುಟಗಳನ್ನು ಪಡೆಯಬೇಕಾಗಿ ವಿನಂತಿ. ಅಧಿಕ ಸಂಖ್ಯೆಯಲ್ಲಿ ಸಂಗ್ರಹವಾಗಿರುವ ಕೀರ್ತನೆಗಳು ಅವರಿಗೆ ಲಭ್ಯವಾಗುವುವು. ಇದೇ ರೀತಿಯಲ್ಲಿ ಮುಂದೆ ಪ್ರಕಟವಾಗಲಿರುವ ತೃತೀಯ ಸಂಪುಟಕ್ಕೂ ಎಲ್ಲರಿಂದ ಸಹಕಾರ ದೊರೆಯಲಿ ಎಂದು ಮನವಿ.

**ಕೃತಜ್ಞತೆಗಳು :**

(1) ಮುಖಪುಟದ ಶ್ರೀ ಪಾಂಡುರಂಗ ವಿಠ್ಠಲನ ಅಂದವಾದ ಚಿತ್ರವನ್ನು ತಯಾರಿಸಿಕೊಟ್ಟ ಸುಪ್ರಸಿದ್ಧ ಕಲಾವಿದರಾದ ಎ.ಪಿ.ಎಮ್. ರಾಜ್ ಅರಸ್ ಅವರಿಗೆ ನಮ್ಮ ಧನ್ಯವಾದಗಳು.

(2) ಮುದ್ರಕರಾದ ಶ್ರೀ ಗುರುಶಾಂತ ಮೂರ್ತಿಯವರಿಗೂ ಪ್ರಕಾಶ ಪಡಿಸಿದ ಶ್ರೀ ವ್ಯಾಸ ವೆಂಕಟ ಎಂಟರ್ ಪ್ರೈಸಸ್ ಮಾಲೀಕರಾದ ಶ್ರೀ ಪಿ.ಆರ್.ಎಮ್. ದೇಸಾಯಿಯವರಿಗೂ ನಾನು ಋಣಿ.

ಇಂತೀ ವಿಜ್ಞಾಪನೆಗಳು

ಬೆಂಗಳೂರು ಹೆಚ್.ಎಸ್. ಶ್ರೀನಿವಾಸಮೂರ್ತಿ(ಪ್ರಕಾಶಕರು)

25–6–1993 (ಹರಿದಾಸ ಪಾದಪದ್ಮಾರಾಧಕ)

# ಕೀರ್ತನಾನುಕ್ರಮಣಿಕೆ



## ದಾಸಕಕ್ಷ ಪ್ರಾರಂಭ

### ೧ ಶ್ರೀ ಜಗನ್ನಾಥ ದಾಸವರೇಣ್ಯರು

## ೨. ಶ್ರೀ ಮೋಹನದಾಸವರ್ಯರು



೧೫, ೧೬ ....... ೨೩ ಹೀಗೆ ಕ್ರಮಸಂಖ್ಯಾ ತಪ್ಪಾಗಿ ಬಿದ್ದಿದೆ.

ಕ್ರಮಸಂಖ್ಯೆ ೨೪ರಿಂದ ೩೭ ಎಂದು ತಪ್ಪಾಗಿ ಬಿದ್ದಿದೆ.

## ೬. ಶ್ರೀ ಕನಕದಾಸರು



## ೭. ಶ್ರೀ ಪುರಂದರದಾಸವರ್ಯರು



ಕ್ರಮಸಂಖ್ಯೆ ೩೮ರಿಂದ ೫೧ ಎಂದು ತಪ್ಪಾಗಿ ಬಿದ್ದಿದೆ.

## ದಾಸಕಕ್ಷಿ ಸಮಾಪ್ತಿ

॥ ಶ್ರೀ ಮಧ್ವೇಶಾರ್ಪಣಮಸ್ತು ॥

ಕ್ರಮಸಂಖ್ಯೆ ೫೨ರಿಂದ ೬೩ ಎಂದು ತಪ್ಪಾಗಿ ಮುದ್ರಿತವಾಗಿದೆ.

# (೨) ಯತಿವರೇಣ್ಯರ ಪರವಾದ ಕೀರ್ತನೆಗಳ ಸಂಗ್ರಹ



---

ಕ್ರಮಸಂಖ್ಯೆ ೬೪ರಿಂದ ೬೮ ಎಂದು ತಪ್ಪಾಗಿ ಮುದ್ರಿತವಾಗಿದೆ.

## ೩. ಶ್ರೀಸತ್ಯವೀರ ತೀರ್ಥರು



## ೪. ಶ್ರೀಸತ್ಯಕಾಮತೀರ್ಥರು



## ೫. ಶ್ರೀಸತ್ಯಧರ್ಮತೀರ್ಥರು



## ೬. ಶ್ರೀಸತ್ಯವರತೀರ್ಥರು



## ೭. ಶ್ರೀಸತ್ಯಸಂಧತೀರ್ಥರು



## ೮. ಶ್ರೀಸತ್ಯಭೋಧತೀರ್ಥರು



---
ಕ್ರಮಸಂಖ್ಯೆ ೭೦ರಿಂದ ೭೯ ಎಂದು ತಪ್ಪಾಗಿ ಮುದ್ರಿತವಾಗಿದೆ.

## ೯. ಶ್ರೀಸತ್ಯಪ್ರಿಯತೀರ್ಥರು



## ೧೦. ಶ್ರೀಸತ್ಯಪೂರ್ಣತೀರ್ಥರು



## ೧೧. ಶ್ರೀರಘೂತ್ತಮತೀರ್ಥರು



# ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಮಠದ ಯತಿವರ್ಯರ ಪರಂಪರೆ



* ಕೀರ್ತನೆಗಳ ಕ್ರಮಸಂಖ್ಯೆ ೮೦ರಿಂದ ೮೮ ಎಂದು ತಪ್ಪಾಗಿ ಮುದ್ರಿತವಾಗಿದೆ.

## ೯. ಶ್ರೀ ವಾದೀಂದ್ರ ತೀರ್ಥರು



## ೧೦. ಶ್ರೀ ರಾಘವೇಂದ್ರ ಗುರುಸಾರ್ವಭೌಮರು

## ಶ್ರೀವಾದಿರಾಜ ಗುರುಸಾರ್ವಭೌಮರು

## ಶ್ರೀವ್ಯಾಸರಾಜಗುರುಸಾರ್ವಭೌಮರು

## ಶ್ರೀಪಾದರಾಜಗುರು ಸಾರ್ವಭೌಮರು



ಕೀರ್ತನೆಗಳ ಕ್ರಮಸಂಖ್ಯೆ ೧೩೮ರಿಂದ ೧೪೩ ಎಂದು ತಪ್ಪಾಗಿ ಮುದ್ರಿತವಾಗಿದೆ.

## ಶ್ರೀಬ್ರಹ್ಮಣ್ಯತೀರ್ಥರು



## ಶ್ರೀಜಯತೀರ್ಥರು



ಕೀರ್ತನೆಗಳ ಕ್ರಮಸಂಖ್ಯೆ ೧೪೪ರಿಂದ ೧೪೫ ಎಂದು ತಪ್ಪಾಗಿ ಮುದ್ರಿತವಾಗಿದೆ.

## ಶ್ರೀ ಅಕ್ಷೋಭ್ಯತೀರ್ಥರು

## ಶ್ರೀಮಾಧವತೀರ್ಥರು



## ಶ್ರೀ ನರಹರಿತೀರ್ಥರು



## ಶ್ರೀ ಪದ್ಮನಾಭತೀರ್ಥರು



### ಶ್ರೀ ಮದಾನಂದತೀರ್ಥಭಗವತ್ಪಾದರು

## ಶ್ರೀ ಭಗವಾನ್ ವೇದವ್ಯಾಸರು



ಕ್ರಮಸಂಖ್ಯೆ ೨೩೫ರಿಂದ ೨೩೮ ಎಂದು ತಪ್ಪಾಗಿ ಮುದ್ರಿತವಾಗಿದೆ.

॥ ಶ್ರೀ ಮಧ್ವೇಶಾರ್ಪಣಮಸ್ತು ॥

* ಕೀರ್ತನೆಗಳ ಕ್ರಮಸಂಖ್ಯೆ ೨೩೯ರಿಂದ ೨೪೨ ಎಂದು ತಪ್ಪಾಗಿ ಮುದ್ರಿತವಾಗಿದೆ.

॥ ಶ್ರೀಃ ಹರಿಃ ಓಂ ॥
॥ ಶ್ರೀ ಲಕ್ಷ್ಮೀವೆಂಕಟೇಶ್ವರಾಯ ನಮಃ॥

# ಧ್ಯಾನಶ್ಲೋಕಗಳು

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ॥ ೧

ಜಲಜೇಷ್ಟನಿಭಾಕಾರಂ ಜಗದೀಶ ಪದಾಶ್ರಯಂ ।
ಜಗತೀತಲ ವಿಖ್ಯಾತಂ ಜಗನ್ನಾಥಗುರುಂ ಭಜೇ ॥ ೨

ಭೂಪಾಲನತಪಾದಾಬ್ಜಂ ಪಾಪಾಲಿಪರಿಹಾರಿಣಂ ।
ಗೋಪಾಲದಾಸಮೀಡೇಽಹಂ ಗೋಪಾಲಹರಿದರ್ಶನಂ ॥ ೩

ಮೊಹಭಯ ದುಃಖಾದಿದೂರಂ ಲೋಹಲೋಷ್ಟಸಮೇಕ್ಷಣಂ ।
ಮಾಹಿತಾಂಘ್ರಿಸರೋಜಭೃಗಂ ಮೋಹನಾರ್ಯಗುರುಂ ಭಜೇ॥ ೪

ಅಜ್ಞಾನತಿಮಿರಚ್ಛೇದಂ ಬುದ್ಧಿಸಂಪತ್ಪ್ರದಾಯಕಂ।
ವಿಜ್ಞಾನವಿಮಲಂ ಶಾಂತಂ ವಿಜಯಾಖ್ಯಗುರುಂ ಭಜೇ॥ ೫

ಮನ್ಮನೋಭೀಷ್ಟವರದಂ ಸರ್ವಾಭೀಷ್ಟಫಲಪ್ರದಂ ।
ಪುರಂದರಗುರುಂ ವಂದೇ ದಾಸಶ್ರೇಷ್ಠಂ ದಯಾನಿಧಿಂ॥ ೬

ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯಚ ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥ ೭

ಕಾಮಧೇನುರ್ಯಥಾಪೂರ್ವಂ ಸರ್ವಾಭೀಷ್ಟ ಫಲಪ್ರದಂ ।
ತಥಾಕಲೌ ವಾದಿರಾಜ ಶ್ರೀಪಾದೋಽಭೀಷ್ಟದಃ ಸತಾಂ॥ ೮

ಅರ್ಥಿಕಲ್ಪಿತಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥ ಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ॥ ೯

ಯೋ ವಿಪ್ರಲಂಭ ವಿಪರೀತಮತಿ ಪ್ರಭೂತ ।
ವಾದಾನ್ನಿರಸ್ಯ ಕೃತವಾನ್ ಭುವಿ ತತ್ತ್ವವಾದಮ್ ॥
ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತಂ
ಆನಂದತೀರ್ಥಮುನಿವರ್ಯಮಹಂ ನಮಾಮಿ॥ ೧೦

ಬ್ರಹ್ಮಾಂತಾ ಗುರವಃ ಸಾಕ್ಷಾದಿಷ್ಟಂ ದೈವಂ ಶ್ರಿಯಃಪತಿಃ।
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ॥ ೧೧

ಭವತಿ ಯದನುಭಾವಾ ಏಡಮೂಕೋಽಪಿ ವಾಗ್ಮೀ ।
ಜಡಮತಿರಪಿ ಜಂತುರ್ಜಾಯತೇ ಪ್ರಾಜ್ಞಮೌಲಿಃ ।
ಸಕಲ ವಚನ ಚೇತೋ ದೇವತಾ ಭಾರತೀ ಸಾ ।
ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ ॥ ೧೨

ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ ।
ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮಾನ್ ಗುರುಗುಣ ।
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟ ಭಗವನ್ ।
ನಮಃ ಶ್ರೀಮನ್ ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ ॥ ೧೩

ಶ್ರೀಮತ್ ಸೌಭಾಗ್ಯಜನನೀಂ ಸ್ತೌಮಿ ಲಕ್ಷ್ಮೀಂ ಸನಾತನೀಮ್ ।
ಸರ್ವಕಾಮಫಲಾವಾಪ್ತಿಸಾಧನೈಕ ಸುಖಾವಹಾಮ್॥ ೧೪

ಸಮಚರಣ ಸರೋಜಂ ಸಾಂದ್ರನೀಲಾಂಬುಧಾಮಂ ।
ಜಘನ ನಿಹಿತಪಾಣಿಂ ಮಂಡನಂ ಮಂಡನಾನಾಂ॥
ತರುಣ ತುಲಸೀಮಾಲಾಕಂಧರಂ ಕಂಜನೇತ್ರಂ।
ಸದಯಧವಲಹಾಸಂ ವಿಠ್ಠಲಂ ಚಿಂತಯಾಮಿ ॥ ೧೫

ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥಪ್ರದಯಿನೇ ।
ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯತೇ ನಮಃ॥ ೧೬

ಆಪಾದಮೌಳಿಪರ್ಯಂತಂ ಗುರೂಣಾಂ ಆಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿಧ್ಯಂತಿ ಚ ಮನೋರಥಾಃ॥ ೧೭

॥ ಶ್ರೀಕೃಷ್ಣಾರ್ಪಣಮಸ್ತು ॥

## ೧

## ಉಗಾಭೋಗ

ಎಲ್ಲಿ ಹರಿಕಥಾಪ್ರಸಂಗವೋ ।
ಅಲ್ಲಿ ಗಂಗಾ ಯಮುನೆ ಗೋದಾ ಸರಸ್ವತೀ ಸಿಂಧು ।
ಎಲ್ಲ ತೀರ್ಥಗಳು ಬಂದು ಎಣೆಯಾಗಿ ನಿಲ್ಲುವವು ।
ವಲ್ಲಭ ಶ್ರೀಪುರಂದರವಿಠ್ಠಲ ಮೆಚ್ಚುವನು ॥

## ೨

## ತಾರತಮ್ಯಪದ (ಉಗಾಭೋಗ)

ಸತತ ಗಣನಾಥ ಸಿದ್ಧಿಯನೀವ ಕಾರ್ಯದಲಿ ।
ಮತಿ ಪ್ರೇರಿಸುವಳು ಪಾರ್ವತಿದೇವಿ ಮು ।
ಕುತಿ ಪಥಕೆ ಮನವೀವ ಮಹಾರುದ್ರದೇವ ಹರಿ ಭ–।
ಕುತಿದಾಯಕಗಳು ಭಾರತೀದೇವಿ ಯು ।
ಕುತಿಶಾಸ್ತ್ರಗಳಲ್ಲಿ ವನಜಸಂಭವನರಸಿ।
ಸತ್ಕರ್ಮಗಳ ನಡೆಸಿ ಸುಜ್ಞಾನಮತಿಯಿತ್ತು ।
ಗತಿಪಾಲಿಸುವ ನಮ್ಮ ಪವಮಾನನು ॥
ಚಿತ್ತದಲಿ ಆನಂದಸುಖವನೀವಳು ರಮಾ ।

ಭಕ್ತಜನರೊಡೆಯ ನಮ್ಮ ಪುರಂದರವಿಠ್ಠಲನು ।
ಸತತ ಇವರೊಳು ನಿಂತೀಕೃತಿಯ ನಡೆಸುವನು ॥

೩

## ದೇವ ಗುರುದಾಸಪರಂಪರಾ ಸ್ತೋತ್ರ

ಪಾಕಶಾಸನ ಮುಖ್ಯ ಸಕಲ ದಿ ।
ವೌಕಸರಿಗಭಿನಮಿಪೆ ತುಷಿಗಳಿ ।
ಗೇಕಚಿತ್ತದಿ ಪಿತೃಗಳಿಗೆ ಗಂಧರ್ವ ಕ್ಷಿತಿಪರಿಗೆ ॥
ಆ ಕಮಲನಾಭಾದಿ ಯತಿಗಳ ।
ನೀಕಕಾನಮಿಸುವೆನು ಬಿಡದೆ ರ ।
ಮಾಕಳತ್ರನ ದಾಸವರ್ಗಕೆ ನಮಿಪೆನನವರತ ॥

(ಶ್ರೀಮದ್ಹರಿಕಥಾಮೃತಸಾರ–ಮಂಗಳಾಚರಣಸಂಧಿ ಪದ್ಯ–೧೨)

೪

## ಗುರುಪರಂಪರೆ (ಉಗಾಭೋಗ)

ಶ್ರೀಪತಿಯ ನಾಭೀಕಮಲದಿ ಅಜ ಜನಿಸಿದನು ।
ಅಜನ ಮಾನಸಪುತ್ರರೇ ಸನಕಾದಿಗಳು ।
ಸನಕಾದಿಗಳ ಶಿಷ್ಯರೇ ದೂರ್ವಾಸರು ।
ದೂರ್ವಸರ ಶಿಷ್ಯರೇ ಪರತೀರ್ಥರು ।
ಪರತೀರ್ಥರ ಶಿಷ್ಯರೇ ಸತ್ಯಪ್ರಜ್ಞರು ।
ಸತ್ಯಪ್ರಜ್ಞರ ಶಿಷ್ಯರೇ ಪ್ರಾಜ್ಞತೀರ್ಥರು ।
ಪ್ರಾಜ್ಞತೀರ್ಥರ ಶಿಷ್ಯರೇ ಅಚ್ಯುತಪ್ರೇಕ್ಷರು ।
ಅಚ್ಯುತಪ್ರೇಕ್ಷರ ಕರಸಂಜಾತರೇ ಮಹಾಭಾಷ್ಯಕಾರರು ।
ಮಹಾಭಾಷ್ಯಕಾರರೇ ಗುರುಮುಖ್ಯಪ್ರಾಣರು ।

ಗುರುಮುಖ್ಯಪ್ರಾಣಪತಿ ನಮ್ಮ ।
ಪುರಂದರವಿಠ್ಠಲನ ದಾಸರಿಗೆ ನಮೋ ನಮಃ ॥

# ದಾಸಕಕ್ಷೆ ಪ್ರಾರಂಭ

## ೧. ಶ್ರೀ ಜಗನ್ನಾಥದಾಸವರೇಣ್ಯರು

ಧ್ಯಾನಶ್ಲೋಕ :

ಜಲಜೇಷ್ಠ ನಿಭಾಕಾರಂ ಜಗದೀಶ ಪದಾಶ್ರಯಂ ।
ಜಗತೀತಲ ವಿಖ್ಯಾತಂ ಜಗನ್ನಾಥಗುರುಂ ಭಜೇ ॥ ೧

ಙ

ವೃಂದಗಾನ

(ಪ್ರಾಣೇಶವಿಠ್ಠಲಾಂಕಿತ)

ತಿಳಿಯನು ಎಂದೆಂದಿಗನ್ಯ–ರಂಗ
ಒಲಿದ ದಾಸರು ಜಗನ್ಮಾನ್ಯ॥ ಪ

ಅಲವ ಮಹಾತ್ಮರೆಂಬ ಪುಣ್ಯ–ಕೀರ್ತಿ
ಗಳಕೇಳ್ವನವ ಧನ್ಯ॥ ಅ

ಹಿರಣ್ಯಕಶಿಪುಜ ಸಹ್ಲಾದ–ನೇ
ಎರಡನೆಯ ಜನ್ಮದಿ ಶಲ್ಯನಾದ
ಗುರುವಾದಿರಾಜರನರ್ಚಿಸಿದ–ಪುರಂ
ದರದಾಸರಾಯರಲ್ಲುದಿಸಿದ॥ ೧

ಐದನೆಯ ರೂಪವೀಗಿದಂತೆ–ಬ
ಹುದು ಏಳುಜನ್ಮ ಮುಂದಂತೆ

ಮೋದಾಭಿವೃದ್ಧಿಗೆನೋ ಅಂತೆ–ಎಂಬ
ವಾದಿಗಿದೆಲ್ಲ ಅಂತೆ-ಕಂತೆ॥ ೨

ದಾಸಕೂಟಸ್ಥರಿಗೀ ಮಾತು–ಕೆಲವು
ದೇಶಗಳಲ್ಲಿ ಅನುಭವವಾಯ್ತು
ಈಸು ಕಥಾಲಾಪವಲ್ಲಾಯಿತು–ಶ್ರೀ ಪ್ರಾ
ಣೇಶ ವಿಠ್ಠಲನಲ್ಲಿಹನಾತು॥ ೩



೬

(ಶ್ರೀದವಿಠ್ಠಲಾಂಕಿತ)

ರಾಗ–ಮೋಹನ ಅಟ್ಟತಾಳ

(ಈ ಪದವನ್ನು ಒಟ್ಟಾಗಿಯೂ ಮತ್ತು ಪ್ರತ್ಯೇಕವಾಗಿಯೂ ಹೇಳಬಹುದು)

ಶ್ರೀಜಗನ್ನಾಥದಾಸ–ನಮಿಪೆ ಗುರು
ರಾಜ–ಸಾತ್ವಿಕವಪುಷ॥ ಪ

ಈ ಜಗದೊಳು ನಿಮಗೆಣೆಗಾಣೆ ಸತತ–ನಿ
ರ್ವ್ಯಾಜದಿ ಹರಿಯ ಗುಣೋಪಾಸನೆ ಮಾಳ್ಪ॥ ಅ

ಹರಿದಾಸಕುಲವರ್ಯ–ರೆನಿಸಿಕಲ್ಪ
ತರುವಂದದಿ ಚರ್ಯ
ಚರಿಸುತ ಧರೆಯೊಳು ಮೆರೆವ ಮಹಾತ್ಮರ
ಚರಣೇಂದೀವರಯುಗ್ಮ ದರುಶನ ಮಾಳ್ಪರ ॥

ದುರಿತರಾಶಿಗಳಿರಗೊಡದೆ ನೆರೆ
ಪರಮಮುಕ್ತಿಯದಾರಿ ತೋರುತ
ಸಿರಿಸಹಿತ ಹರಿ ತೋರುವಂದದಿ
ಕರುಣಮಾಳ್ಪ ಸುಗಣಮಹೋದಧಿ॥ ೧

ರವಿಯು ಸಂಚರಿಸುವಂತೆ–ಭೂವಲಯದಿ
ಕವಿಶ್ರೇಷ್ಠ ಚರಿಸಿದೆಯೋ
ಅವಿರುದ್ಧ ತ್ರಯೀಜ್ಞಾನ ಪ್ರವಹಗಳಿಂದಲಿ
ಭುವನೈಕ ವೇದ್ಯನ ಶ್ರವಣಭಕುತಿಯಿಂದ ॥
ದಿವಸ ದಿವಸದಿ ಪ್ರೀತಿ ಬಡಿಸುತ
ಧ್ರುವವರದನಂಘ್ರಿಗಳಿಗರ್ಪಿಸಿ
ಭುವನ ಪಾವನ ಮಾಡಲೋಸುಗ
ಅವನಿ ತಳದಿ ವಿಹರಿಸುತಿಹ ಗುರು ॥ ೨

ಅಹೋ ರಾತ್ರಿ ಕ್ಷಣ ಬಿಡದೆ–ಸನ್ಮನದಿ ಹೃ
ದ್ಗುಹಾಧೀಶನನು ಬಿಡದೆ
ಸಹನ ಗುಣಗಳನ್ನು ಅನುದಿನ ಸ್ಮರಿಸುತ್ತ
ಸಹನದಿ ಶಮದಮಯಮ ನಿಯಮಗಳನ್ನು॥
ವಹಿಸಿ ಶ್ರೀದವಿಠ್ಠಲನಂಘ್ರಿಯ
ಮಹಿಮೆ ತೋರುತ ಪೂಜಿಸುತ ಬಲು
ಮಹಿತ ಪೂರ್ಣಾನಂದತೀರ್ಥರ
ವಿಹಿತಶಾಸ್ತ್ರಗಳರಿತು ಬೋಧಿಪ॥ ೩



## ೭

## (ಗುರು ಶ್ರೀಶವಿಠ್ಠಲಾಂಕಿತ)

ರಾಗ- ಝಂಪೆತಾಳ

ಎಂತು ಪೊಗಳಲಿ ಜಗನ್ನಾಥದಾಸರನ
ಕಂತುಪಿತ ಒಲಿದಿವರ ಅಂತರಂಗದಿ ಪೊಳೆವ ॥ ಪ

ಶ್ರೀರಮಾದೇವಿ ಪತಿಯೊಡನೆ ಇವರಲಿ ನಿಂತು
ಈರೆರಡು ದೇಹ ಅವ್ಯಕ್ತಸಹಿತ
ಆರು ನಾಲಕು ತತ್ತ್ವದಭಿಮಾನಿಗಳಕೂಡಿ
ಮೂರುಗುಣಕಾರ್ಯಗಳ ಮಾಡಿ ತೋರ್ಪರು ಸುಖವ॥ ೧

ಚತುರಮುಖ ವಾಯು ನಿಜ ಸತಿಯರಿಂದೊಡಗೂಡಿ
ಇತರ ದೇವತೆಗಳು ಸತತ ಇದ್ದು
ವಿಹಿತಮಹಿಮನ ಸೇವಿಸುತಲಿ ಸುಜ್ಞಾನವನು
ಹಿತದಿಂದಲಿವರಿಗಿತ್ತತಿ ತೋಷಪಡಿಸುವರು॥ ೨

ಈ ಪರಿ ನಿರಂತರದಿ ಆಪಾದಮೌಳಿ ತವ
ಕಾ ಪಯೋಜಜ ಮುಖರ ರೂಪಗಳಲಿ
ಆ ಪರಮಪುರುಷನ ಸುವ್ಯಾಪಾರ ನೋಡುತಲಿ
ಅಪಾರಮಹಿಮನ ಸ್ವರೂಪ ಸ್ಮರಿಸುತಲಿ॥ ೪

ಈ ಸುಮನಸರ ಮಹಿಮೆ ಸೋಸಿನಲಿ ತಿಳಿದವರ
ದಾಸನಾದವನು ಅಘನಾಶವಹುದು
ಕಾಸಿನಾಶೆಗೆ ನರರ ದಾಸನಾದವನು ಗುರು
ಶ್ರೀಶವಿಠ್ಠಲನ ನಿಜ ದಾಸರನು ಬಲ್ಲನೆ॥ ೫



## ೮

## (ಕಮಲಾಪತಿವಿಠ್ಠಲಾಂಕಿತ)

ರಾಗ–ಕಾಪಿ ಅಟ್ಟತಾಳ

ಅಂಬುಜಾಕ್ಷಿ ಸ್ತಂಭದಿಹನ್ಯಾರೇ–ಸಾರೇ ॥ ಪ

ನಂಬಿ ಭಜಿಸುವ ಭಕುತರ ಮನದ
ಹಂಬಲ ನೀಡುವರೆ–ನೀರೇ॥ ಅ

ಸುರರೊಡೆಯನೋಲ್ ಪರಿಪರಿಯಲೈ
ಶ್ವರ್ಯದಿಂ ರಾಜಿಸುವರ್ಯಾರೇ
ಹರಿಕಥಾಮೃತ ಗ್ರಂಥ ವಿರಚಿಸಿ
ಧರಣಿಸುರರುದ್ಧರಿಸಿದವರೆ॥

ಫುಲ್ಲಲೋಚನೆ ಬಲ್ಲೆಯಾ ಇವ
ರಿಲ್ಲಿರುವ ಕಾರಣವಿದೇನೆ
ಫುಲ್ಲನಾಭನ ಪ್ರಡುಕುತಲೀ
ಪ್ರಹ್ಲಾದನನುಜ ಸಹ್ಲಾದರಿವರೆ॥ ೧

ಜಲಜ ತುಳಸಿಮಣಿ ಸುಮಾಲಿಕೆ
ಗಳದಿ ಧರಿಸಿಹನ್ಯಾರೆ–ನೀರೇ
ಕಲಿಯುಗದಿ ಕಮಲಾಪತಿವಿ–
ಠಲನ ಒಲಿಸಿದಿಳೆಯೊಳಗೆ ಮೆರೆವರೆ ॥ ೩



೬

(ಶಾಮಸುಂದರಾಂಕಿತ)

ರಾಗೆ–ಯದುಕುಲಕಾಂಬೋಧಿ ಅಟ್ಟತಾಳ

(ವೃಂದಗಾನ : "ರಾಘವೇಂದ್ರಗುರುರಾಯರ ಸೇವಿಸಿರೋ" ಎಂಬಂತೆ)

ರಂಗ ಒಲಿದ ರಾಯರ ನೀ ನೋಡೋ–ಅಂತ
ರಂಗದಿ ಪಾಡೋ॥ ಪ

ಭಂಗಪಡಿಪ ದುರಿತಂಗಳ ಈಡ್ಯಾಡೋ–ಸತ್
ಸಂಗವ ಬೇಡೋ॥ ಅ

ಹಿಂದೆ ಮೂರೊಂದವತಾರ ಧರಿಸಿದಾತ–
ಇದು ಪಿರಿಯರ ಮಾತ
ಬಂದ ಮರಳಿ ಮಹೀತಲದಿ ಜಗನ್ನಾಥ–
ದಾಸರ್ಯ ಪ್ರಖ್ಯಾತ
ತಂದೆ ನಮಗೆ ತಿಳಿ ಎಂದೆಂದಿಗೂ ಈತ–
ಆನಂದ ಪ್ರದಾತ ॥ ೧

ಬಣ್ಣಿಸಲೆನಗಿನ್ನೊಶವೆ ಇವರ ಚರಿಯಾ–
ಜಗದೊಳಗಾಶ್ಚರ್ಯಾ
ಕಣ್ಣುಗಳಿಂದ ಕಾಣುತ ಪೂರ್ಣಾಯ್ಯ–
ತಾನಾಗಿ ವಿಧೇಯ
ಧನ್ಯನೆನಿಸಿ ಸತ್ಪುಣ್ಯ ಪಡೆದುದರಿಯಾ–
ಪುಸಿಯಲ್ಲವೋ ಖರೆಯಾ ॥ ೨

ದಾಸಾರ್ಯರಾ ವಾಸಗೈದ ಸ್ಥಾನ
ಗಯ ಕಾಶಿ ಶಮಾನ

ಲೇಸುಭಕ್ತಿಲಿ ಸೇವಿಸಲನುದಿನ–
ಕೊಡುವರು ಸುಜ್ಞಾನ
ಈ ಸನ್ಮಹಿಮರ ದೂಷಿಸುವನೆ ಶ್ವಾನ
ಯಾತಕನುಮಾನ ॥ ೩

ನಿಗಮವಾಣಿಯನುಸಾರ ನಿರ್ಮಿಸಿರುವ–
ದೇಹಾಖ್ಯರಥವ
ಸೊಗಸಿಲಿಂದ ತಾನೇರಿ ನಗುತ ಬರುವ–
ಚತುರ್ದಿಕ್ಕಿಲಿ ಮೆರೆವ
ಮಿಗೆ ವಿರೋಧಿಸುವ ಪಗೆಗಳ ಪಲ್ಮುರಿವ
ಪೊಗಳುವರಘ ತರಿವ॥ ೪

ಶ್ಯಾಮಸುಂದರನ ಸುಕಥಾಮೃತಸಾರ–
ರಚಿಸಿದ ಬಹು ಚತುರ
ಪಾಮರಜನರನು ಪ್ರೇಮದಿ ಉದ್ಧಾರ
ಮಾಡಲು ಗಂಭೀರ
ಶ್ರೀಮನ್ಮಾನವಿ ಕ್ಷೇತ್ರವೆ ನಿಜಾಗಾರ–
ವೆಂದೆನಿಸಿದ ಧೀರ॥ ೫



೧೦

(ಕಾರ್ಪರ ನರಹರಿ ಅಂಕಿತ)

ರಾಗ–ಶಂಕರಾಭರಣ ಆದಿತಾಳ

ಸೇರಿ ಸುಖಿಸು ಮಾನವ
ಗುರು ಚರಣ ಸರೋಜವ॥ ಪ

ಸೇರಿದ ಶರಣರ ಘೋರಪಾತಕವೆಂಬೊ
ವಾರಿದಗಣಕೆ ಸಮೀರ ಜಗನ್ನಾಥ
ಸೂರಿವರ್ಯ ದಾಸಾರ್ಯರಂಘ್ರಿಯನೂ॥ ಅ

ತಾರತಮ್ಯವ ತಿಳಿಯದೀ–ಕಲಿಯುಗದಿ ಮುಕ್ತಿ
ದಾರಿಗಾಣದೆ ಭವದಿ–ಬಿದ್ದ ಸಜ್ಜನೋ
ದ್ಧಾರಮಾಡಲು ದಯದೀ–ಬ್ಯಾಗವಟದೀ ॥
ನಾರಸಿಂಹಾಖ್ಯ ವಿಪ್ರಾಗಾರದೊಳುದ್ಭವಿಸಿ
ಶ್ರೀರಮಾಪತಿಯ ಚಾರುಕಥಾಮೃತ
ಸಾರವ ಧರೆಯೊಳು ಬೀರಿದಂಥವರ॥ ೧

ಮೇದಿನಿಯೊಳು ಚರಿಸಿ–ವಾಕ್ಯಾರ್ಥದಿ ಬಹು ದು
ರ್ವಾದಿಗಳನೆ ಜಯಿಸಿ–ಎನಿಸಿದರು ಪೂರ್ಣ–
ಭೋದ ಮತಾಬ್ಧಿಗೆ ಶಶಿ–ನೃಪಮಾನ್ಯರೆನಿಸಿ ॥
ಶ್ರೀದಪ್ರಹ್ಲಾದಾನುಜ ಸಹ್ಲಾದರೆ ಇವರೆಂದು
ಸಾದರದಿ ಬಿಡದೆ ಪಾದಪಂಕಜಾ
ರಾಧಕರಿಗೆ ಸುರಪಾದಪರೆನಿಪರ ॥ ೨

ಕ್ಷೋಣಿವಿಬುಧ ಗಣದೀ–ಸೇವೆಯ ಕೊಳುತ
ಮಾನವಿ ಎಂಬೋ ಕ್ಷೇತ್ರ–ಮಂದಿರ ಮಧ್ಯದಿ
ಸ್ಥಾಣುವಿನೊಳು ಮುದದೀ–ಕಾರ್ಪರವೆಂಬೊ ಕಾನನದಲಿ॥
ಕೃಷ್ಣವೇಣಿ ಕೂಲದಿ ಮೆರೆವ
ಶ್ರೀನಿಧಿ ನರಪಂಚಾನಸಂಘ್ರಿಯುಗ
ಧ್ಯಾನದಿ ಕುಳಿತ ಮಹಾನುಭಾವಕರನು॥ ೩



## ೧೧

### (ಶ್ರೀವೆಂಕಟೇಶಾಂಕಿತ)

**ರಾಗ–ಶಂಕರಾಭರಣ** **ಆದಿತಾಳ**

ರಕ್ಷಿಸೋ–ಜಗನ್ನಾಥ ದಾಸಗುರುವೇ–ರಕ್ಷಿಸೋ ॥ ಪ

ರಕ್ಷಿಸು ಗುರುಜಗನ್ನಾಥದಾಸ
ಪಕ್ಷಿವಾಹನನ ನಿಜದಾಸ–ಮು
ಮುಕ್ಷು ಮಾರ್ಗವ ತೋರ್ದಧೀಶ–ನೀನೆ ಪ್ರ
ತ್ಯಕ್ಷ ಪ್ರಹ್ಲಾದನನುಜ ॥ಆಹಾ॥
ಈ ಕ್ಷಿತಿಯೊಳು ಸುರಶ್ರೇಷ್ಠನೆನಿಸಿ–ವಿ
ಶಿಷ್ಟರ ಮನೋಭೀಷ್ಟವನಿತ್ತ–ಹರಿದಾಸ॥ ೧

ವೇದವೇದ್ಯನ ನಿಜತತ್ತ್ವ–ನಿಜ
ಸಾಧು ಜನರು ತಿಳಿಯೆ ನಿತ್ಯ–ಸತ್ಯಪೂರ್ಣ
ಬೋಧರ ಗ್ರಂಥ ತತ್ತ್ವ–ನೀ ತ
ಪ್ಪದೆ ಪೇಳ್ದೆ ಮಹತ್ವ ॥ಆಹಾ॥
ಮೋದಪಡಿಸಿ ಮೋದತೀರ್ಥರ ಮತ
ದುಗ್ಧಾಬ್ಧಿ ಸುಧೆಯನಿತ್ತ ಬಾದರಾಯಣ ದಾಸ॥ ೨

ಪ್ರಕೃತಿಬಂಧಕರಾದ ಜನರೂ–ನಿನ್ನ
ಪ್ರಾಕೃತಗ್ರಂಥ ನೋಡಿ ಮೋದಿಪರೂ–ಸತತ ಆ
ಪ್ರಾಕೃತನ ತಾ ವಂದಿಪರು–ಜನ್ಮ
ಸುಕೃತಕೆ ತಾವು ಸಾಧಿಪರು ॥ಆಹಾ॥
ಸಂಸ್ಕೃತಭಾಷೆಯ ಪ್ರಕರಣಗಳೆಲ್ಲ ಪ
ರಿಷ್ಕೃತ ಪಡಿಸಿ ನೀ ಪ್ರಾಕೃತದೊಳು ತೋರ್ದೆ ॥ ೩

ವಿಪ್ರವರೇಣ್ಯನೆ ನೀನು–ಜಗದಿ
ಅಪ್ರಮೇಯನ ಪ್ರಮೇಯವನ್ನೂ–ಅದಕೆ
ಸಪ್ರಮಾಣಗಳೆಲ್ಲವನ್ನೂ–ತೋರಿ ದಿ
ಕ್‌ಪ್ರದರ್ಶನ ಮಾಡಿ ಇನ್ನು ॥ಆಹಾ॥
ಸ್ವಪ್ರಯೋಜನರಹಿತ ಅಪ್ರಮೇಯನ ಮಹಿಮೆ
ಕ್ಷಿಪ್ರ ಬೋಧೆಯಾಗತ್ ತ್ವತ್ಪ್ರಸಾದವಿತ್ತೆ॥ ೪

ನಿನ್ನುಪಕಾರದ ಪರಿಯಾ–ನಾನು
ಜನ್ಮಜನ್ಮಾಂತರಕು ಮರೆಯೆ–ನೀನೆ
ಘನ್ನ ಶ್ರೀಹರಿದಾಸಗ್ರಣಿಯೇ–ಇನ್ನು
ನಿನ್ನ ಹರಿಕಥಾಮೃತಸಾರಕ್ಕೆಣೆಯೇ ॥ಆಹಾ॥
ಇನ್ನಿಲ್ಲ ನಿನ್ನಂಥ ಘನ್ನ ಕವಿಗಳ ಕಾಣೆ
ಪನ್ನಂಗಶಯನ ಶ್ರೀವೆಂಕಟೇಶನ ಪ್ರೀತಾ॥ ೫



## ೧೨

### (ತಂದೆವೆಂಕಟೇಶವಿಠ್ಠಲಾಂಕಿತ)

### (ವೃಂದಗಾನದಲ್ಲಿ)

**ರಾಗ–ಶಂಕರಾಭರಣ** **ಆದಿತಾಳ**

ದಾತಗುರು ಜಗನ್ನಾಥದಾಸ ನಮೋ
ಮಾತರಿಶ್ವಮತಯೂಥ ನಮೋ॥ ಪ

ಪಾತಕ ಘನವನಜಾತವೇದಸ ವಿ
ಧೂತ ಕಿಲ್ಬಿಷ ವಿಖ್ಯಾತ ನಮೋ॥ ಅ

ಭೋ ತವಾಂಘ್ರಿ ಕಮ। ಲಾತ ಪತ್ರ ಸುವಿ।
ನೀತರಿಗಾಶ್ರಯವಾಗಿರಲಿ।
ಪಾತಕಹರ ಹರಿ ಶ್ರೀ। ಕಥಾಮೃತ ಸು।
ಖೇತರ ಕಳೆದಭಿರಾಜಿಸಲಿ ॥
ಮಾತಿಗುಪನಿಷ। ದ್ಗೀತೆ ನುಡಿದ ಪ್ರ ।
ಖ್ಯಾತ ಹಿರಣ್ಯಜ ರಕ್ಷಿಸಲಿ ।
ಭೂತಳದಲಿ ಪ್ರಾ। ದ್ಯೋತನಿ ಸೂತ ಜಗ।
ನ್ನಾಥದಾಸರೆಂದು ಸ್ಮೃತಿ ಬರಲಿ॥ ೧

ವಾದಿರಾಜಮುನಿ। ಸ್ವಾದುವಚನ ಅ।
ಮೃತೋದನ ಭಾಜನ ಜಯ ಜಯ ಭೋ।
ಮಾಥರಾಂಬೆ ದು। ರ್ಗಾಧವ ಪ್ರೇಕ್ಷಣ।
ಸಾಧನ ಸುಖರತ ಜಯ ಜಯ ಭೋ॥
ವೇದವೇದಾಂತ। ವೇದಾಂಗಾಧ್ಯಯನ ।
ಮಧ್ವಾಗಮ ಪರಿಣತ ಜಯ ಜಯ ಭೋ ।
ಸುದಾ ಸಪಂಥ ವಿ। ಬುಧಾರ್ಯ ಮುಖಾಬ್ಜ।
ವದಾನ್ಯೋದಯರವಿ ಜಯಜಯ ಭೋ॥ ೨

ಧೇನುಪಾಲ ದಾ। ಸಾನುಗ್ರಹ ಪೂ।
ರ್ಣಾನುಭವೋತ್ಪಲ ಹಂಸ ನಮೋ॥
ಗಾನಾಮೃತರಸ। ಧಾರಾಪೂರ ಮಂದಾ।
ಕಿನಿ ಮಿಂದ ಕವೀಂದ್ರ ನಮೋ॥
ಮಾನವಿಸದ್ಮ। ಕ್ಷಮಾಸುರ ವಿಜಿತ।
ಸುಮಾಸ್ತ್ರ ಮಹಾಮರ ನಮೋ ನಮೋ।
ಜ್ಞಾನಿ ತಂದೆ ವೆಂಕಟೇಶವಿಠ್ಠಲನ।
ಪ್ರಾಗ್ಜನ್ಮಾಗ್ರಜ ನಮೋ ನಮೋ ॥ ೩



ಧ್ಯಾನಶ್ಲೋಕ :

ದಾಸವರ್ಯಂ ದಯಾಯುಕ್ತಂ ದೂರೀಕೃತ ದುರಾಶಿಷಂ ।
ಹರಿಕಥಾಮೃತವಕ್ತಾರಂ ಜಗನ್ನಾಥಗುರುಂ ಭಜೇ ॥

೧೩

(ಗುರುಗೋವಿಂದವಿಠ್ಠಲಾಂಕಿತ)

ರಾಗ–ನಾದನಾಮಕ್ರಿಯೆ ಆದಿತಾಳ

ನಮೋ ದಾಸವರ್ಯ ಪೂತಾತ್ಮ–ಪದ
ನಮೋ ದೇವತಾತ್ಮ॥ ಪ

ರಮಾರಮಣಪದ ಅಮಲಭಜನೆ ಕೊಡು
ನಮೋ ನಮೋ ಭವ್ಯಾತ್ಮ॥ ಅ

ನಾರಸಿಂಹ ಸತ್ಪ್ರೇರನೆಡರ ಪರಿಹಾರ ಪದದಿ ದೀಕ್ಷ
ಪಾರುಮಾಳ್ಪ ಕೂಪಾರಭವವ ಸತ್ಸಾರಾಮೃತ ಕೃತರಕ್ಷ
ಭಾರನಿನ್ನದಾಪಾರ ಕೃಪೆಯು ನೀ ತೋರ್ಪದೆಂಬ ಮಹರಕ್ಷ
ಬಾರಿ ಬಾರಿ ನಿರ್ಧಾರ ಮನದಿ ಹಾರೈಸುತಿಹೆನೋ ಹರಿಪಕ್ಷ॥ ೧

ಮಾನವೀಶ ಪ್ರಾಣೇಶದಾಸನುತ ಅನತೇಷ್ಟತೋಷ
ಗಾನಲೋಲ ಮೌನೀಶ ಪದಾಂಬುಜ ಅನಮಿಷರ ಅಶೇಷ
ಹೀನವೆನಿಪ ಕುಯೋನಿ ನಿವಾರಕ ಧ್ಯಾನಗಮ್ಯ ಸುವಿಶೇಷ
ಪ್ರಾಣನಾಥ ಮಹಿಮೋನ್ನತಿ ಗಾನದಿ ಕಳೆದ ದೋಷ॥ ೨

ವಾದಿರಾಜಗುರು ಪಾದಾರ್ಚಿಸಿ ಸನ್ಮೋದ ಪಡೆದ ದೇವ
ವೇದವ್ಯಾಸ ಸದ್ಬೋಧ ತಿಳಿದು ನೀ ಬೋಧಿಸಿದೆ ಗುರುಭಾವ
ಮೋದಕಪ್ರಿಯ ಗುರುಪಾದ ಭಜಿಸಿ ಆರ್ಧಾಯು ಪಡೆದ ಸ್ವಭಾವ
ನಾದಮೂರ್ತಿ ಗುರುಗೋವಿಂದವಿಠ್ಠಲನ ಪಾದತೋರೊ ದೇವ ॥೩॥

॥ ಶ್ರೀಃ ಹರಿಃ ಓಂ ॥

## (೨) ಶ್ರೀ ಮೋಹನದಾಸವರೇಣ್ಯರು

ಧ್ಯಾನಶ್ಲೋಕಃ–

ಮೋಹಭಯ ದುಃಖಾದಿದೂರಂ ಲೋಹಲೋಷ್ಠಸಮೇಕ್ಷಣಂ ।
ಮಾಹಿತಾಂಘ್ರಿಸರೋಜಭೃಂಗಂ ಮೋಹನಾರ್ಯಗುರುಂ ಭಜೇ ॥

೧೫

(ಪ್ರಾಣೇಶವಿಠ್ಠಲಾಂಕಿತ)

ರಾಗ–ನಾದನಾಮಕ್ರಿಯೆ ಆದಿತಾಳ

(ವೃಂದಗಾನ)

ಪಾಹಿ ಪಾಹಿ ಗುರುಮೋಹನರಾಯ॥ ॥ಪ॥

ಪಾಹಿಪಾಹಿ ಗುರುಮೋಹನ ಸಿಂಧುರ
ವಾಹನ ಪದಪಂಕೇರುಹ ಭೃಂಗ॥ ॥ಅ॥

ನವಭಕುತಿಗಳೆಂಬೋ ಸರಪಳಿಯೊಳು
ನವನವರೂಪದಿ ನಲಿವ ಸುಧೀರಾ॥ ॥೧॥

ಪದುಮನಾಭನ ಧ್ಯಾನದ ಮದವೇರಿ
ಪದೆಪದೆಗೆ ಹರಿಪದವಾ ಗಾವಾ॥ ॥೨॥

ವಿಜಯದಾಸರ ಪದರಜವ ಧರಿಸಿ
ವೀರಜ ಪ್ರಾಣೇಶವಿಠ್ಠಲನ ಭಜಿಸಿದ॥ ॥೩॥



## ೧೬

### (ತಂದೆವೆಂಕಟೇಶವಿಠ್ಠಲಾಂಕಿತ)

ರಾಗ– ಭೈರವಿ ಆದಿತಾಳ

ಮನ್ನಿಸೋ ಮೋಹನ್ನ ಗುರುವೇ
ಧನ್ಯಾಪನ್ನಜನಾಮರತರುವೇ॥ ॥ಪ॥

ಶೂನ್ಯಮತಾರಣ್ಯ ವಹ್ನಿ ಸಮೀರ ಮ
ಹೋನ್ನತಿಯನು ತಿಳಿಸಿ ಎನ್ನನುದ್ಧರಿಸೋ ॥ಅ॥

ಭೃಗುಮುನಿ ಪಾದಾಬ್ಜಭ್ರಮರ –ಸೂತ್ರ
ನಿಗಮಾರ್ಥವಾಚನ ಚತುರ
ಬಿಗಡ ಮಾಂಡವ್ಯಾದಿ ಬಗೆ ಬಗೆ ರೂಪಾಂತ್ಯ
ಯುಗದಿ ಹರಿದಾಸ ಪೀಳಿಗೆಯಾಳುದ್ಭವಿಸಿ
ಅಘಕುಲಾಚಲ ಮಘವನೆನಿಪಹಿ
ನಗ ನಿವಾಸನ ಯುಗಳ ಪದದೊಗು
ಮಿಗೆಯ ಮಹಿಮಾದಿಗಳ ಕಾವ್ಯದಿ
ನೆಗಳಿ ತೋರ್ದುದ ಪೊಗಳಲಳವೇ॥ ॥೧॥

ಭಾವಜನಿಭರೂಪೋತ್ಕರನೇ –ಬುಧ ಸಂ
ಭಾವಿತ ಪದಯುಗ್ಮ ಧರನೇ
ಕೇವಲ ಸದ್ಭಕ್ತಿ ಭಾವದಿ ವಿಜಯಾಖ್ಯ
ದೇವಮುನಿಗಳ ಪಾದ ಸೇವಿಸುತನಿಶಾ
ಭೂವಧೂವಲ್ಲಭನ ಸರಸ ಗು
ಣಾವಳಿಗಳಿನು ಕವನರೂಪದಿ
ಕೋವಿದರು ಸಲೆಮೆಚ್ಚಿ ಕೀರ್ತಿಸಿ
ಪಾವನಾತ್ಮಕನಾಗಿ ಮೆರೆದೇ॥ ॥೨॥

ಅಕ್ಷರೇಢ್ಯನ ಪಾದಪದುಮಾ –ಅಪ
ರೋಕ್ಷೀಕರಿಸಿಕೊಂಡ ಮಹಿಮಾ
ಈ ಕ್ಷಿತಿಯೊಳು ದಾಸವೃಕ್ಷವು ನಿಮ್ಮಯಾ
ಪೇಕ್ಷೆಯಿಂದಲೆ ಇನಿತು ಅಕ್ಷಯವಾಗಿದೆ
ದೀಕ್ಷೆಯುತರಿಗೆ ನಿಮ್ಮನುಗ್ರಹ
ಮೋಕ್ಷ ಕಾರಣವಹುದು ದಿಟ ಉ
ತ್ಪ್ರೇಕ್ಷೆಯಲ್ಲವೋ ತಂದೆ ವೆಂಕಟೇಶ
ವಿಠ್ಠಲನ ಪದಸಾಕ್ಷಿ ನುಡಿದೇ ॥ ॥೩॥



## ೧೭

### (ಶ್ರೀ ಗುರುಗೋವಿಂದವಿಠ್ಠಲಾಂಕಿತ)

ರಾಗ–ಮಧ್ಯಮಾವತಿ ಆದಿತಾಳ

ಮೋಹನಾರ್ಯನೆ ಎನ್ನಾ– ಪೀಡಿಸುವ ಭವ
ಮೋಹ ಕಳೆವುದು ಮುನ್ನಾ– ಹರಿಯಂಘ್ರಿಭಜನೆಯ
ಈಹ ಕೊಡುವುದು ಇನ್ನಾ– ಭೂಸುರವರೇಣ್ಯಾ॥ ॥ಪ॥

ದೇಹ ಮಮತೆಯದಾಶೆಯಲಿ ಸುಖ
ವಾಹಿನಿಗಳನುಭವಿಸಿ ಬಲು ದುರ್
ದೇಹ ಪೋಷಣೆಗೈದು ಹರಿಪದ
ಈಹಿಸದೆ ಬಲು ನೊಂದೆ ಭವದಲೀ॥ ॥ಅ॥

ಜಯದಲುದಿಸುತಲಂದೂ– ಕಾರುಣ್ಯವನು ನಿರ್
ಭಯದಿ ಕಳೆದಿಹೆ ಬಂಧೂ– ವಿದ್ವೇಷದೊಳಗ್ದುರಿ
ಹಯನನುಜ ವರ್ತಿಗಳೆಂದೂ– ಸಲಹಿದರು ಎನ್ನಯ
ಭಯ ನಿವಾರಿಸುತೆಂದೂ– ಕಾರುಣ್ಯಸಿಂಧೂ॥

ಪಯಮುಖನಪದ ಸತ್ಸರೋಜಗಳ್
ದ್ವಯಭಜಿಪ ಮನವಿರದೆ ವಿಷಯದ
ಹುಯಿಲಿನಲಿ ಬೆಂಡಾಗಿ ತಾಪದ
ತ್ರಯದಿ ಬಲು ಬಳಲಿರುವೆನಯ್ಯ

ಜಯದ ಸಂವತ್ಸರವು ಬರಳಿ
ಬಯಲು ಆಗದ ಮುನ್ನ ಪರಿಪದ
ದ್ವಯಗಳನು ಕಾಂಬಂಥ ಹದನವ
ದಯದಿ ತೋರುತ ಸಲಹೋ ಬಂಧೂ॥ ॥೧॥

ಕಾಮಮದ ಮಾತ್ಸರ್ಯ– ಅರಿಗಳೆನಮನ
ನೇಮನಿಷ್ಠೆಯಚರ್ಯಾ- ಕುಂದಿಸುತ ವಿಷಯ
ಸ್ತೋಮ ಕಳೆಯುವರಯ್ಯ–ಈ ಪರಿಯ ಪರಿಭವ
ಸೀಮೆ ಮೀರುವ ಚರ್ಯಾ– ಪರಿಪರಿಸೋ ಜೀಯ॥

ಭ್ರಾಮಕತ್ರಯಮಾರಿಗೆನ್ನ ಸು
ಹೋಮಿಸುವ ದುರುಳನನು ಸದೆವ
ತಾಮರಸಭವಪದಕೆ ಬರುತಿಪ
ಆ ಮಹಾಮಾರುತನೊಳಿರುವ॥

ರಾಮಚಂದ್ರ ಪಾದಾರವಿಂದವ
ಕಾಮಿಸುತ ಸನ್ಮಹಿಮೆಗಳ ಸನ್
ನಾಮಕೀರ್ತನೆಗೈದು ಮೋದಿಪ
ಪ್ರೇಮ ಮನವಿತ್ತೆನ್ನ ಸಲಹೋ॥ ॥೨॥

ನೀರೊಳಾಡುತ ಬಂದಾ– ಬೆನ್ನಿನಲಿ ಬಹು
ಭಾರ ಪೊತ್ತುದೆ ಛಂದಾ– ಅವನಿಯನು ತನ್ನ
ಕೋರೆ ದಾಡಿಗಳಿಂದಾ– ತರಳನನು ಬಹು
ಘೋರರೂಪದಲಿಂದಾ– ಸಲಹಿದುದೆ ಛಂದಾ॥

ಮೂರು ಪಾದವ ಬೇಡಿ ಬಲಿಯನು
ಭಾರಿ ಕೊಡಲಿಯ ಪೊತ್ತು ಪೆಗಲೊಳು
ಘೋರ ಅಟವಿಯ ತಿರುಗಿ ತಿರುಗಿ
ನಾರೆರೊಲುಮೆಗೆ ಸಿಲ್ಕಿ ತ್ರಿಪುರದ ।

ನಾರಿಯರ ವ್ರತಗೆಡಿಸಿ ಹಯವನು
ಏರ್ದ **ಗುರುಗೋವಿಂದವಿಠ್ಠಲ**
ಕಾರಣನು ಜಗಕೆಂಬ ಮತಿಯನು
ಧೀರ ಗುರುಮೋಹನ್ನ ಕರುಣಿಸು॥ ॥೩॥



## (೩) ಶ್ರೀ ಗೋಪಾಲದಾಸವರ್ಯರು.

ಧ್ಯಾನ ಶ್ಲೋಕ:–

ಆಗಕಾಲತ್ರಿಕಾಲಜ್ಞಂ ಆಗಮಾರ್ಥವಿಶಾರದಮ್।
ತ್ಯಾಗಭೋಗಸಮಾಯುಕ್ತಂ ಭಾಗಣ್ಣಾರ್ಯಗುರುಂ ಭಜೇ ॥೧॥

### ೧೮

### (ವರದಗೋಪಾಲವಿಠ್ಠಲಾಂಕಿತ)

### ಉದಯರಾಗ

ಸ್ಮರಿಸು ಗುರುಗಳ ಪಾದವಾ॥ ॥ಪ॥

ಸ್ಮರಿಸು ಗುರುಗೋಪಾಲದಾಸರ ಪಾದ
ಕರಣಶುದ್ಧಿ ಪರಮಕಾರುಣಿಕವಾದ ಬಲು
ಪರಿಪರಿಯ ದುರಿತ ಕಾನನಕೆ ಪಾವಕನಾದ
ಶರಣ ಜನರಿಗೆ ಕಾಮದ ಮನವೇ॥ ॥೮॥

ವಿಜಯರಾಯರ ಪಾದ ವಿಮಲ ಸರಸಿಜಭೃಂಗ
ಕುಜನಗಣಕದಳಿ ಕಿತ್ತುವ ಮತ್ತಮಾತಂಗ
ಸುಜನರ ಅಘವೆಂಬೋ ಗಜಗಳ ಭೇದಿಪ ಸಿಂಗ
ನಿಜಪಾದಾಬ್ಜಕ್ಕೆ ಪತಂಗ
ಅಜನೆ ತಾನೆಂಬ ಅದ್ವೈತ ಅನಿಲ ಭುಜಂಗ
ಭಜಕರ ಭಯಗಳೆಂಬ ಉರಗಗಳಿಗೆ ವಿಹಂಗ
ಯಜನಾದಿ ಸತ್ಕರ್ಮಗಳ ಮಾಡುವರ ಸಂಗ
ತ್ಯಜಿಸಿದಂಥ ಶುಭಾಂಗನ ಮನವೇ॥ ॥೦॥

ಪರನಾರಿಯರಿಗೆ ಮನವೆರೆಗದ ಮಹಾಮಹಿಮ
ಪರಮಪುರುಷನ ಧ್ಯಾನಪ ನಿರಂತರ ನಿಯಮ
ಪರಣೀಯವಾದ ಸುಗುಣಗಣಂಗಳ ಧಾಮ
ಪರವೈಷ್ಣವಾರ್ಧೀ ಸೋಮ
ದುರುಳ ಸಂಕರ ಮತಿಗಿರಿಯ ಭೇದಿಸುವ ಸುತ್ರಾಮ
ಕರೆಕರೆಯ ಸಂಸಾರ ಕಲುಷಮರ್ಧನ ಭೀಮ
ಚಿರಕಾಲ ತನ್ನ ನೆರೆನಂಬಿದವರಿಗೆ ಸುಕಾಮ
ಕರಮಂಗಳಸುಮಹಿಮಾ ಮನವೇ॥ ॥೨॥

ಭಕುತರಿಗೆ ಬಂದ ಭಯ ಶಕಲಮಾಡುವ ಶೂರ
ಭಕುತಿಯಲಿ ತನ್ನ ಭಜಕರಿಗೆ ಸುರವರ
ಸಕಲಶಾಸ್ತ್ರಗಳು ಯುಕುತಿ ಕವನಗಳಿಂದ
ಪ್ರಕಟಿಸಿದ ಕವಿಶೇಖರಾ

ಅಕಳಂಕ ಚರಿತ ಅಧ್ಯಾತ್ಮತತ್ತ್ವವಿಚಾರ
ಅಕುಟಿಲುತ್ತಮ ಆಪ್ತಜನಕೆ ಮಂಗಳಾಕಾರ
ಸುಖತೀರ್ಥಮತದ ಸುಜನರ ಸುಮನಸಚಕೋರ
ಸುಖದಿ ನಲಿಸುವ ಹಿಮಕರಾ ಮನವೇ॥ ||೩||

ಭೂತ ಭವಿಷ್ಯತ್ಕಾಲ ಜ್ಞಾತೃತ್ವ ವಿಷಯದಲಿ
ಭೂತದಯಾಪರರಾಗಿ ಬುಧರ ಸಮ್ಮತದಲ್ಲಿ
ಆತುರತ್ಸಹದಿ ಬಂದ ಅನಾಥರನು ಪೊರೆವಲ್ಲಿ
ಈತಗೆಣೆಗಾಣೆನೆಲ್ಲೀ
ನೀತಿವಂತರು ಕೇಳಿ ಇವರ ಪಾದಸ್ಮರಣೆಯಲಿ
ಕಾತರಿಸಿ ಓಡುವುವು ಬಂದ ಭಯ ಭೀತಿಯಲಿ
ಖ್ಯಾತಿದ್ಯೋತಕವಾಗಿ ಮೆರೆವ ದಿಗ್ದೇಶದಲಿ
ವಾತಜಾತನ ಮತದಲೀ ಮನವೇ॥ ||೪||

ಸಂಚಿತಾಗಾಮಿಗಳ ಕೊಂಚಮಾಡುವ ದಿವ್ಯ
ಪಂಚರತ್ನದಮಾಲೆ ಸಂಚರಿತ ದಾಸರಿಗೆ
ಅಂಚಿಗಂಚಿಗೆ ಕಲಿಪ್ರಪಂಚವನು ನಡೆಸದೆಲೆ
ಮಿಂಚುವರು ದಿನದಿನದಲೀ
ಸಂಚಕಿತನಾಗಿ ಮನವಂಚನಿಲ್ಲದಲೇನೆ
ಪಂಚಪಂಚದ ಕಾಲದಲೆದ್ದು ಸ್ಮರಿಸಲು
ವಿರಂಚಿಪಿತ **ವರದಗೋಪಾಲವಿಠ್ಠಲರೇಯ**
ಮುಂಚೆ ಕರಪಿಡಿವನಯ್ಯಾ॥ ||೫||



೧೯

(ಜಗನ್ನಾಥವಿಠ್ಠಲಾಂಕಿತ)

ರಾಗ– ಮೋಹನ ಆದಿತಾಳ

ಗೋಪಾಲದಾಸರಾಯಾ–ನಿನ್ನಯ ಪಾದ
ನಾ ಪೊಂದಿದೆನೋ ನಿಶ್ಚಯ॥ ॥ಪ॥

ಈ ಪೀಡಿಪ ತ್ರಯತಾಪಗಳೋಡಿಸಿ
ಕೈಪಿಡಿದೆನ್ನನು ನೀ ಪಾಲಿಸನುದಿನ॥ ॥ಅ॥

ಘೋರವ್ಯಾಧಿಗಳ ನೋಡಿ –ವಿಜಯರಾಯ
ಭೂರಿಕರುಣವ ಮಾಡಿ
ತೋರಿದರಿವರೇ ಉದ್ಧಾರಕರೆಂದಿ
ನಾರಭ್ಯ ತವಪಾದ ಸೇರಿದೆ ಸಲಹೆಂದು॥
ಸೂರಿಜನ ಸಂಪ್ರೀಯ ಸುಗುಣೋ
ದಾರ ಎನ್ನಯ ದೋಷ ನಿಚಯವ
ದೂರಗೈಸು ದಯಾಂಬುನಿಧಿ ನಿ
ವಾರಿಸದೆ ಕರಪಿಡಿದು ಬೇಗನೆ॥ ॥೧॥

ಅಪಮೃತ್ಯುವನು ತೊಡೆದೆ –ಎನ್ನಳೊಗಿದ್ದ
ಅಪರಾಧಗಳ ಮರೆದೆ
ಚಪಳಚಿತ್ತನಿಗೊಲಿದು ವಿಪುಳಮತಿಯನಿತ್ತು
ನಿಪುಣನೆಂದೆನಿಸಿದೆ ತಪಸಿಗಳಿಂದಲಿ॥
ಕೃಪಣವತ್ಸಲ ನಿನ್ನ ಕರುಣಕೆ
ಉಪಮೆಗಾಣೆನೋ ಸಂತತವು ಕಾ
ಶ್ಯಪಿಯೊಳಗೆ ಬುಧರಿಂದ ಜಗದಾ
ಧಿಪನ ಕಿಂಕರನೆನಿಸಿ ಮೆರೆದೆ॥ ॥೨॥

ಎನ್ನ ಪಾಲಿಸದಂದದಿ ಸಕಲ ಪ್ರ
ಪನ್ನರ ಸಲಹೋ ಮೋದಿ
ಅನ್ಯರಿಗೀಪರಿ ಬಿನ್ನಪಗೈಯೆ ಜ
ಗನ್ನಾಥ ವಿಠ್ಠಲನ್ನ ಸಂಸ್ತುತಿಸುವ ಧೀರ॥

ನಿನ್ನ ನಂಬಿದ ಜನರಿಗೀಪರಿ
ಬನ್ನವೇ ಭಕ್ತಾನುಕಂಪಿ ಶ
ರಣ್ಯ ಬಂದೊದಗೀ ಸಮಯದಿ ಅ
ಹರ್ನಿಶಿ ಧ್ಯಾನಿಸುವೆ ನಿನ್ನ॥ ॥೩॥



## ೨೦

### (ಬಾದರಾಯಣವಿಠ್ಠಲಾಂಕಿತ)

ರಾಗ– ಮೋಹನ ಅಟ್ಟತಾಳ

ಗೋಪಾಲದಾಸರ ದಿವ್ಯ ಚರಣಗಳು
ಕಾಪಾಡಲೆನ್ನ ಸತತ ॥ ॥ಪ॥

ತಾಪಸೋತ್ತಮ ವಿಜಯರಾಯರ ಕೃಪಾಜಾಹ್ನ
ವೀ ಪ್ರವಾಹದೊಳು ತೇಲಿ ಶೋಭಿಸುವ॥ ॥ಅ॥

ಇವರ ಪೂಜೆಯೆ ನಮ್ಮ ವಿಜಯರಾಯರ ಪೂಜೆ
ಇವರ ದಯವೇ ವಿಜಯರಾಯರ ದಯವು
ಇವರ ಕೊಂಡಾಡುವುದೇ ವಿಜಯರಾಯರ ಸ್ತೋತ್ರ
ಇವರೇ ವಿಜಯರಾಯರ ಮುಖ್ಯ ಪ್ರತಿಮಾ॥ ॥೧॥

ವೈರಾಗ್ಯ ಹರಿಭಕ್ತಿ ವಿಜ್ಞಾನಗಳ ಕೊಟ್ಟು
ಘೋರದುರಿತಗಳೋಡಿಸಿ
ಶ್ರೀರಮಣನಪದ ತೋರುವರು ಬಿಡದೆ ಈ
ಸೂರಿಗಳ ನಂಬಿದವ ಧನ್ಯ–ಮಾನ್ಯ॥ ॥೨॥

ವರದಗೋಪಾಲ ಗುರುಗೋಪಾಲ
ಶ್ರೀರಂಗ ಒಲಿದ ದಾಸರು ಈ ಮಹಾ
ಕರುಣಾಳುಗಳ ನಂಬಿ ಹರಿಭಕುತರೆನಿಸಿದರು
ಮರುದೀಶ ಬಾದರಾಯಣವಿಠ್ಠಲನ ಪ್ರೀಯ॥ ॥೩॥



೨೧

(ಕಾರ್ಪರನರಹರಿ–ಅಂಕಿತ)

**ರಾಗ-ಆನಂದಭೈರವಿ** **ಛಾಪುತಾಳ**

**ಗೋಪಾಲ ದಾಸರಾಯ ಮಾಂ ಪಾಲಯ॥** ॥ಪ॥

ಗೋಪಾಲದಾಸರಾಯಾಪಾರಮಹಿಮ
ತಾಪಗಳೋಡಿಸಿ ಕಾಪಾಡೋ ಗುರುರಾಯ॥ ॥ಅ॥

ಗಜಮುಖ ನಮಿಸುವೆ ಸುಜನಪಾಲಕ ಶ್ರೀಮದ್
ವಿಜಯದಾಸರಿಗೆ ನಿಜ ಶಿಷ್ಯರೆನಿಸಿದ॥ ॥೧॥

ಧನ್ವಂತ್ರಿ ಜಪದಿ ಜಗನ್ನಾಥದಾಸರ
ಬನ್ನವ ಬಿಡಿಸಿದ ಘನ್ನಮಹಿಮ ಗುರು॥ ॥೨॥

ಏನು ಕರುಣವೊ ಶ್ರೀ ಮಾನವೀದಾಸರಿಗೆ
ಸಾನುರಾಗದಿ ಆಯುರ್ದಾನವ ಮಾಡಿದ॥ ॥೩॥

ಪದುಮನಾಭನ ಪದಪದುಮ ಮಹಿಮಗಳ
ವಿಧವಿಧ ಪದ ಸುಳಾದಿಗಳಿಂದ ತುತಿಸಿದ॥ ॥೪॥

ಶರಣಜನಕೆ ಸುರತರುವೆನಿಸಿ ಧರೆಯೊಳು
**ಮೆರೆವ ಕಾರ್ಪರ ನರಹರಿ** ಯಾಬಲಿಸಿದಂಥ॥ ॥೫॥



೨೨

(ಶ್ಯಾಮಸುಂದರಾಂಕಿತ)

**ರಾಗ– ಕಾಂಬೋಧಿ** **ಝಂಪೆತಾಳ**

ಬಾಗಿ ಬೇಡುವೆ ಪಿಡಿಯೊ ಬೇಗ ಕೈಯ್ಯಾ
ಭಾಗವತ ಜನಪ್ರಿಯ ಭಾಗಣ್ಣದಾಸಾರ್ಯ॥ ॥ಪ॥

ದ್ವಿಜಕುಲಾಬ್ಧಿಗೆ ಪೂರ್ಣದ್ವಿಜರಾಜನೆಂದೆನಿಪ
ವಿಜಯವಿಠ್ಠಲದಾಸರೊಲುಮೆ ಪಾತ್ರ
ನಿಜಮನದಿ ನಿತ್ಯದಲಿ ಭುಜಗಶಯನನ ಪಾದ
ಭಜಿಪ ಭಾಗ್ಯದಿ ನಲಿವ ಸುಜನರೊಳಿಡು ಎಂದು॥ ॥೧॥

ನೀನೇವೆ ಗತಿ ಎಂದ ದೀನರಿಗೆ ನಾನೆಂಬ
ಹೀನಮತಿ ಕಳೆದು ಪವಮಾನಪಿತನ
ಧ್ಯಾನಗೈಯುವ ದಿವ್ಯಜ್ಞಾನ ಮಾರ್ಗವ ತೋರಿ
ಸಾನುರಾಗದಿ ಪೊರೆವ ದಾನಿ ದಯವಾರಿಧಿಯೇ॥ ॥೨॥

ಮಂದಜನಸಂದೋಹ ಮಂದಾರತರು ವಿಜಿತ
ಕಂದರ್ಪ ಕಾರುಣ್ಯಸಿಂಧು ಬಂಧೋ
ಕಂದನೆಂದರಿದೆನ್ನ ಕುಂದು ಎಣಿಸದೆ ಹೃದಯ
ಮಂದಿರದಿ ಶ್ರೀ ಶ್ಯಾಮಸುಂದರನ ತೋರೆಂದು॥ ॥೩॥



೨೩

(ತಂದೆ ವೆಂಕಟೇಶವಿಠ್ಠಲಾಂಕಿತ)

(ವೃಂದಗಾನದಲ್ಲಿ)

**ರಾಗ- ಯದುಕುಲಕಾಂಬೋಧಿ** **ಆದಿತಾಳ**

ಪಾಲಯ ಮಾಂ ಗೋಪಾಲದಾಸರಾಯ
ವಿಲಸಿತ ಗುಣನಿಲಯಾ॥ ॥ಪ॥

ಮುರಹರನಾಮಕನರಸಿ ಜಠರವೆಂಬ
ಸುಧಾಂಬುಧಿಯಲಿ ಶಂಬ
ದಾರಿ ಸದೃಶ ಘನರೂಪದೊಳವತರಿಸೀ
ಸುಜ್ಞಾನ ಭಕ್ತಿ ವೆರಸೀ
ಪರಿಸರಮತದೊಳು ಬದ್ಧದೀಕ್ಷೆಯಾಂತು
ಆಚರಿಸಿ ಸಮಂತು
ಪರಿಶುದ್ಧಾತ್ಮನೆ ಗೆಲಿದೆ ಪಂಚಕರಣ
ನಮೋ ನಮೋ ಭಾಗಣ್ಣ॥ ॥೧॥

ವಿಜಯದಾಸ ಗುರುಪದ ರಜವನು ಧರಿಸೀ
ತೀರ್ಥಕ್ಷೇತ್ರ ಚರಿಸೀ
ಸುಜನವರದ ರಜತಮುವ ಸೇರಗೊಡದೇ
ಮಮತೆಯ ಕಿತ್ತೊಗೆದೇ
ನಿಜಪಾದಾಶ್ರಿತರುದ್ಧರಿಸುತ ದಯದೀ
ಗುರ್ವಾಜ್ಞೆಯ ಬಲದೀ
ಶ್ರೀ ಜಗನ್ನಾಥರಿಗಾಯುರ್ದಾನವಿತ್ತೇ
ರವಿಜನ ಮರೆಸುತ್ತೇ ॥೨॥

ದ್ವಂದ್ವ ಸರ್ಮಣೆಗೈವ ತತ್ತ್ವಚತುರ
ಗಿರಿಜಾತೆಯ ಕುವರ
ತಂದೆ ವೆಂಕಟೇಶವಿಠ್ಠಲ ಧ್ಯಾನಸುಖ
ಮಗ್ನನೆ ಆತ್ಮಮುಖ
ದಿಂದ ಸಂಚಿತಾಗಾಮಿಯೆಲ್ಲ ದಹಿಸೀ
ವಿರಕ್ತಿಗೆ ನೆಲೆಯೆನಿಸೀ
ಬಂಧುರಕವಿಕುಮುದೇಂದು ಮೆರೆದೆ ಜಗದೀ
ಬಾ ಬೇಗನೆ ದಯದೀ॥ ॥೩॥



೨೪

(ರಮಾಕಾಂತವಿಠ್ಠಲಾಂಕಿತ)

ರಾಗ–ಧನ್ಯಾಸಿ                ಅಟ್ಟತಾಳ

ಗೋಪಾಲದಾಸರ ಅಪಾರ ಗುಣಸ್ತೋತ್ರ
ತಾಪ ಪರಿಹರ ಸರ್ವ ಪಾಪಹರವೂ॥ ॥ಪ॥

ಶ್ರೀಪತಿ ಹರಿಯ ಸಂ। ಪ್ರೀತಿ ಪಾತ್ರರು ಘನ
ತಾಪಸಿ ಮುಕ್ತಿ ಕಲಾಪ ಯುಕ್ತಿಲಿವೇಳ್ವ॥ ॥ಅ॥

ಭಾಗವತೋತ್ತಮ। ರಾಗಿ ಗುರುಗಳಿಂದ
ಭಾಗಣ್ಣನೆನಿಸಿ।ಕೂಗಿಸಿಕೊಳ್ಳುತಾ
ಯೋಗಿ ಭೋಗಿ ಆಯುರ್ದಾನವ ಮಾಡಿದ ತ್ಯಾಗಿ
ರೋಗೋಪದ್ರವಗಳ। ನೀಗಿಪ ಕರುಣೀ॥ ॥೧॥

ಜ್ಞಾನ ಭಕ್ತಿ ವಿರಕ್ತಿ ಸಂಗಮವಾಗಿ
ಕಾಣುವುದಿವರಲ್ಲಿ ಮೂರ್ತಿಗೊಂಡು
ದೀನವತ್ಸಲ ಹರಿ। ಧ್ಯಾನನಿರತ ಮುಖ್ಯ
ಪ್ರಾಣಪತಿಯ ನಿತ್ಯ ।ಮಾನಸದಲಿ ಕಾಂಬ॥ ॥೨॥

ವಿಜಯರಾಯರ ದಿವ್ಯ। ಕರುಣಕವಚವ ತೊಟ್ಟು
ಋಜುಮಾರ್ಗದರ್ಶಕ ಸುಜನೋದ್ಧಾರಿ
ವಿಜಯಸಖನ ಗುಣ। ಕಥನ ಕವನ ನಿಪುಣ
ನಿಜಗುರುಪದರಜ। ಭಸಿತ ವಿಭೂಷಣ॥ ॥೩॥

ಗುರುಗಳಿಂದೊಡಗೂಡಿ। ತಿರುಪತಿ ವೆಂಕಟ
ಗಿರಿಯರಸನ ಯಾತ್ರೆ। ಪ್ರತಿವರುಷ
ತೆರಳಿ ಶ್ರೀ ಹರಿಲೀಲೆ। ಹೊಸ ಹೊಸ ಪರಿಯಲಿ
ಹರುಷದಿಂದಲಿ ಕಂಡು। ಪೊಗಳಿದ ಸನ್ಮಹಿಮ॥ ॥೪॥

ಸಾರಿ ಬಂದವ ಅ। ಪಾರ ಕರುಣದಿಂದ
ವೀರದಾಸರ ಮಾಡಿ। ತಾರಕರೆನಿಸಿ
ಶ್ರೀ ರಮಾಕಾಂತವಿಠ್ಠಲ। ವಿಶ್ವಂಭರನಡಿ
ವಾರಿಜಾಶ್ರಯ ಪಡೆದು। ಕೀರುತಿ ಪೊಂದಿದ॥ ॥೫॥



## ೨೫

## (ಶ್ರೀಕರವಿಠ್ಠಲಾಂಕಿತ)

## (ವೃಂದಗಾನದಲ್ಲಿ)

**ರಾಗ–ಪಹಡಿ** **ಆದಿತಾಳ**

ವಿಜಿತಮದನ ಶುಭಕಾಯಾ । ಹೇ॥ ॥ಪ॥

ಗೋಪಾಲ ದಾಸಾಖ್ಯಾ। ತಾಪಸರೊಡೆಯಾ।
ತಾಪ ನಿವಾರಿಸೋ। ನಾ ಪಾದಪಿಡಿವೆನೊ॥ ॥೧॥

ಮೇಲು ಕರುಣ ಸಿರಿ। ಲೋಲ ಪಂಢರಿರಾಯ।
ಆಲೇನಾಹಿಯನ್ನೆ ಕೇಳಿ। ನೀಸ್ತುತಿಸಿದೆ॥ ॥೨॥

ವಟುವರ ಶ್ರೀಕರವಿಠ್ಠಲನ ಭಕುತಿಲಿ।
ತೃಟಿ ಬಿಡದೆಲೆ ನೆನೆವಾ। ಚಟುಲ ವಿಕ್ರಮನೆ॥ ॥೩॥



## ೨೬

## (ಗುರುಗೋವಿಂದವಿಠ್ಠಲಾಂಕಿತ)

## (ವೃಂದಗಾನದಲ್ಲಿ)

**ರಾಗ–ಕಾಪಿ** **ಆದಿತಾಳ**

ಬಾರಯ್ಯ ಭಾಗಣ್ಣನೇ। ಎನ್ನಯ ಮನಕೆ
ಬಾರಯ್ಯ ಭಾಗಣ್ಣನೇ॥ ॥ಪ॥

ಕರೆಕರೆಮನದ ವಿಷಾದವ ಕಳೆದು ಶ್ರೀ
ಹರಿಯಲಿ ಮನವಿತ್ತು ಕರುಣಿಪುದಯ್ಯ॥ ॥ಅ॥

ಗೋಪಾಲವಿಠಲ ಭಜಕನೇ ಹೇ ಉ
ಮಾಪತಿಸುತ ಬಲು ತ್ಯಾಗಶೀಲನೆ
ಶಾಪದಿ ನೊಂದ ಶ್ರೀನಿವಾಸಪ್ಪಗೆ
ಆಪಾರಾಯುಷ್ಯವಿತ್ತು ಸಲಹಿದ ॥ ॥೧॥

ತಡವು ಇನ್ಯಾತಕಯ್ಯಾ ಗುರು
ಮಡದಿಯು ಸಲಹಿದ ಪರಿಯಾ
ಒಡಲೊಳು ತೋರಿಸಿ ಸಲಹೆಂದು ಬೇಡುವೆ
ಕಡುದಯಾನಿಧೆ ಅಡಿಗೆರಗುವೆನಯ್ಯಾ॥ ೨

ಸಕಲಶಾಸ್ತ್ರದಿ ಬಲುನಿಪುಣಾ ಮಂತ್ರ
ಸಕಲವ ಚಿತ್ರದಿ ರಚಿಸಿದೆ ಧಿಕ್ಷಣಾ
ಲಕುಮಿಯರಸ **ಗುರುಗೋವಿಂದವಿಠ್ಠಲನ**
ಸಕಲಕ್ಕೂ ದೇವರೆಂದರುಹಿದ ಗುರುವೇ॥ ೩



## (೪) ಶ್ರೀಪ್ರಸನ್ನವೆಂಕಟದಾಸವರ್ಯರು

### (ರಮಾಪತಿವಿಠ್ಠಲಾಂಕಿತ)

**ರಾಗ–ರೇಗುಪ್ತಿ** **ಝಂಪೆತಾಳ**

ಸಿರಿವಿರಂಚಿ ಭವೇಂದ್ರಾದಿ ಸುರರಿಂದರ್ಚಿತನಾದ
ಸಿರಿಪ್ರಸನ್ನ ವೆಂಕಟನ್ನ ।
ನಿರುತಸ್ಮರಿಪೆ ಕಾಖಂಡಕಿ ವೆಂಕಟಪ್ಪನವರ
ಚರಣವನೆ ನೆನೆವನೆ ಧನ್ಯಾ–ಮಾನ್ಯಾ॥ ಪ

ಮಾರುತ ಮತಾಬ್ಧಿ ಮರಕತ ಭೂಸುರ ಜನ್ಮ
ಧರನಾಗಿ ಭುವಿಯೊಳುದಿಸಲು।
ತರಳತ್ವ ಕಳೆದು ತರುಣತನ ಬರಲಿನ್ನು
ಅರಿವೆ ಕಾಣದೆ ಇರುತಿರಲು।
ಹರಿನಾಮಾವಳಿಗಳ ಬರೆದು ಓದುವ ಭಾಗ್ಯ
ಅರಿವೆನೆಂದರೆ ಬಾರದಿರಲು।
ತೊರೆದು ಮನೆಯುವರ ಗಿರಿಯಾತ್ರೆ ಮಾ
ಳ್ಪರನನುಸರಿಸಿ ತೆರಳಿ ಬರುತಿರಲು ೧

ಹಸನಾಗಿ ಕಪಿಲತೀರ್ಥದಲಿ ಮಜ್ಜನಗೈದು
ಶಶಿಧರನ ಅಡಿಗಳಿಗೆರಗಿ ।
ಎಸೆವ ಪರ್ವತಾರೋಹಣವ ಮಾಡಿ
ಸ್ವಾಮಿಪುಷ್ಕರಣಿ ತೀರ್ಥದಲಿ ಮುಳುಗಿ ॥
ಬಿಸದಳಾಕ್ಷ ವರಹಮೂರ್ತಿಯನೆಕಂಡಾ
ಲಸವ ಮಾಡದೆಲೆ ಚೆನ್ನಾಗಿ।
ಋಷಿಕೇತುಜನಕ, ಪುಟ್ಟಿಸಿದ ಕಾರಣವೇನು
ಉಸಿರೆಂದು ಚರಣಕ್ಕೆ ಬಾಗಿ॥ ೨

ವಂದಿಸಿದಾಕ್ಷಣ ಸ್ವಪ್ನದಿ ಪ್ರಸನ್ನವೆಂಕಟ
ನೆಂದು ಬರೆಯ ನಾಲಿಗೆಯಲಿ।
ನಂದದಿದೆಚ್ಚೆತ್ತು ಜ್ಞಾನವುದಿಸೆ ಮು
ಕುಂದನ ಕಂಡು ಎದೆಯಲಿ॥
ಚಂದಚಂದದಿ ಪೊಗಳುತ ಕಂಗಳಿಂದಾ
ನಂದಬಾಷ್ಪ ಸುರಿಸುತಲಿ ।
ಇಂದು ಧನ್ಯನಾದೆನೆಂದು ತೋಷಾಬ್ಧಿಯ
ಹೊಂದಿ, ಹರಿಯಾಜ್ಞೆಯಲಿ ತೆರಳೀ॥ ೩

ಹಿತದಿ ಮಾತಿಗೆ ಬಂದಚ್ಯುತನ ನಾಮಾವಳಿ
ಅತಿಶಯ ಭಕುತಿಪೂರ್ವಕದಿ।
ಸತತ ಅನೇಕ ಗ್ರಂಥಗಳ ದಶಮಸ್ಕಂಧ ಭಾಗ
ವತ ಪೂರ್ವಾರ್ಧ ಕನ್ನಡದಿ॥
ಮತಿಪೂರ್ವಕ ರಚಿಸುತಾನಂದವು ತುಳು
ಕುತಿಹುದು ಕವಿತೆಯಲಿ।
ನುತಿಸಿ. ದುರ್ಮತ ನಿರಾಕರಿಸಿ, ಬಾಳಿ ಬಲುಕುಲ
ತತಿ ಶುದ್ಧಮಾಳ್ಪರು ಹರಿಪುರವ ಪೊಂದಿ॥ ೪

ಕಲಿಕಾಲದಿ ನರಹರಿ ನಾಮಸ್ಮರಣೆಯು
ಮುಖದಿಂದ ಬರುವದು ಅತ್ಯಸಾಧ್ಯ।
ಲಲಿತ ಕವನದಿ ತುತಿಸೆ ರಮಾಪತಿವಿಠ್ಠಲನು
ಒಲಿವನೋ ಇದು ಸತ್ಯ॥
ಹಲವು ಮಾತೇಕಿವರು ಸುರರೇ ಸರಿ ನರ
ರಲ್ಲ ಇದು ಸಿದ್ಧವೇ ಸಿದ್ಧ।
ಛಲದಿ ಮಾನುಜನೆಂಬಧಮನು ಹರಿಯಾಜ್ಞೆಯಲಿ
ಬಲುಬಲು ನರಕದೊಳು ಬೀಳುವುದು ಸಿದ್ಧ–ರಾದ್ಧ ೫



## ೫ ಶ್ರೀ ವಿಜಯದಾಸವರೇಣ್ಯರು

ಧ್ಯಾನಶ್ಲೋಕ :–

**ಅಜ್ಞಾನತಿಮಿರಚ್ಛೇದಂ ಬುದ್ಧಿಸಂಪತ್ಪ್ರದಾಯಕಂ ।**
**ವಿಜ್ಞಾನವಿಮಲಂ ಶಾಂತಂ ವಿಜಯಾಖ್ಯಗುರುಂ ಭಜೇ ॥**

೨೮

(ಹಯವದನವಿಠ್ಠಲಾಂಕಿತ)

ರಾಗ-ಭೂಪಾಳಿ ಝಂಪೆತಾಳ

ನೆನೆಸಿದವರಘನಾಶನಾ ದಾಸರಾ
ನೆನೆಸಿದವರಘನಾಶನಾ॥ ಪ

ನೆನೆಸಿದವರಘನಾಶ ಅನುಮಾನವಿಲ್ಲಿದಿಕೆ
ವನಜನಾಭನು ಒಲಿದು ಘನವಾಗಿ ಪಾಲಿಸುವ
ದಿನದಿನದಿ ವಿಜಯರಾಯರ ದಿವ್ಯತರವಾದ
ಗುಣಕರ್ಮಗಳ ಬಿಡದೆ ನೆನೆದು ಕೊಂಡಾಡಿರೋ ॥ ಅ

ಆದಿಯಲಿ ಸುರಮುನಿಯ ಪಾದಸೇವೆಯ ಮಾಡಿ
ಮೋದದಲಿ ಸುರಲೀಲ ಎಂಬ ಕಪಿ ತ್ರೇತೆಯಲಿ
ಆ ದ್ವಾಪರದಲಿ ನಿಕಂಪನೆಂಬ ನಾಮದಲಿ ಶ್ರೀಧರನ ಸೇವಿಸುತಲೀ॥
ಕಾದಿದ್ದು ಕಲಿಯುಗದಿ ಪುರಂದರದಾಸರ
ಸ್ವಾದುವಚನವ ಕೇಳಿ ತುರುಕರುವಾಗಿದ್ದು
ಖೇದವಿಲ್ಲದೆ ಜನಿಸಿ ಬರುತ ಬರುತಾ ಮತ್ತೆ ಮೇದಿನೀಸುರಜನ್ಮದೀ॥ ೧

ವರತುಂಗಭದ್ರಾತೀರದ ಗ್ರಾಮ ಅಶ್ವತ್ಥ
ನರಸಿಂಹ ಚೀರಲಪರಿ ಎಂಬ ಗ್ರಾಮದಲಿ
ಇರುತಿಪ್ಪ ಶ್ರೀನಿವಾಸಪ್ಪದ್ವಿಜ ಕೂಸಮ್ಮ ಗುರುಸೇವೆ ಮಾಡಿ ಮಾಡೀ॥
ವರಪಡೆದು ಪಡೆದಳೈ ಎರಡೊಂದುಪುತ್ರರನು
ಹಿರಿಯಮಗ ದಾಸಪ್ಪನೆಂದು ಇವರ ನಾಮ
ಕರೆದು ಮುದ್ದಿಸಿ ಸಾಕಿ ಮುಂಜಿ ಮದುವೆ ಮಾಡಿ ಇರುತಿರಲು ಕೆಲವು ಕಾಲ ೨

ಲೋಕಜನರಂತೆ ಲೌಕೀಕದೊಳು ಸಂಚರಿಸಿ
ಈ ಕಾಯಗೋಸುಗ ಆನೇಕ ಜನರ ಸೇವೆ
ಕಾಕಪ್ಪೆಯಾಗಿ ವಸ್ತ್ರಾನ್ನ ಕಾಣದೆ ಮರುಗಿ ಸಾಕುವರಿಲ್ಲೆನುತಾ॥
ಬೇಕಾದ ದೇಶವನು ಚರಿಸುತಿರೆ ಒಂದು ಕಡೆ
ತಾಕಿ ಚೋರರು ಬಂದು ವಸ್ತ್ರಗಳನಪಹರಿಸೆ
ಯಾಕೆ ಬಂಧು ಬಳಗವೆಂದೆನುತ ಅಲ್ಲಿಂದ ನಾಕನದಿ ಮೀವೆನೆಂದು॥ ೩

ಹಿರಿಯರಿಗೆ ಪೇಳದಲೆ ತೆರಳಿ ಯಾತ್ರೆಗೆ ಹೋಗಿ
ಎರಡೆಂಟುವತ್ಸರದ ತರಳ ಪ್ರಾಯದಲಿಂದ
ಸರುವ ತೀರ್ಥಕ್ಷೇತ್ರದಲಿ ಮಿಂದು ವಿಂಶತಿವತ್ಸರಕೆ ತಿರುಗಿ ಬಂದೂ ॥
ವರಮಾತೃಪಿತರು ಸಹೋದರರಿಂದ ಸಹವಾಗಿ
ಬೆರೆದು ಮಾನವರಂತೆ ಸಂಸಾರವೃತ್ತಿಯಲಿ
ಎರಡೆಂಟು ವರುಷವಿರುತಿದ್ದು ಮೆಲ್ಲನೆ ಹರಿಯ ವರಕೃಪೆಯ ಪಡೆವೆಂದೂ॥ ೪

ಮತ್ತೆ ಪೊರಟರು ಸಿರಿ ಉತ್ತಮಶ್ಲೋಕ ಹರಿ
ಪೆತ್ತ ಗಂಗೆಯ ಸ್ನಾನ ಗಯದಲ್ಲಿ ಪಿಂಡವ
ನಿತ್ತು ಮರಳಿ ಬಂದು ವಾರಣಾಸಿಯಲಿ ಉತ್ತಮರ ಸಂಗದಿಂದ॥
ನಿತ್ಯ ಸ್ನಾನ ಸಂಧ್ಯಾ ಶುಚಿಯಾಗಿ ಮಲಗಿರಲೂ
ಸತ್ಯವಾಗಿ ಸ್ವಪ್ನದಲಿ ನರಹರಿಯು ಪಡೆದ
ಪುತ್ರನೆಬ್ಬಿಸಿದಂತೆ ದಾಸರರೂಪಿನಲಿ ಹತ್ತೆಗರೆದು ಕರುಣದಿ॥ ೫

ಸುರನದಿಯ ದಾಟಿಸಿ ಕರೆತಂದು ಆಜೆಯ
ಲಿರುತಿಪ್ಪ ವ್ಯಾಸಕಾಶಿಯ ಪುರದ ಧೂರೆಯಾದ
ಸಿರಿ ವಾಸುದೇವ ಬಲಸುರರ ಸಂದಣಿಯೊಳಗೆ ಪರನಾಗಿ ಕುಳಿತಿರಲು॥
ಭರದಿಂದ ತೋರಿ ಸುಸ್ಥಿರವಾಗಿ ಸ್ತುತಿಸೆನೆನುತ
ಕರೆದು ಪೇಳಿ ಅವರ ಪರಿಯಿಂದಲಾದರಿಸಿ
ಹರುಷದಿಂದ ನೀನು ಹರಿಚರಿತೆ ಪೇಳೆನುತ ಕರುಣರಸದಿಂದರುಹಲೂ॥ ೬

ಎಚ್ಚೆತ್ತು ನೋಡಿ ಸಿರಿ ಅಚ್ಯುತನಮಹಿಮೆಯನು
ಬಿಚ್ಚಿ ಬೆದಸರಿದೆನೆನುತ ಹೆಚ್ಚಿದಾಸಂತೋಷದಲಿ
ಕೊಚ್ಚಿ ಪೋದವು ಮನದ ಹೆಚ್ಚಿದಾ ಪಾಪಗಳು ಸ್ವಚ್ಛಚಿತ್ತದಲ್ಲಿ ಹರಿಯಾ
ನಿಚ್ಚ ಮನ ಬಂದಂತೆ ಅಚ್ಚಸುಖತೀರ್ಥರಮತ
ನೆಚ್ಚಿ ಕವನವಪೇಳಿ ನುಚ್ಚುಮನವುಳ್ಳವರ
ನಿಚ್ಚಟದಲಿ ತಿದ್ದಿ ಅಚ್ಚಜ್ಞಾನಭಕ್ತಿ ಮೆಚ್ಚುಗಾಣಿಕೆ ಇತ್ತರೂ|| ೭

ತೃತೀಯ ಕಾಶಿಯಾತ್ರೆ ಮಾಡಿ ಬಂದಾಗ ಉ
ನ್ನತವಾಗಿ ನಭಗಂತೆ ಉಕ್ಕೇರೆ ಗಗನಕ್ಕೆ
ಅತಿಶಯದಿ ಬಂದು ಮತ್ಸೋದರಿಯ ನಾಮದಲಿ ಪ್ರತಿಯಿಲ್ಲದಂತೆ ತೋರೆ||
ತುತಿಸಿ ಅಲ್ಲಿಂದ ಸೇತುಸ್ನಾನಕ್ಕೆತಂದು
ರತಿಯಿಂದಲೇ ಮಾಡಿ ಸರ್ವರನು ಉದ್ಧರಿಸಿ
ಮಿತಿಯಿಲ್ಲದೆಲೆ ಸೇತು ಕಾಶಿ ಪರಿಯಂತರ ಕಥೆಯಿಂದ ಕೀರ್ತಿ ಪಡೆದರೂ|| ೮

ಲೋಕೋಪಕಾರಕ್ಕೆ ಹದಿನೆಂಟು ವತ್ಸರಾ
ನೇಕ ತೀರ್ಥಕ್ಷೇತ್ರ ತಿರುಗಿ ವೈರಾಗ್ಯದಲಿ
ಶ್ರೀಕಾಂತಹರಿಯ ಮನದೊಳಗೆ ಧ್ಯಾನಿಸಿಕೊಳುತ ಪ್ರಾಕೃತರ ಸಂಗ ತೊರೆದು
ವೈಕುಂಠಯಾತ್ರೆಯನು ಯುವಸಂವತ್ಸರದ ಕಾ
ರ್ತೀಕ ಶುದ್ಧ ದಶಮಿ ಗುರುವಾರ ಪ್ರಹರದಲಿ
ರಾಕೇಂದುಬಿಂಬ ಹಯವದನವಿಠ್ಠಲನಂಘ್ರಿ ಜೋಕೆಯಲಿ ಸೇರಿದರು || ೯



## ೩೯

## (ಗೋಪಾಲವಿಠ್ಠಲಾಂಕಿತ)

ರಾಗ–ಸೌರಾಷ್ಟ್ರ ಅಟ್ಟತಾಳ

ಸ್ಮರಿಸುವೆ ನಾ ನಿನ್ನ ಚರಣಕಮಲ।ಗುರು ವಿಜಯರಾಯ
ಶರಣಜನರಪ್ರಿಯ ಪರಮ।ಕರುಣಾನಿಧಿ ವಿಜಯರಾಯ॥ ಪ

ಜನ್ಮಾರಭ್ಯದಿ ನಿಮ್ಮ ಗುಣ।ಕರ್ಮಂಗಳನೆಲ್ಲ ವಿಜಯರಾಯ
ಇನ್ನು ನಾ ವರ್ಣಿಸಲೆಷ್ಟರವನೋ।ಗುರು ವಿಜಯರಾಯ॥ ೧

ದಿವಿಜರಾವೇಶದಿಂದ।ವನಿಯೊಳುದಿಸಿದ್ಯೊ ವಿಜಯರಾಯ
ದಿವಿಜರಿಂದಲಿ ಪ್ರತಿದಿವಸ।ಬಿಡದಲಿದ್ಯೊ ವಿಜಯರಾಯ॥ ೨

ಭಾಗವತಧರ್ಮ ವಹಿಸಿ।ತ್ರಿರಾವರ್ತಿ ವಿಜಯರಾಯ
ಭಾಗೀರಥಿಯ ಚೆನ್ನಾಗಿ।ಸೇವಿಸಿದ್ಯೊ ವಿಜಯರಾಯ ೩

ಕಂಚಿ ಕಾಳಹಸ್ತಿ ಶ್ರೀರಂಗ।ಸೇತುಯಾತ್ರೆ ವಿಜಯರಾಯ
ಪಂಚವಾರವು ಸಂಚರಿಸಿ।ಸೇವಿಸಿದ್ಯಯ್ಯ ವಿಜಯರಾಯ॥ ೪

ಮರಿಯಾದೆಯಿಲ್ಲದೆ ವರ।ಗಿರಿಯಾತ್ರೆಯ ವಿಜಯರಾಯ
ಪರಿಪರಿ ಕ್ಷೇತ್ರಕ್ಕೆ ಪೋಗಿ।ಪೂಜಿಸಿದ್ಯಯ್ಯ ವಿಜಯರಾಯ॥ ೫

ಮಹಿಯೆಲ್ಲ ತಿರುಗಿ ಸರ್ವ।ತೀರ್ಥಕ್ಷೇತ್ರದಿ ವಿಜಯರಾಯ
ವಹಿಸಿ ದಾಸತ್ವ ವೈಷ್ಣವ।ಸಿದ್ಧಾಂತವ ಒಲಿದ್ಯೊ ವಿಜಯರಾಯ ೬

ಗುರೂಪದಿಷ್ಟನಾಗಿ ವ್ಯಾಸಕಾಶಿ।ಯಲಿದ್ಯೋ ವಿಜಯರಾಯ
ದುರ್ಯೋನಿಯಲಿ ಬಂದ ವಂಶಸ್ಥ।ರನುದ್ಧರಿಸಿದೆ ವಿಜಯರಾಯ ೭

ಸ್ವಚ್ಛವಾಗಿ ಗಂಗಾತೀರವಾಸವ।ಮಾಡಿ ವಿಜಯರಾಯ
ಹೆಚ್ಚಾದ ಪರ್ವಣಿ ಮತ್ತೊಂದರಿಯ।ತೋರ್ದೆ ವಿಜಯರಾಯ ೮

ತುಂಗಾತೀರದಿ ನಿಂತು ಗಂಗೆ।ಪೆರ್ಚಿಸಿದ ವಿಜಯರಾಯ
ಅಂಗದ ಮುಸುಕಿನಲಿ ಪಾಂಡು।ರಂಗನ ಕಂಡ್ಯೋ ವಿಜಯರಾಯ ೯

ಮಧ್ವಮತದಸಾರ ಕವನದಿ।ರಚಿಸಿದ್ಯೋ ವಿಜಯರಾಯ
ಅದ್ವೈತಸಿದ್ಧಾಂತಾಬದ್ಧ।ವೆನಿಸಿದ್ಯೋ ವಿಜಯರಾಯ ೧೦

ಶುದ್ಧ ತತ್ತ್ವಸಾರ ಸುಳಾದಿ।ಪದಮಾಡಿ ವಿಜಯರಾಯ
ಹೃದ್ಯದಿ ಧಿಮಿಧಿಮಿಕೆಂದು।ಹರಿಯ ಕುಣಿಸಿದ್ಯೋ ವಿಜಯರಾಯ॥ ೧೧

ಸದಾಚಾರ ಸಂಪತ್ತು ಮಧುಕರ।ವೃತ್ತಿಯು ವಿಜಯರಾಯ
ಕದನ್ನ ಉಂಡರಿಯೆವೂ ಶಿಷ್ಯ।ಜನಸಂಘ ವಿಜಯರಾಯ॥ ೧೨

ಭಕ್ತರ ಅಪಮೃತ್ಯು ಹರಿಸಿ।ಆಯುವನಿತ್ತೆ ವಿಜಯರಾಯ
ಪ್ರತ್ಯಕ್ಷವಲ್ಲದೆ ಮನವೆ।ಇದಕೆ ಸಾಕ್ಷಿ ವಿಜಯರಾಯ ೧೩

ನಿತ್ಯನ್ನದಾನ ಪುತ್ರೋತ್ಸವ।ಗಳನಿತ್ತೆ ವಿಜಯರಾಯ
ಹತ್ತೆಂಟು ಮದುವೆ ಮುಂಜಿಗಳ।ಮಾಡಿಸಿದ್ಯೋ ವಿಜಯರಾಯ ೧೪

ಭಕ್ತಜನರಿಗೆ ತತ್ತ್ವೋಪದೇಶವ।ಮಾಡಿ ವಿಜಯರಾಯ
ಹೃತ್ಕಮಲದಿ ಹರಿಯ ನೃತ್ಯವ।ಮಾಡಿಸಿದೆ ವಿಜಯರಾಯ ೧೫

ಎಲ್ಲರಲ್ಲಿ ಸಿರಿನಲ್ಲನ।ಅಂಶವ ವಿಜಯರಾಯ
ನಿಲ್ಲಿಸಿದೆಯೊ ನಿನ್ನ ಬಗೆಯು।ಬಲ್ಲವರಾರೋ ವಿಜಯರಾಯ ೧೬

ಬಲ್ಲಿದ ನೀನೊಂದು ರೂಪದಿ।ಎನ್ನಲ್ಲಿ ವಿಜಯರಾಯ
ನಿಲ್ಲಿಸಿದ್ದಕೆ ಎಲ್ಲ ಜನರು।ಓಲೈಸೋರು ವಿಜಯರಾಯ ೧೭

ನಿಮ್ಮ ಪುಣ್ಯದ ಶೇಷವಿಸ್ನು।ಉಂಬೆವೋ ನಾವು ವಿಜಯರಾಯ
ಎಮ್ಮ ಸಾಮರ್ಥ್ಯವು।ನಿಮ್ಮದೆಂದೆಂದಿಗೂ ವಿಜಯರಾಯ ೧೮

ಎನ್ನಿಂದ ಆಗೋ ಸಾಧನವೆಲ್ಲ।ನಿನ್ನದೊ ವಿಜಯರಾಯ
ಎನ್ನ ಪೊಂದಿಹರೆಲ್ಲ ನಿನ್ನ ದಾಸರೊ।ಗುರು ವಿಜಯರಾಯ ೧೯

ಈ ಯುಗದಿ ಸಾಧನವೆಂಬುದು।ಕಾಣೆ ವಿಜಯರಾಯ
ಯೋಗಿ ನಿನ್ನವರಿಗೆ ಬೇಗ।ಒದಗುವುದೊ ವಿಜಯರಾಯ ೨೦

ಗುರು ನಿನ್ನ ಕರುಣ ಕವಚವ ತೊಟ್ಟ।ಭಕುತರ್ಗೆ ವಿಜಯರಾಯ
ಸಿರಿವರ ಗೋಪಾಲವಿಠ್ಠಲ।ಕೈಪಿಡಿವನೊ ವಿಜಯರಾಯ ೨೧



## ೩೦

## (ಗುರುಗೋಪಾಲವಿಠ್ಠಲಾಂಕಿತ)

**ರಾಗ–ಕಲ್ಯಾಣಿ** **ಅಟ್ಟತಾಳ**

ದುರಿತವಾರಿವಾಹ ಝಂಝಾನಿಲ
ಶರಣು ಶರಣು ಅಸ್ಮದ್ಗುರುವೆ ವಿಜಯರಾಯ ಪ

ಆಗಾಮಿ ಸಂಚಿತಾಖಿಳ ಕರ್ಮವಿದೂರ
ರಾಗ ದ್ವೇಷಾದಿ ದುರ್ಗುಣ ವರ್ಜಿತ
ಭೋಗ ಪ್ರಾರಬ್ಧವ ಭುಂಜಿಪ ಭೂದೇವ
ಭಾಗವತರು ನಿನ್ನ ಬಿಡದೆ ಕೊಂಡಾಡುವರು॥ ೧

ಈಷಣತ್ರಯದೂರ ಇಳೆಯೊಳಿದ್ದ ಪುಣ್ಯ
ದೇಶಸಂಚಾರ ಪಾವನ ಶರೀರ
ದಾಸಜನರ ಪ್ರಿಯ ಶಮ ದಮ ಸಾಧನ
ಕೋಶಭರಿತ ನಿತ್ಯ ಕೊಂಡಾಡುವ ಜನಕೆ|| ೨

ಕಾಮಾದಿರಿಪುಗಳನು ಜಯಿಸಿ ನೀ ಹೃದಯ
ವ್ಯೋಮದೊಳಗೆ ನಿತ್ಯ ಹರಿಯಪಾದ
ತಾಮರಸವ ಭಜಿಸಿ ಮೆರೆವ ಮಹಾಮಹಿಮ
ನೇಮದಿಂದಲಿ ನಿತ್ಯದಲಿ ಸ್ಮರಿಸುವರ ೩

ಅಧ್ಯಾತ್ಮಾಖಿಳ ಗೋಪ್ಯ ತತ್ತ್ವವಿಚಾರ
ಸ್ವಾಧ್ಯಾಯನಿಪುಣ ಸಕಲಜನ್ಮಾದಿ
ಅದ್ವೈತಕೋಲಾಹಲ ರಿಪುಶೂಲ
ಸಿದ್ಧಾಂತ ಜ್ಞಾನನಿಧಿಯೆ ನಿಜಾರ್ಚಕರ|| ೪

ಭುವನಮಂಡಲದಲಿಹ ಕವಿಗಳ ಶಿರೋರನ್ನ
ಭವದೂರ ಜ್ಞಾನಿ ಭಕ್ತರ ನಿಧಿಯೆ
ಪವನಾಂತರ್ಗತ **ಗುರುಗೋಪಾಲವಿಠ್ಠಲನ್ನ**
ಸುವನಜ ಚರಣಸೇವೆಯನಿತ್ತ ಗುರುವರ|| ೫



## ೩೧

## (ಮೋಹನವಿಠ್ಠಲಾಂಕಿತ)
## (ವೃಂದಗಾನದಲ್ಲಿ)

**ರಾಗ-ಮೋಹನ** **ಝಂಪೆತಾಳ**

ವಿಜಯರಾಯರ ಚರಣ ನಿಜವಾಗಿ ನಂಬಲು
ಅಜನಪಿತನು ತಾನೆ ಒಲಿವಾ ಪ

ಧ್ವಜಕೇತನ ಗುಣವ್ರಜವ ಕೊಂಡಾಡುವಾ
ಸುಜನ ಮಂದಾರನೀತ–ಪ್ರಖ್ಯಾತ|| ಅ.

ವಿ ಎಂದು ನುಡಿಯಲು ವಿಷಯಲಂಪಟದೂರ
ಜ ಎಂದು ನುಡಿಯಲು ಜನನಹಾನಿ
ಯ ಎಂದು ಕೊಂಡಾಡೆ ಯಮಭಟರು ಓಡುವರು
ರಾಯ ಎಂದೆನಲು ಹರಿಕಾವಾ–ವರವೀವಾ|| ೧

ಇವರ ಸ್ಮರಣೆಯೆ ಸ್ನಾನ ಇವರ ಸ್ಮರಣೆಯೆ ಧ್ಯಾನ
ಇವರ ಸ್ಮರಣೆಯೆ ಅಮೃತಪಾನ
ಇವರ ಸ್ಮರಣೆಯ ಮಾಡೆ ಯುವತಿಗಕ್ಷಯವಿತ್ತ
ತ್ರಿವಿಕ್ರಮನು ಮುಂದೆ ನಲಿವಾ–ಒಲಿವಾ|| ೨

ವಾರಣಾಸಿಯ ಯಾತ್ರೆ ಮೂರು ಬಾರಿ ಮಾಡಿ
ಮಾರಪಿತನೊಲುಮೆಯನು ಪಡೆದು
ಮೂರವತಾರದಾ ಮಧ್ವಮುನಿರಾಯರ
ಚಾರುಚರಣವನು ಭಜಿಪಾ–ಮುನಿಪಾ|| ೩

ಪುರಂದರದಾಸರಾ ಪರಮಾನುಗ್ರಹಪಾತ್ರ
ಗುರು ವಿಜಯರಾಯನೀತಾ
ಸಿರಿವಿಜಯವಿಠ್ಠಲನ್ನ ಶ್ರೀನಿವಾಸಾರ್ಯರು
ಹರಿಯಾಜ್ಞೆಯಿಂದ ಕೊಟ್ಟರೂ–ದಿಟ್ಟರೂ|| ೪

ದಾನಧರ್ಮಾದಿ ಮಹಾ ಔದಾರ್ಯಗುಣ ಶೌರ್ಯ
ಶ್ರೀನಿವಾಸನ ಪ್ರೇಮಕುಮಾರಾ
ಮಾನವೀಸೀಮೆ ಚೀಕನಪರಿನಿವಾಸ ನೋ
ಹನ್ನವಿಠ್ಠಲನ್ನ ನಿಜದಾಸಾ–ಉಲ್ಲಾಸಾ ೫



# ೩೨

## (ವೇಣುಗೋಪಾಲವಿಠ್ಠಲಾಂಕಿತ)

## (ವೃಂದಗಾನದಲ್ಲಿ)

ರಾಗ–ಪಂತುವರಾಳಿ ಆದಿತಾಳ

ಕಾಯೋ ಕಾಯೋ ಕಾಯೋ–ವರವೀಯೋ|| ಪ

ಕಾಯೋ ಕಾಯೋ ವರವೀಯೋ ವಿಜಯಗುರು
ರಾಯ ನೀನಲ್ಲದುಪಾಯ ಮತ್ತಿಲ್ಲ ಅ

ತಾಪತ್ರಯ ಬಲುದ್ದೀಪನವಾಗಿದೆ
ನೀಪರಿಪಾಲಿಸದೀಪರಿ ಥರವೇ|| ೧

ಪಾಪಗಳೆಣಿಸದೆ ಪಾವನ ಮಾಳ್ಪದು
ಶ್ರೀಪತಿ ಪಡೆದ ಸುರಾಪಗದಂತೆ|| ೨

ಸ್ವೀಕರಿಸೆನ್ನ ನಿರಾಕರಿಸದೆ ಬಲು
ವ್ಯಾಕುಲನಾಗಿಹೆ ನೀ ಕರುಣದಲಿ|| ೩

ದೂರ ನೀ ನೋಡಲು ಆರು ಇಲ್ಲವೊ ಗತಿ
ಕಾರುಣ್ಯದಿಂದ ನಿವಾರಿಸೊ ದುರಿತ|| ೪

ಒಂದರಿತವನಲ್ಲ ಇಂದಿರೇಶನ ಪದ
ದ್ವಂದ್ವವ ತೋರೋ ಹೇ ತಂದೆ ಕರುಣದಿ|| ೫

ಮಾನವರೊಳಗೆಲ್ಲ ಈ ನರಮೂರ್ಖನು
ಏನು ಅರಿಯ ಬಲು ದೀನನಾಗಿಹನು|| ೬

ಆಲಸ್ಯ ತಾಳದು ಪಾಲಿಸು ವೇಣುಗೋ
ಪಾಲನವಿಠ್ಠಲನ ಆಳು ಕೃಪಾಳು॥ ೬



೩೩

(ರಘುಪತಿವಿಠ್ಠಲಾಂಕಿತ)

ರಾಗ–ಅರಭಿ ಆದಿತಾಳ

ವಿಜಯರಾಯ ಗುರು ರಾಜಾಧಿರಾಜ ಮಹ
ರಾಜ ಶಿರೋರತುನಾ॥ ಪ

ತ್ಯಜಿಸದೆ ನಿಮ್ಮಯ ಪದಾಂಬುಜ ಬಿಡೆನೆಂಬೋ
ಸುಜನರ ಪಾಲಿಸಯ್ಯ॥ ಅ

ಜ್ಞಾನಭಕುತಿ ಕೊಡು ಗಾನಶೀಲನಮಾಡು
ಹೀನ ಮನವ ಕೆಡಿಸೊ
ಆನೆಂಬೊ ಅಹಂಕಾರವನೆ ತೊಲಗಿಸೋ
ನಿನ್ನವರನೆನಿಸೋ
ಧೇನಿಸುವಂದದಿ ಹರಿಯ ಪಾದಾಂಬುಜ
ಮಾನಸದಲಿ ನಿಲಿಸೋ
ಕಾಣಿಸಿಕೊಡು ನಾನು ಜೀವನು ನಿಜವೆಂಬೊ
ಜ್ಞಾನ ಮನಕೆ ಬರಿಸೊ॥ ೧

ಮೌನವಿರಲಾರು ಹೀನತಿ ನುಡಿಯಲು
ಪ್ರಾಣಪ್ರೇರಕರಿಂದಲೀ
ಆನೇನಾಡುವುದಿಲ್ಲ ಆನೆ ಎನ್ನುವೆನಲ್ಲ
ಆನೆ ಸ್ವತಂತ್ರನಲ್ಲ

ದೀನನಾಗೆರಗಿ ಸಜ್ಜನರ ಪದಾಬ್ಜಕೆ
ರೇಣು ನಾನಾಗಿರಲಿ
ನೀನೆ ಗತಿಯೆಂದು ನಿನ್ನನ ಮೊರೆಹೊಕ್ಕೆ
ಕ್ಷೋಣಿಯೊಳಗೆ ಬಳಲೀ॥ ೨

ನಿಮ್ಮ ಕೊಂಡಾಡುವ ಬುಧರು ಕಾಣಲು ಅವ
ರೆಮ್ಮಾಪ್ತರೆಂದೆನಲೀ
ನಿಮ್ಮ ಪುಣ್ಯದಪುತ್ರ ಗೋಪಾಲದಾಸರು
ನಮ್ಮ ರಕ್ಷಕರಾಗಲೀ
ಈ ಮಹಿಯೊಳಗೇಸುಕಾಲವಾದರು ಪುಣ್ಯ
ಸಂಬಂಧ ಕೆಡದಿರಲಿ
ಸುಮ್ಮನಸರೀಶ ರಘುಪತಿವಿಠ್ಠಲ
ಎಮ್ಮ ಸ್ವಾಮಿಯಾಗಲೀ॥ ೩



## ೩೪

## (ವ್ಯಾಸವಿಠ್ಠಲಾಂಕಿತ)

## ಶ್ರೀ ವಿಜಯಕವಚ (ನಕ್ಷಮಾಲಿಕಾಸ್ತೋತ್ರ)
## (ವೃಂದಗಾನದಲ್ಲಿ)

**ರಾಗ–ಗೋಪಿಗೀತೆಯಮಟ್ಟು** **ಆದಿತಾಳ**

ಸ್ಮರಿಸಿ ಬದುಕಿರೋ ದಿವ್ಯ ಚರಣಕೆರಗಿರೋ
ದುರಿತ ತರಿದು ಪೊರವ ವಿಜಯಗುರುಗಳೆಂಬರಾ॥ ಪ

ದಾಸರಾಯನಾ ದಯವ ಸೂಸಿ ಪಡೆದನಾ
ದೋಷರಹಿತನಾ ಸಂತೋಷಭರಿತನಾ ೧

ಜ್ಞಾನವಂತನಾ ಬಲು ನಿಧಾನಿ ಶಾಂತನಾ
ಮಾನವಂತನಾ ಮಹವದಾನ್ಯದಾಂತನಾ॥ ೨

ಹರಿಯ ಭಜಿಸುವಾ ನರಹರಿಯ ಯಜಿಸುವಾ
ದುರಿತ ತ್ಯಜಿಸುವಾ ಜನಕೆ ಹರುಷ ಸುರಿಸುವಾ॥ ೩

ಮೋದಭರಿತನಾ ಪಂಚಭೇದವರಿತನಾ
ಸಾಧುಚರಿತನಾ ಮನವಿಷಾದ ಮರೆತನಾ॥ ೪

ಇವರ ನಂಬಿದಾ ಜನಕೆ ಭವವಿದೆಂಬುದೂ
ಹವಣವಾಗದೋ ನಮ್ಮ ವರಮತವಿದೂ॥ ೫

ಪಾಪಕೋಟಿಯಾ ರಾಶಿ ಲೇಪವಾಗದೋ
ತಾಪಕಳೆವನೋ ಬಲು ದಯಾಪಯೋನಿಧಿ॥ ೬

ಕವನರೂಪದೀ ಹರಿಯಸ್ತವನ ಮಾಡಿದಾ
ಭುವನ ಬೇಡಿದಾ ಮಾಧವನ ನೋಡಿದಾ॥ ೭

ರಂಗನೆಂದನಾ ಭವವು ಹಿಂಗಿತೆಂದನಾ
ಮಂಗಳಾಂಗನಾ ಅಂತರಂಗವರಿತನಾ॥ ೮

ಕಾಶಿನಗರದಲ್ಲಿದ್ದ ವ್ಯಾಸದೇವನಾ ದಯವ
ಸೂಸಿ ಪಡೆದನಾ ಉಲ್ಲಾಸತನದಲೀ॥ ೯

ಚಿಂತೆ ಬ್ಯಾಡಿರೋ ನಿಶ್ಚಿಂತರಾಗಿರೋ
ಶಾಂತಗುರುಗಳಾ ಪಾದವಾಂತು ನಂಬಿರೋ॥ ೧೦

ಖೇದವಾಗದೋ ನಿಮಗೆ ಮೋದವಾಹುದೋ
ಆದಿದೇವನಾ ಸುಪ್ರಸಾದವಾಹುದೋ॥ ೧೧

ತಾಪತಡೆವನೋ ಬಂದ ಪಾಪ ಕಡಿವನೋ
ಶ್ರೀಪತಿಯಪಾದಸಮೀಪವಿಡುವನೋ॥ ೧೨

ಗಂಗೆ ಮಿಂದರೇ ಮಲವು ಹಿಂಗಿತಲ್ಲದೇ
ರಂಗನೊಲಿಯನೋ ಭಕ್ತರಸಂಗ ದೊರೆಯದೇ॥ ೧೩

ವೇದ ಓದಲೂ ಬರಿದೆ ವಾದಮಾಢಲೂ
ಹಾದಿಯಾಗದೋ ಬುಧರ ಪಾದ ನಂಬದೇ ೧೪

ಲೆಕ್ಕವಿಲ್ಲದಾ ದೇಶ ತುಕ್ಕಿ ಬಂದರೂ
ದುಃಖವಲ್ಲದೇ ಲೇಶಭಕ್ತಿ ದೊರೆಯದೋ॥ ೧೫

ದಾನಮಾಡಲೂ ದಿವ್ಯಗಾನ ಪಾಡಲೂ
ಜ್ಞಾನ ದೊರೆಯದೋ ಇವರ ಅಧೀನವಾಗದೇ॥ ೧೬

ನಿಷ್ಠಯಾತಕೇ ಕಂಡ ಕಷ್ಟವ್ಯಾತಕೇ
ದಿಟ್ಟಗುರುಗಳಾ ಪಾದ ಮುಟ್ಟಿ ಭಜಿಸಿರೋ॥ ೧೭

ಪೂಜೆಮಾಡಲೂ ಕಂಡಗೋಜು ಬೀಳಲೂ
ಬೀಜಮಾತಿನಾ ಫಲಸಹಾಜ ದೊರೆಯದು ೧೮

ಸುರರು ಎಲ್ಲರೂ ಇವರ ಕರವ ಪಿಡಿವರೋ
ತರಳರಂದದೀ ಹಿಂದೆ ತಿರುಗುತಿಪ್ಪರೋ॥ ೧೯

ಗ್ರಹಗಳೆಲ್ಲವೂ ಇವರ್ಗೆ ಸಹಾಯ ಮಾಡುತಾ
ಅಹೋರಾತ್ರಿಲೀ ಸುಖದ ನಿವಹ ಕೊಡುವುವೋ॥ ೨೦

ವ್ಯಾಧಿಬಾರದೋ ದೇಹಬಾಧೆ ತಟ್ಟದೋ
ಆದಿದೇವನಾ ಸುಪ್ರಸಾದವಾಹುದೋ॥ ೨೧

ಪತಿತ ಪಾಮರಾ ಮಂದಮತಿಯು ನಾ ಬಲೂ
ತುತಿಸಲಾಪನೇ ಇವರ ಅತಿಶಯಂಗಳಾ ೨೨

ಕರುಣದಿಂದಲೀ ಎಮ್ಮ ಪೊರೆವನಲ್ಲದೇ
ದುರಿತಕೋಟಿಯಾ ಬೇಗ ತರಿವ ದಯದಲೀ॥ ೨೩

ಮಂದಮತಿಗಳೂ ಇವರ ಚೆಂದವರಿಯದೇ
ನಿಂದೆ ಮಾಡಲೂ ಭವದ ಬಂಧ ತಪ್ಪದೋ॥ ೨೪

ಇಂದಿರಾಪತೀ ಇವರ ಮುಂದೆ ಕುಣಿವನೋ
ಅಂದವಚನವಾ ನಿಜಕೆ ತಂದುಕೊಡುವನೋ॥ ೨೫

ಉದಯಕಾಲದಿ ಈ ಪದವ ಪಠಿಸಲೂ
ಮುದಡನಾದರೂ ಜ್ಞಾನ ಉದಯವಾಹುದೋ॥ ೨೬

ಸಟೆ ಇದಲ್ಲವೋ ವ್ಯಾಸವಿಠ್ಠಲ ಬಲ್ಲನೋ
ಪಠಿಸಬಹುದಿದೂ ಕೇಳಿ ಕುಟಿಲರಹಿತರು॥ ೨೭



೩೫

(ಜಗನ್ನಾಥವಿಠ್ಠಲಾಂಕಿತ)

ರಾಗ–ಬಿಲಹರಿ ಆದಿತಾಳ

ರತುನ ದೊರಕಿತಲ್ಲಾ–ಎನಗೆ ದಿವ್ಯ
ರತುನ ದೊರಕಿತಲ್ಲಾ ॥ ಪ

ರತುನ ದೊರಕಿತು ಎನ್ನ ಜನ್ಮ ಪ
ವಿತ್ರವಾಯಿತು ಈ ದಿನದಿ ನಾ
ಯತನಸಗ್ಯಯುತ ಬರುತಿರಲು ಪ್ರ
ಯತನವಿಲ್ಲದೆ ವಿಜಯರಾಯರೆಂಬೋ। ಅ

ಪಥದೀ ನಾ ಬರುತಿರಲು–ಥಳಥಳವೆಂದು
ಅತಿಕಾಂತಿ ಝಳಪಿಸಲು–ಬೆರಗಾಗುತ
ಅತಿಚೋದ್ಯವ ಕಾಣಲು–ಸೇವಿಸುತಿರೆ
ಸತತ ಕರಪಿಡಿದಾದರಿಸಿ ಮನೋ
ರಥವ ಪೂರೈಸುತಲಿ ಎನಗೆ ಸ
ನ್ಮತಿಯ ಪಾಲಿಸಿ ಮೋಕ್ಷಪಥವನೆ
ಅತಿಶಯದಿ ತೋರಿಸುತ ಪೊರೆಯುವ ೧

ಜ್ಞಾನವೆಂಬೋ ಪುತ್ಥಳಿ–ಕಂಬಿಯಲಿ
ಆಣಿ ಮುತ್ತಿನ ಭಕ್ತಿಲಿ–ಸುಕೃತಮಾಲಾ
ನಾನಾವಿಧ ಹವಳದಲಿ–ಸೇರಿಸುತ್ತ
ಪ್ರಾಣಪದಕವೆಂಬೊ ಮಾಲೆ ಅನು
ಮಾನವಿಲ್ಲದೆ ಕೊರಳಿಗ್ಹಾಕುತ
ಗಾನದಿಂದಲಿ ಕುಣಿದು ಪಾಡುತ
ದೀನಜನರುದ್ಧಾರಗೈಯುವ॥ ೨

ಶೋಧಿಸಿ ಗ್ರಂಥಗಳ–ಸುಳಾದಿಯ
ಮೋದದಿಂದಲಿ ಬಹಳ–ಕವಿತಾ ಮಾಡಿ
ಸಾಧುಜನಕೆ ಸುಕಾಲ–ಆನಂದವಿತ್ತು

ವಾದಿಜನರನು ಗೆದ್ದು ವಾದಿಸಿ (ಬೋಧಿಸಿ)
ಮಾಧವ ಜಗನ್ನಾಥವಿಠ್ಠಲನ
ಪಾದಕಮಲಕೆ ಮಧುಪನಂದದಿ
ಸಾದರದಿ ತೋರುತಲಿ ಮೆರೆಯುವ॥ ೩



## ೩೬

## (ಪ್ರಾಣೇಶವಿಠ್ಠಲಾಂಕಿತ)

**ರಾಗ–ಶಂಕರಾಭರಣ** **ಆದಿತಾಳ**

ವಿಜಯರಾಯರಂಘ್ರಿಜಲಜವ
ಭಜಿಸಿ ಜನರು ತಡೆಯದಲೆ॥ ಪ

ಕುತರ್ಕಗಿರಿಗಳ ಹತಮಾರ್ಗೈಸಿದ
ಶತಕ್ರತ್ವಾಖ್ಯರ ಸುತರಾದ–ಗುರು॥ ೧

ವಸುಧೆಯೊಳಗನ್ಯವೇಷದಿಂ ಚರಿಸಿದ
ಲೇಸಾಗಿ ಸಾರಥಿ ಶ್ರೀಶನಾದ–ಗುರು॥ ೨

ಖ್ಯಾತಿಯಿಂ ಲೋಕದಿ ವಾತಜನೊಲಿಸಿದ
ದಾತನ ಅರಿಯ ಜಗನ್ನಾಥನುಳಿದು–ಗುರು ೩

ದುಷ್ಟರ ಜರೆದ ವಿಶಿಷ್ಟರ ಪೊರೆದ ಶ್ರೀ
ಕೃಷ್ಣನ್ನ ಸಖನೋರ್ವ ಸೃಷ್ಟಿಯೊಳಗೆ–ಗುರು ೪

ಈಶಗೊಲಿದ ತುರಗಾಸ್ಯನಾಳುಗಳೊಳು
ಈಸುಗುಣಿಗೆ ಕಾಣೆನಾ ಸರಿಯಾ–ಗುರು॥ ೫

ತಾತನಾಲಯಕ್ಕೈದಿ ನೂತನ ವಿದ್ಯಂಗ
ಛಾತುರದಲಿಯ್ಯದಿದಾತ ನೀತ ಗುರು॥ ೬

ಪ್ರಾಣೇಶವಿಠ್ಠಲನು ತಾ ನುಡಿಸದೆ ತುಟಿಯನು
ಪೊಂದಿಸ ಸರಜ ಸ್ಥಾಣುವೆನುವ–ಗುರು ವಿಜಯರಾಯರ॥ ೭



## ೩೭

(ವೆಂಕಟವಿಠ್ಠಲಾಂಕಿತ)

(ವೃಂದಗಾನದಲ್ಲಿ)

ರಾಗ–ಸೌರಾಷ್ಟ್ರ ಅಟ್ಟತಾಳ

ನಂಬಿದೆ ನಾ ನಿನ್ನ ಚರಣಕಮಲವನ್ನು ವಿಜಯರಾಯ॥ ಪ

ಬೆಂಬಿಡದೆಲೆ ವಿಷಯ ಹಂಬಲ ಬಿಡಿಸಯ್ಯ ವಿಜಯರಾಯ॥ ಅ

ತಾಯಿ ಎಳೆಯ ಶಿಶುವನು ಬಿಟ್ಟಿರುವುದುಂಟೆ ವಿಜಯರಾಯ
ಬಾಯ ಬಿಡುವೆ ನಾ ಭವದಲ್ಲಿ ಸಿಗಬಿದ್ದು ವಿಜಯರಾಯ
ನೋಯಲಾರೆನೂ ಎನ್ನ ಕಾಯೊ ಕರುಣದಿಂದ ವಿಜಯರಾಯ
ಕಾಯ ಮನವು ನಿನ್ನ ಚರಣಕ್ಕೊಪ್ಪಿಸಿದೆನೊ ವಿಜಯರಾಯ॥ ೧

ಎತ್ತಗಾಣದೆ ಕರ್ಮಕತ್ತಲೆಯೊಳು ಸುತ್ತಿ ವಿಜಯರಾಯ
ತತ್ತಳಗೊಳುತಿಪ್ಪೆ ಎತ್ತಿರೊ ಎನ್ನ ವಿಜಯರಾಯ
ಪೆತ್ತತಂದೆಗೆ ಮಗ ಭಾರವಾಗುವುದುಂಟೆ ವಿಜಯರಾಯ
ವಿತ್ತಭಾಗ್ಯವನೊಲ್ಲೆ ಎಂದೆಂದಿಗೂ ನಾನು ವಿಜಯರಾಯ॥ ೨

ತುಂಬಿದ ಭಂಡಾರ ಸಂಪತ್ತು ಎನಗೆಂದು ವಿಜಯರಾಯ
ಹಂಬಲಿಸುತ ಬಲು ಸಂಭ್ರಮದಿರುತಿಪ್ಪೆ ವಿಜಯರಾಯ
ಸಂಬಳಕಾರ ಶಿಷ್ಯ ನಿನಗಲ್ಲ ಕೇಳಯ್ಯ ವಿಜಯರಾಯ
ಬಿಂಬ ಶ್ರೀ ವೆಂಕಟವಿಠ್ಠಲನ ತೋರೊ ನೀ ವಿಜಯರಾಯ॥ ೩



೩೮

(ಬಾದರಾಯಣವಿಠ್ಠಲಾಂಕಿತ)

**ರಾಗ–ಮೋಹನ** **ಝಂಪೆತಾಳ**

ನೀನುದಾಸೀನಮಾಡಲೇಸುಗತಿ ಮುಂದೆನಗೆ
ದೀನಜನ ದಿವಿಜವೃಕ್ಷ॥ ಪ

ಜ್ಞಾನಿಕುಲತಿಲಕ ಗೋಪಾಲದಾಸರಿಗೊಲಿದ
ಜಾಣಗುರು ವಿಜಯರಾಯಾ–ಜೀಯಾ॥ ಅ

ಪಡೆದ ತಾಯಿ ತಂದೆಗಳು ಒಡಲೊಳುದಿಸಿದ ಮಗನ
ಬಿಡಲು ಪಾಲಿಸುವರಾರೋ
ಗಿಡಹಾಕಿದವ ಗಿಡದ ಬುಡ ಕಡಿವೆನೆನಲು ಕೈ
ಪಿಡಿದು ನಿಲ್ಲಿಸುವರಾರೋ॥

ನಡುನೀರಿನೊಳು ನಾವೆ ನಡೆಸುವನೆ ಕೈಬಿಡಲು
ದಡಕೆ ಸೇರಿಸುವರಾರೋ
ಪೊಡವಿಯೊಳು ಅರಸು ಬಲು ಬಡವನಪರಾಧ
ಒಡಂಬಡದೆ ದಣಿಸುತಿರೆ ದಿಕ್ಕುದಾರೆಲೋ–ಗುರುವೇ॥

ಕರಪಿಡಿದು ಸತಿಯು ಪರಪುರುಷಗೊಪ್ಪಿಸಿ ಪತಿಯು
ಜರಿದು ಬಿಡುವುದು ನ್ಯಾಯವೇ॥
ಕುರುಡನಿಗೆ ಕರವಿತ್ತು ಕರೆದೊಯ್ದು ಕುಣಿಯಲ್ಲಿ
ಜರಿದು ನಗುವುದು ನ್ಯಾಯವೇ॥
ಕುರಿ ಹಿಂಡುಗಳ ಸಾಕಿ ಕರೆದು ಹೆಬ್ಬುಲಿ ನಾಯಿ
ನರಿಗುಣಿಸುವುದು ನ್ಯಾಯವೇ
ನಿರುತ ತವ ಚರಣ ನೆರೆತಂಪಿನೊಳಗೆನ್ನ
ಕರೆದು ಸಾಕದೆ ದೂರ ನೋಡುವರೇ–ಗುರುವೇ॥

ಬಿಸಲಿಂದ ಬಾಯಾರಿ ಹಸುಗೂಸು ನೀರಡಿಸಲು
ಬಿಸಿಬಿಸಿ ಜಲವೀವರೆ
ಹಸಿವರಿತು ತಾನೆ ತನ್ನ ಶಿಶುವಿಂಗೆ
ಮೋಸದಲಿ ವಿಷಬೆರೆಸಿ ತುತ್ತೀವರೇ॥
ಅಸಮಕರುಣಾಬ್ಧಿ ವಶವಾದವರ ಕೈಬಿಡಲು
ಕುಶಲ ಕರುಣಿಗಳು ನಗರೇ
ಋಷಿಪದಾರ್ಚಿತ ಬಾದರಾಯಣವಿಠ್ಠಲ ನಿ
ನ್ನೊಶವಾದ ಸೌಭಾಗ್ಯದಲಿ ಮೆರೆವರೇ–ಗುರುವೇ॥



೩೯

## (ಶ್ಯಾಮಸುಂದರವಿಠ್ಠಲಾಂಕಿತ)

## ಸುಳಾದಿ

### ||ಧ್ರುವತಾಳ||

ನಿಷ್ಠೆಯಿಂದಲಿ ಮನಮುಟ್ಟಿ ಭಜಿಸು ವಿಜಯ
ವಿಠ್ಠಲದಾಸರ ಮನವೇ ನಿತ್ಯಾ
ಎಷ್ಟು ಹೇಳಲಿ ಇವರ ಉತ್ಕೃಷ್ಟಮಹಿಮೆ ಕೃಪಾ
ದೃಷ್ಟಿಯಿಂದಲಿ ನೋಡಿದಾಕ್ಷಣದೀ
ಭ್ರಷ್ಟಮನಸಿನಿಂದ ಬಿಟ್ಟು ಧರ್ಮಾಚರಣೆ
ದುಷ್ಟಕೃತ್ಯವ ಗೈದ ದೋಷದಿಂದ ತಟ್ಟಿದ ದುರಿತೌಘ
ಮೊಟ್ಟೆಗಳೆಲ್ಲವು ಸುಟ್ಟು ಭಸ್ಮೀಭೂತವಾದ ಬಳಿಕಾ
ಪುಟ್ಟಿ ಸುಜ್ಞಾನ ಭಕ್ತಿ ವೈರಾಗ್ಯಭರಿತರಾಗಿ
ಮೆಟ್ಟುವರೋ ಕೈವಲ್ಯಪಥವಾ
ಸೃಷ್ಟಿ ಸಂಹಾರಕರ್ತರಿದ್ದಲ್ಲಿ ಪೋಗಿ
ಸಿಟ್ಟಿನಿಂದಲಿ ಕೊಟ್ಟು ಶಾಪವನ್ನು
ಥಟ್ಟನೆ ವೈಕುಂಠ ಪಟ್ಟಣಕ್ಕೆ ತೆರಳಿ
ಪಟ್ಟದರಸಿಯಾದ ಲಕುಮಿಸಹಿತಾ
ಸೃಷ್ಟಾಂಡಾ ಭಾರ ಶಿರದಿ ಇಟ್ಟಂಥ ಫಣಿಪತಿಯಾ
ಪಟ್ಟೆಪರ್ಯಂಕದಲ್ಲಿ ಪವಡಿಸಿಪ್ಪಾ
ದಿಟ್ಟಮೂರುತಿ ಶ್ಯಾಮಸುಂದರವಿಠ್ಠಲಗೆ
ಪೆಟ್ಟುಹಾಕಿದ ಪರಮ ಘಟ್ಟಿಗರಿವರು|| ೧

||ಮಠ್ಯತಾಳ||

ಎರಡನೆಯ ಯುಗದಲಿ ಸುರಲೀಲಯೆಂಬ
ತರುಚರ ರೂಪದಲಿ ತರಣಿಕುಲೋದ್ಭವನಾ
ಚರಣವ ಸೇವಿಸಿ ಕರುಣ ಸಂಪಾದಿಸಿದಾ
ಮರಳಿ ನಿಕಂಷಾನಾಮದಲಿ ದ್ವಾ
ಪರದಲಿ ಪುಟ್ಟಿ ಯಾದವನೆನಿಸಿದಾ
ಅರಹಲೇನು ಮತ್ತೆ ಚರಣಜಕುಲದಲ್ಲಿ
ಧರಿಸುತ ಜನ್ಮವನು ಸಿರಿ ಶ್ಯಾಮಸುಂದರವಿಠ್ಠನಂಘ್ರಿಗೆ
ಶರ ಧನುವಿಗೆ ಹೂಡಿ ಗುರಿ ನೋಡಿ ಎಸೆದಾ॥ ೨

||ತ್ರಿವಿಡಿತಾಳ||

ಪುನಹ ಕಲಿಯುಗದಲ್ಲಿ ಅನುಪಮ ಸನ್ಮಹಿಮ
ಅನಿಮಿಷನಾಥಾಖ್ಯದಾಸಾರ್ಯರಾ
ಮನೆಯಲ್ಲಿ ಗೋವತ್ಸವೆನಿಸಿ ವಾಸಿಸಿ ಹರಿಯಾ
ಗುಣನಾಮ ಕೀರ್ತನ ಶ್ರವಣಗೈದು
ಘನಪುಣ್ಯದಿಂ ಪಶುತನವು ಪೋಗಾಡುತ್ತಾ
ತನಯರಾಗಿ ಅವರ ಬಳಿಯಲ್ಲಿದ್ದು
ಮುನಿ ಮಧ್ವಪತಿಯೆಂಬೊ ಪೆಸರಿನಿಂದಲಿ ಸದಾ
ಮಿನರುವರೊಡಗೂಡಿ ಕವನದಿಂದಾ
ಆನನುತ ಶ್ರೀ ಶ್ಯಾಮಸುಂದರವಿಠ್ಠಲನ್ನ
ಮನದಿ ಕೊಂಡಾಡುತ್ತ ಅನುಗ್ರಹ ಪಡೆದರೂ॥ ೩

||ಅಟ್ಟತಾಳ||

ಕ್ಷಿತಿಯೊಳು ಮಾನವೀ ಸೀಮೆಗೆ ಸೇರಿದ
ಕ್ಷಿತಿಧರದೇವನ ಸುತೆಯ ತೀರದಿ

ಕ್ಷಿತಿರುಹವರ ನರಹರಿಯು ಸಾನ್ನಿಧ್ಯದಿ
ಅತಿಪುಣ್ಯಕರ ಪ್ರಟ್ಟಬದರಿ ಸುಕ್ಷೇತ್ರದಿ
ಸತಿಶಿರೋಮಣಿಯಾದ ಕೂಸಮ್ಮನುದರದಿ
ಸುತನಾಗಿ ಪ್ರತಿದಿನ ಶಶಿಯಂತೆ ಬೆಳೆಯುತ್ತ
ಅತಿಶಯ ದಾರಿದ್ರ್ಯ ವ್ಯಥೆಯು ಆವರಿಸಲು
ಖತಿಲೇಶವಾದರೂ ಸಹಿಸುತ್ತ ಶಾಂತದಿ
ಮತಿಯಿಂದ ಮನದೊಳು ಯೋಚಿಸಿ ಮುಂದಣ
ಗತಿಗಾಗಿ ತಾ ಪೋಗಿ ವಾರಣಾಸಿಯಲ್ಲಿ
ಪತಿತರುದ್ಧರಿಸುವ ಸುರನದಿಯ ಮಿಂದು
ಸಿತಮನದವರಾಗಿ ಇರುತಿರಲೊಂದಿನ
ಸ್ತುತಿಸುತ್ತ ಹರಿಪಾದ ಮಲಗಿರೆ ಸ್ವಪ್ನದಿ
ಶತಧೃತಿನಂದನ ಕರೆದೊಯ್ದಾಚೆಗೆ ಇದ್ದ
ಕ್ರತುಭುಜ ತತಿಯಿಂದ ಸುತನಾದ ಶ್ರೀ ಶುಕ
ಪಿತನಂಘ್ರಿಕಮಲಕ್ಕಾನುತಿಸಿ ಬಿನ್ನೈಸಿದಾ
ಹಿತದಿ ಸಹೋದರ ಇವನ ರಕ್ಷಿಸೆನೆ
ಶ್ರುತಿಗೆ ಸುಮ್ಮತ ಮಧ್ವಮತದ ರಹಸ್ಯದ
ಕೃತಿಗಳ ರಚಿಸು ಪ್ರಾಕೃತ ಸುಭಾಷೆಯಲಿ
ಸತತ ಶ್ರವಣದಿಂದಾ ಮತಿಮಂದಜನರು ಉ
ಧೃತರಾಗುವಂದದಿ ಕಥೆ ಸುತಗೊರೆದ ನಂ
ಕಿತವನು ಕೃಪೆಯಿಂದಾ ಯತಿಗಳ ಮನೋಹರ
ಕೃತಿದೇವಿಪತಿ ಶ್ಯಾಮಸುಂದರವಿಠ್ಠಲಾ|| ೪

||ಆದಿತಾಳ||

ಮೌನಿ ಸನ್ಮಾನಿ ಸುಜ್ಞಾನಿವರ್ಯರಾದ ಇವರ ಅ
ಮಾನುಷ ಕೃತಿಗಳು ಭಾನುವಿನ ಕಿರಣದಂತೆ
ಕ್ಷೋಣಿಯೊಳು ತುಂಬಿರಲು ಹೀನಮತಿ

ಮನುಜನಾದ ನಾನೆಂತು ಪೇಳ್ವೆನಯ್ಯ
ನೀನೇವೆ ಗತಿಯೆಂದು ಮೊರೆಹೊಕ್ಕ ದೀನರಿಗೆ
ಸಾನುರಾಗದಿ ಒಲಿದು ಪ್ರಾಣವನ್ನು
ಜ್ಞಾನವನ್ನು ದಾನವನ್ನು ಮಾಡಿಪರು
ವೇಣು ಧೇನುಪಾಲ ತುರಗಾನನ ಮೋಪನ್ನ
ಜಾಣ ಜಗನ್ನಾಥದಾಸ ಶ್ರೇಣಿಯೆ ಸಾಕ್ಷಿ ಕೇಳು
ಈ ನುಡಿ ನಿಜವೆಂದು ಮಾನಸದೊಳ
ಗನುಮಾನವಿಲ್ಲದೆ ಸದಾ
ಮಾಣದೆ ಇವರ ಪಾದ ಧ್ಯಾನಿಪರಿಗೆ ಪವ
ಮಾನಜನಕ ಶ್ಯಾಮಸುಂದರವಿಠ್ಠಲನು
ಪಾಣಿ ಪಿಡಿದು ಪರಿಪಾಲಿಸುವ ಸತತಾ॥ ೫

||ಜೊತೆ||

ಚಿಪ್ಪಶೈಲದೊಳಿಪ್ಪಾ ಅಪ್ಪನ್ನ ಭಜಿಪರಾ
ತಪ್ಪನನ್ನಿಸಿ ಕಾಯ್ವ ಶ್ಯಾಮಸುಂದರವಿಠ್ಠಲಾ||



೪೦

(ಮನೋಹರವಿಠ್ಠಲಾಂಕಿತ)

ವಾರ್ಧಿಕಷಟ್ಪದಿ — ಮೋಹನ

ದ್ವಿಜಕುಲದೊಳವತರಿಸಿ ತೀರ್ಥಯಾತ್ರೆಯ ಚರಿಸಿ।
ತ್ರಿಜಗವಂದ್ಯನ ಭಜಿಸಿ ವಿಷಯಾದಿಗಳ ತ್ಯಜಿಸಿ।
ಕುಜನ ಸಂಗವ ತೊರೆದು ವೈರಾಗ್ಯದಿಂ ಮೆರೆದು
ಕಾಮಾದಿಗಳನು ಜರಿದು॥

ರಜರಹಿತ ಕವನಗಳ ಪದಪದ್ಯಂ ಒಹಳ
ಸೃಜಿಸಿ ಶಿಷ್ಯರಿಗೊರೆದು ಕಾರುಣ್ಯದಿಂ ಪೊರೆದ।
ವಿಜಯವಿಠ್ಠಲದಾಸರಂಘ್ರಿ ಸುವಿಲಾಸದಿಂ ಸ್ಮರಿಸುತೀ
ಕೃತಿಯ ಪೇಳ್ವೆ॥



೪೧

(ಜಯೇಶವಿಠ್ಠಲಾಂಕಿತ)

(ವೃಂದಗಾನದಲ್ಲಿ)

ರಾಗ–ಗೋಪಿಗೀತೆಯ ಮಟ್ಟು ರೂಪಕತಾಳ

ವಿಜಯರಾಯರಾ ದಿವ್ಯವನಜ ನೆನೆವರ
ವಿಜಯಸಾರಥಿ ಮನದಿ ಭಜಿಪ ಸತ್ವರ॥ ಪ

ಆದಿದೇವನ ಮಹಿಮೆ ಸಾಧಿಸೀದನ
ಯಾದವೇಶನ ಕಂಡ ಮೋದಭರಿತನಾ॥ ೧

ಮನದಿ ಹರಿಯನು ಸತತ ಕುಣಿಸಿ ನಲಿವನು
ಪ್ರಣತಪಾಲನು ಅಮೃತಖನಿ ವಿಶಿಷ್ಟನು॥ ೨

ಭಕ್ತಿಯುಕ್ತಿಯು ಮಹಾವಿರಕ್ತಿ ಶಕ್ತಿಯು
ಭಕ್ತಜನರಿಗೆ ಬಿಂಬವ್ಯಕ್ತ ಮಾಡಿದಾ॥ ೩

ಅಂಬುಜಾಧವ ಇವರ ತುಂಬಿ ವೈಭವ
ತುಂಬಿ ಸುಜನರ ಕದಂಬ ನಿಲಿಸುವಾ॥ ೪

ಭಾರತೀಪತಿ ಇವರ ವೀರಸಾರಥಿ
ಸಾರಿ ಭಜಿಪರ ಸಕಲ ಭಾರವಹಿಸುವ॥ ೫

ಅಕ್ಷಯಫಲ ಅಪರೋಕ್ಷ ಕೊಡುವನು
ತ್ರ್ಯಕ್ಷವಲ್ಲಭ ಇವರ ರಕ್ಷರೆನಿಸಿಹಾ॥ ೬

ದಾಸರತ್ನನಾ ದಯವ ಸೂಸಿ ಪಡೆಯಲೂ
ಸೂಸಿ ಬರುವುದು ಜಯೇಶವಿಠ್ಠಲ॥



೪೨

(ಕಾರ್ಪರನರಹರಿ ಅಂಕಿತ)

ರಾಗ-ಆನಂದಭೈರವಿ ಛಾಪುತಾಳ

ವಿಜಯರಾಯರ ಭಜಿಸೋ। ಹೇ ಮನುಜಾ ನೀ॥ ಪ

ವಿಜಯರಾಯರ ಪಾದ ಭಜಿಸುವ ಮನುಜರ
ವೃಜಿನವಾರಿಧಿಗೆ ಕುಂಭಜರೆನಿಸಿದ ಗುರು॥ ಅ

ಮೊದಲು ಭೃಗುಮುನಿರೂಪದಿ ಶೀ
ಘ್ರದಿ ಪೋಗಿ ಬರಲು ಶ್ರೀಹರಿಲೋಕದಿ
ವಿಧಿ ವಿಷ್ಣು ಶಿವರೊಳು ಪದುಮನಾಭನಕಿಂತ
ಅಧಿಕರಿಲ್ಲೆಂದು ನಾರದಮುನಿಗರುಹಿದ॥ ೧

ಜಗದೊಳು ಸಕಲಕ್ಷೇತ್ರ ತೀರ್ಥಗಳ
ಮಹಿಮೆಯ ವರ್ಣಿಸುತ

ಖಗರಾಜಗಮನ ಶ್ರೀಭಗವದ್ಗುಣಗಳನ್ನು
ಬಗೆಬಗೆ ಪದ ಸುಳಾದಿಗಳಿಂದ ತುತಿಸಿದ॥ ೨

ಕಾಶಿಯೊಳಗೆ ಸಂಪ್ರಾಪ್ತ ಪುರಂದರ
ದಾಸರಿಂದಲಿ ಅಂಕಿತ
ಶೇಷಶಯನ ಶ್ರೀನಿವಾಸ ಕಾರ್ಪರ ನರ
ಕೇಸರಿಗತಿಪ್ರಿಯ ದಾಸರೆಂದೆನಿಸಿದ॥ ೩

೪೩

(ಉರಗಾದ್ರಿವಾಸವಿಠ್ಠಲಾಂಕಿತ)

ಭಜಿಸುವೆ ನಿನ್ನನು ವಿಜಯದಾಸಾರ್ಯನೆ ಗುರುವೆ॥ ಪ

ಭಜಿಸುವೆ ನಿನ್ನ ಪಾದ ಭಜಕಜನರ ಪಾದ
ರಜದೊಳಿಟ್ಟೆನ್ನ ರಜತಮ ಹರಿಸೊ॥ ಅ

ವಿಜಯಸಾರಥಿಪ್ರಿಯ ನಿಜದಾಸ ನೀನೆಲೊ ಗುರುವೆ
ಅಜಪಿತನಜಸುತನಜಲೋಕಗಳನ್ನೆಲ್ಲ
ವಿಜಯ ಮಾಡಿಸಿ ಜಗತಿಪ್ರದರಾರೆಂದು
ನಿಜವನರಿತು ಶ್ರೀಭುಜಗಶಯನನು
ಮೂರ್ಜಗಕೆ ದೈವವೆಂದರುಹಿದ ಭೃಗುಮುನಿ॥ ೧

ರಕ್ಷಿಸಬೇಕು ಶ್ರೀಲಕ್ಷ್ಮೀದಾಸನೆ ಗುರುವೆ
ಪಕ್ಷಿವಾಹನನ ನೀ ವಕ್ಷತಾಡನ ಮಾಡೆ
ತಕ್ಷಣ ಈ ಕ್ಷಿತಿಗಿರಿಯೊಳು ನಿಂದು
ಕುಕ್ಷಿಯೊಳು ಜಗದ್ರಕ್ಷಕನಾದ ಮು
ಮುಕ್ಷುಗಳೊಡೆಯನ ಈಕ್ಷಿಸಿದ ಧೀರಾ॥ ೨

ಉದ್ಧರಿಸಲು ನೀನುದ್ಭವಿಸಿದೆಯೊ ಗುರುವೆ
ಮಧ್ವಪತಿಯ ಅಭಿದಾನದಿ ನೀನು
ಮಧ್ವಾಗಮ ಶೋಧಿಸಿ ಸುಧೆಯ ತಂದು
ಶುದ್ಧ ಮುಗ್ಧರನೆಲ್ಲಾ ಉದ್ಧಾರಮಾಡಿ ಪ್ರ
ಸಿದ್ಧಿ ಪಡೆದ ಅನಿರುದ್ಧನ ದಾಸನೆ॥ ೩

ದ್ವಾಪರದಲಿ ನಿಕಂಪನೆಂದೆನಿಸಿ ಮೆರೆದೆ
ಶಾಪತನದ ವ್ಯಾಧರೂಪದಿಂದ ಶ್ರೀ
ಗೋಪಾಲಗೆ ಬಾಣ ಶ್ರೀಪಾದದಲ್ಲಿಟ್ಟು
ಸರ್ಪಗಿರಿಯ ಶ್ರೀ ವೆಂಕಟೇಶನೆ ನ
ಮ್ಮಪ್ಪನೆಂದು ನೀ ತ್ರಿಜಗಕೆ ತೋರ್ದೆ॥ ೪

ಪುರಂದರದಾಸರ ವರಸುಕುಮಾರ ಧೀರ
ಉರಗಾದ್ರಿವಾಸವಿಠ್ಠಲನ ದಾಸ ಭೂ
ಸುರನಾಗಿ ಚಿಪ್ಪಗಿರಿಯಲಿ ಮೆರೆಯುತ
ನಿರುತ ಶ್ರೀ ಹರಿದಾಸವೃಂದಗಳಿಂದ
ಪರಿಪರಿ ಸಾಧನ ತೋರಿ ಮೆರೆವ ಗುರು॥ ೫



೪೪

(ತಂದೆವೆಂಕಟೇಶವಿಠ್ಠಲಾಂಕಿತ)

(ವೃಂದಗಾನದಲ್ಲಿ)

ರಾಗ–ಪೀಲು ಆದಿತಾಳ

ವಿಜಯಗುರುಗಳಂಘ್ರಿ ಕಮಲ। ಭಜನೆ ಮಾಡಿರೋ॥ ಪ

ಸುಜನಕೃತಜ್ಞಾನಾಧ್ವರ ಋ। ತ್ರಿಜನ ಪಾಡಿರೋ॥ ಅ

ವಿಜ್ಞಾನಪ್ರದಜ್ಞಾತವ್ಯ ಸುಜ್ಞಾನ ಖಣಿ
ಅಜ್ಞಾನೋಗ್ರತಿಮಿರಾರ್ಕಾನುದ್ವಿಗ್ನ ಮುನಿಮಣಿ
ಯಜ್ಞಾಮುಗ್ನಾಭಿಜ್ಞ ಶ್ರೀಸರ್ವಜ್ಞ ಪ್ರಿಯವಾಣಿ
ವಿಘ್ನ ಕಳೆದಲ್ಪಜ್ಞರ ಪಾಲಿಪ ಪ್ರಾಜ್ಞ ವರದಾನಿ॥ ೧

ಅಂಭೋರುಹಸಂಭವೋದ್ಭವಾಂಭೋಜಭೃಂಗ
ಶಂಭು ಸರ್ವೋತ್ತಮಾಶಂಕ ರಂಭಾ ಮಾತಂಗಾ
ಕಂಬು ಗದಾ ಅಂಬುಜಾರಿ ಬಿಂಬ ಚಿಹ್ನಾಂಗ
ಬಿಂಬಕ್ರಿಯಭಾವಜ್ಞಾತ ಗುಂಭಾಂತರಂಗ॥ ೨

ವಿಪ್ರಜಾತಿ ವಿಪ್ರಳಖ್ಯಾತಿ ಕ್ಷಿಪ್ರಫಲದಾತ
ಸುಪ್ರಸಾದವಾಣಿ ಅಮಿತ ಪ್ರಮತಿಯತಿಹಿತ
ಅಪ್ರತೀಕಾಲಂಬ ಶ್ರೀಶ ಸ್ವಾಪರೋಕ್ಷಿತ
ಅಪ್ರಬುದ್ಧಪಾಲ ಕಾರುಣ್ಯಾಪ್ರಕಾಶಿತ ೩

ಕೀರ್ತಿತವ್ಯ ಕಾವ್ಯಾಚಾರ್ಯ ಸ್ಫೂರ್ತಿದಾಯಕ
ತೀರ್ಥಕ್ಷೇತ್ರಾದ್ಯಟನಶೀಲ ಸಾರ್ಥಕಾಯಕ
ಕಾರ್ತಸ್ವರೇತ್ಯಾದಿ ಕಾಷ್ಠ ಕೃಷ್ಣವರ್ತ್ಮಕ
ಪಾರ್ಥಮಿತ್ರ ಸ್ತೋತ್ರರತಿ ಪುಷ್ಪಸಾಯಕ॥ ೪

ದಂದ್ವಾತೀತ ಬಂಧುರಾತ್ಮನಂದತುಂದಿಲ
ಸಂದರ್ಶನಾದೇವ ಪುನಂತಿ ವಿಗತವಿಹ್ವಲ
ಮಂದಾತ್ಮನಾಗಿರಲೇನಿವರ ನಂಬಲನುಗಾಲ
ಮುಂದೆ ಕುಣಿವ ತಂದೆ ವೆಂಕಟೇಶವಿಠ್ಠಲ॥ ೫

೪೫

(ರಮಾಕಾಂತವಿಠ್ಠಲಾಂಕಿತ)

(ವೃಂದಗಾನದಲ್ಲಿ)

**ರಾಗ–ಸುರಟಿ** **ಆದಿತಾಳ**

ಚಿಪ್ಪಗಿರಿಯ ನಿಲಯಾ ಸಲಹೋ॥
ಅಪ್ಪ ವಿಜಯರಾಯಾ॥ ಪ

ಸರ್ಪಶಯನ ಕಂದರ್ಪಪಿತನ ದಯ
ತಪ್ಪದೆ ಪೊಂದಿಹ ಅಪ್ರತಿಮಾರ್ಯನೆ॥ ಅ

ಹರಿಸೇವೆಯ ಬಯಸೀ–ಜನಿಸಿದೆ
ಪರಿಪರಿ ಅವತರಿಸೀ॥
ಕರುಣದಿಂದ ಹರಿಶರಣರ ಪೊರೆಯಲು
ಧರೆಯೊಳು ಚೀಕನಪರಿವಿಲಿ ಉದಿಸಿದೆ॥ ೧

ಮೇದಿನಿಯೊಳು ಕಲಿಯಾ–ಕಲುಷಿತ
ಹಾದಿ ಆಳಿವ ಪರಿಯಾ॥
ಸಾಧುಮಾರ್ಗವ ಮೋದದಿ ತೋರುತ
ಶ್ರೀದನೊಲಿಸಿದ ಭೂರಿ ದ್ವಿಜಾಗ್ರಣಿ॥ ೨

ಭುಜಗಶಯನ ಹರಿಯಾ–ನಿರುತ
ಭಜಿಪ ಸುಜನಪ್ರೀಯಾ
ಸೃಜಿಸುತ ತೈಜಸ ನಿಜ ಗುರು ತೋರಲು
ವಿಜಯವಿಠ್ಠಲ ಹೃದಂಬುಜದಿ ನಿಮ್ಮೊಳು ನಿಂದ॥ ೩

ಗುರುಕಾರ್ಯವನೆಸಗೆ–ಧರೆಯೊಳು
ಸರಿಯಾರ್ರೈ ನಿಮಗೆ
ಹರುಷದಿಂದ ಪುರಂದರಗುರು ಸೂಚಿಸೆ
ಧರದಿ ಶ್ರೀಪಾದವನರಿತು ಪೂರೈಸಿದೆ|| ೪

ಪವನಮತದಸಾರ–ಅರುಹುವ
ಕವನದ ವಿಸ್ತಾರ||
ಅವನಿಯೊಳಗೆ ಸತ್ಕವಿಗಳಚ್ಚರಿ
ತವಕೃತ ಸುಳಾದಿ ಪದ ನವಪೈವಿರಿ|| ೫

ಉರುತರಮುಪದೇಶ–ಭವದುರಿತ
ಹರಿಸುವ ಸಂದೇಶ||
ಮರೆಮಾಡದೆ ಬಹುಪರಿಯಲಿ ಪೇಳ್ದರಿ
ಅರಿತು ಪಠಿಸಲದ ಸಿರಿವರನೊಲಿವ|| ೬

ಕ್ಷುದ್ರ ತಮವ ಹರಿಪ–ಸುಮನಸ
ಮಧ್ವಮತಜ ದಿನಪ||
ಶುದ್ಧ ಸುವೈಷ್ಣವ ಪದ್ಧತಿ ಪಾಲಿಸಿ
ಶುದ್ಧಾಸತ್ವವ ಧಪ್ರದಿ ನಿಲಿಸಿದೆ|| ೭

ನಿಷ್ಠೆಯಿಂದ ಸಕಲಾ–ತೀರ್ಥವಿ
ಶಿಷ್ಟ ಸುಕ್ಷೇತ್ರಗಳಾ||
ದೃಷ್ಟಿಸಿ ಹರಿ ಉಂಗುಷ್ಠಜೆ ಗಂಗೆಯ
ಮುಟ್ಟಿ ಅರ್ಚಿಸಿದ ಉತ್ಕೃಷ್ಟ ಬಲಿಷ್ಠ ೮

ದಾಸರ ಸದ್ವಂಶ–ಸ್ಥಾಪಕ
ಪೋಷಕ ಭೃಗು ಅಂಶ||
ಮೀಸಲಿಂದುಪದೇಶಿಸಿ ಭಾತಿನೋ
ಶಿಷ್ಯರ ಗಣ ಸೀ ಸಲಹಿದಯ್ಯ|| ೯

ಕಿನ್ನರಿ ಕರತಾಳಾ–ಧಿಮಿಧಿಮಿ
ಕೆನ್ನುವ ಪದ ಮೇಳಾ॥
ಉನ್ನತದಲಿ ಪಾವನ್ನನ ನುತಿಪ ಪ್ರ
ಸನ್ನವದನ ಸಂಪನ್ನ ಸನ್ಮಾನ್ಯ॥ ೧೦

ಅಜಜನಕನ ಪ್ರೀತಾ–ವರ ಪಂ
ಕಜಸಖಪುರವಾಸಾ॥
ತ್ಯಜಿಸದೆ ಭಜಕರ ವ್ರಜಮಧ್ಯದಿ ಅಂ
ಗಜಪಿತಪದ ವಾರಿಜದಲಿ ನಿರತನು॥ ೧೧

ವಿಜಯತೀರ್ಥಸ್ನಾನಾ–ದರುಶನ
ಋಜುಪಥಸೋಪಾನಾ॥
ರಜತಮ ಕಳೆವುದು ಕುಜನಕೆ ದೊರಕದು
ಸುಜನರೀ ಯಾತ್ರೆಯ ಯಜಿಪರೂ ಸತತದಿ॥ ೧೨

ನಿಮ್ಮಯ ಸಂಸ್ಮರಣೆ–ಯಿಂದ ಮು
ತ್ತೊಮ್ಮೆ ಗಿರದು ಭವಣೆ॥
ಹಮ್ಮನುಳಿದು ನಿಮ್ಮ ರಮ್ಯದಿ ಗತಿ ಎನೆ
ಸುಮ್ಮನೊಲಿವ ಸಿರಿರಮ್ಮೆಯರಸ ತಾ॥ ೧೩

ಮಂದಮತಿಯು ನಾನೂ–ಘನದಯ
ಸಿಂಧು ರಕ್ಷಿಸೋ ನೀನು॥
ತಂದೆ ಮುದ್ದುಮೋಹನ್ನರ ಕರುಣದ
ಒಂದೆ ಬಲವು ಎನಗಿಂದು ಬಿನ್ನವಿಪೆ॥ ೧೪

ಶ್ರೀಪತಿ ರಮಾಕಾಂತ–ವಿಠ್ಠಲನ
ಶ್ರೀಪದ ಹೃದಯಂತ॥
ರೂಪನೋಳ್ಪ ಮುನಿ ತಾಪವಳಿದು ಭವ
ಕೂಪಕೆ ತರದಿರು ತಾಪಸರೊಡೆಯನೆ॥ ೧೫



೮೬

(ಗುರುಗೋವಿಂದವಿಠ್ಠಲಾಂಕಿತ)

(ವೃಂದಗಾನದಲ್ಲಿ)

ರಾಗ–ಸೌರಾಷ್ಟ್ರ ಆದಿತಾಳ

ವಿಜಯರಾಯ–ಗುರು ವಿಜಯರಾಯ॥ ಪ

ವಿಜಯರಾಯ–ಗುರು ವಿಜಯರಾಯ॥ ಅ

ಎರಡನೆ ಯುಗದೊಳು ವಿಜಯರಾಯ
ಸುರಲೀಲ ಕಪಿಯಾದ್ಯೋ ವಿಜಯರಾಯ
ಹರಿಕಾರ್ಯಕನುವಾಗಿ ವಿಜಯರಾಯ
ಹರಿಕರುಣಪಾತ್ರನೆ ವಿಜಯರಾಯ॥ ೧

ಶಕಟಭಂಜನವಾದ ವಿಜಯರಾಯ
ಸುಕಮಲವ ಸೇವಿಸೆ ವಿಜಯರಾಯ
ಪ್ರಕಟಯಾದವರಲ್ಲಿ ವಿಜಯರಾಯ
ನಿಕಂಪನೆನಿಸೀದೆ ವಿಜಯರಾಯ॥ ೨

ವರಕಲಿಯುಗದೊಳು ವಿಜಯರಾಯ
ಪುರಂದರದಾಸರೊೞ್ ವಿಜಯರಾಯ
ತುರುಕರು ನೀನಾಗಿ ವಿಜಯರಾಯ
ಹರಿಚರಿತೆ ಕೇಳಿದೆ ವಿಜಯರಾಯ॥ ೩

ಧರೆಸುರ ಜನುಮದಿ ವಿಜಯರಾಯ
ಗುರುಮಧ್ವಪತಿಯಾಗಿ ವಿಜಯರಾಯ
ಗುರುಚರಣಸೇವಿಸಿ ವಿಜಯರಾಯ
ಪರವಿದ್ಯಾರ್ಚಿಸಿದ್ಯೋ ವಿಜಯರಾಯ॥ ೪

ಗುರುವಾಜ್ಞದಿ ಮತ್ತೆ ವಿಜಯರಾಯ
ಶಿರಪಾದ ಪೂರೈಸೆ ವಿಜಯರಾಯ
ವರಭೂಸುರನಾಗಿ ವಿಜಯರಾಯ
ಹರಿಚರಿತೆ ಪೇಳಿದೆ ವಿಜಯರಾಯ॥ ೫

ವರಯುವಸಂವತ್ಸರ ವಿಜಯರಾಯ
ಎರಡು ನಾಲ್ಕರಮಾಸ ವಿಜಯರಾಯ
ಎರಡು ಐದನೇ ದಿನ ವಿಜಯರಾಯ
ಗುರುವಾರ ಪ್ರಹರದಿ ವಿಜಯರಾಯ॥ ೬

ವರಯೋಗಮಾರ್ಗದಿ ವಿಜಯರಾಯ
ಗುರುಗೋವಿಂದವಿಠ್ಠಲನ ವಿಜಯರಾಯ
ಚರಣಾಬ್ಜ ಸೇರುತ ವಿಜಯರಾಯ
ಮೆರೆವ ಭಕ್ತರ ಮನದಿ ವಿಜಯರಾಯ॥ ೭



# ೬ ಶ್ರೀಕನಕದಾಸವರೇಣ್ಯರು

## ೪೭

(ಪುರಂದರವಿಠ್ಠಲಾಂಕಿತ)

ರಾಗ–ಕಾಂಬೋಧಿ ಝಂಪೆತಾಳ

ಕನಕದಾಸನ ಮೇಲೆ ದಯಮಾಡಲು ವ್ಯಾಸ
ಮುನಿಮಠದ ಜನರೆಲ್ಲ ದೂರಿಕೊಂಬುವರು॥ ಪ

ತೀರ್ಥವನು ಕೊಡುವಾಗ ಕನಕನ್ನ ಕರೆ ಎನಲು
ಧೂರ್ತರಾಗಿದ್ದ ವಿದ್ವಾಂಸರೆಲ್ಲ
ಸಾರ್ಥಕಾಯಿತು ಇವನ ಸನ್ಯಾಸಿತನವೆಲ್ಲ
ಪೂರ್ತಿಯಾಯಿತು ಎನಲು ಯತಿಯು ನಗುತಿಹನು॥ ೧

ಹರಿದಿವಸದಲ್ಲವರ ಪರೀಕ್ಷಿಸಲಿಬೇಕೆಂದು
ಕರೆದು ವಿದ್ವಾಂಸರನ ಕನಕನ್ನ ಬಿಡದೆ
ಕರದಲ್ಲಿ ಕದಳಿಯ ಫಲಗಳನೆ ಇತ್ತು ನಿಂ
ದಿರದೆ ಏಕಾಂತದಲಿ ಮೆಲುವುದೆಂದೆನಲು॥ ೨

ಊರುಬಿಟ್ಟು ಬಲುದೂರದಲ್ಲಿ ತಾವ್ಹೋಗಿ
ಬೇರೆ ಬೇರೆ ಕುಳಿತು ವಿದ್ವಾಂಸರು
ಆರು ಇಲ್ಲದ ಬಳಿಯ ಮೆದ್ದೆವೆಂದರೆ ಕನಕ
ತೋರದೆನಗೇಕಾಂತವೆನುತ ಪೇಳಿದನು॥ ೩

ಪೃಥ್ವ್ಯಾದಿ ಶಬ್ದಾದಿ ಶ್ರೋತ್ರಾದಿ ವಾಗಾದಿ
ತತ್ತ್ವಗಳ ಒಳಹೊರಗೆ ತತ್ತ್ವೇಶರು
ಎತ್ತನೋಡಿದರತ್ತ ಪ್ರಾಪ್ತವಾಗಿರಲು ಹರಿ
ಮತ್ತೆಲ್ಲಿ ಮೆಲುವುದೆಂನುತ ಪೇಳಿದನು॥ ೪

ಮಾಣಿಕವು ಕೋಡಗನ ಕೈಯಲ್ಲಿ ಇದ್ದಂತೆ
ಕೋಣನೆದುರಿಗೆ ಕಿನ್ನರೀ ಮೀಟಿದಂತೆ
ವೇಣುಧ್ವನಿ ಬದಿರನ ಬಳಿ ಮಾಡಿದಂತೆ ಕಣ್ಣು
ಕಾಣದವನಿಗೆ ಕನ್ನಡಿಯ ತೋರಿದಂತೆ॥ ೫

ನೋಡಿದರೆ ಈ ಕನಕನಾಡುವ ಮಾತುಗಳ
ಮೂಢಜನರರಿಯಬಲ್ಲರೆ ಮಹಿಮೆಯನು
ನಾಡಾಡಿಯಂತೆಯೇ ಮಾಡಿಬಿಟ್ಟರು ಇವಗೆ
ನಾಡೆಲ್ಲ ಹುಡುಕಿದರು ಈಡಾರಕಾಣೆ॥ ೬

ತಮ್ಮ ಕೈಮುಷ್ಟಿಯನು ಪಿಡಿದು ಕೇಳಲು ಯತಿಯು
ತಮತಮಗೆ ತೋರಿದ್ದು ಪೇಳೆ ಬ್ರಾಹ್ಮಣರು
ಗಮ್ಮನೆ ಕನಕ ಸಿರಿ ವಾಸುದೇವನೆ ಪರ
ಬೊಮ್ಮ ಪುರಂದರವಿಠ್ಠಲನೆಂದು ಸಾರಿದನು॥ ೭



# ೭ ಶ್ರೀ ಪುರಂದರದಾಸವರೇಣ್ಯರು

**ಧ್ಯಾನಶ್ಲೋಕ:**

ಮನ್ಮನೋಭೀಷ್ಟ ವರದಂ ಸರ್ವಾಭೀಷ್ಟ ಫಲಪ್ರದಮ್।
ಪುರಂದರಗುರುಂ ವಂದೇ ದಾಸಶ್ರೇಷ್ಠಂ ದಯಾನಿಧಿಮ್ ॥೧॥

೪೮

(ಅಂಕಿತ–ಶ್ರೀಕೃಷ್ಣ–ಶ್ರೀವ್ಯಾಸರಾಜ ವಿರಚಿತ)

**ರಾಗ–ಕಾಂಬೋಧಿ** ಝಂಪೆತಾಳ

ದಾಸರೆಂದರೆ ಪುರಂದರದಾಸರಯ್ಯ॥ ಪ

ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವ॥ ಅ

ಗ್ರಾಸಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು
ದಾಸನೆಂದೂ ತುಲಸಿಮಾಲೆ ಧರಿಸೀ
ಬ್ಯಾಸರಿಲ್ಲದೆ ಅವರ ಕಾಡಿ ಬೇಡಿ ಬಳಲಿಸುತ
ಕಾಸುಗಳಿಸುವ ಪುರುಷ ಹರಿದಾಸನೇ॥ ೧

ಡಂಭಕದಿ ಹರಿಸ್ಮರಣೆ ಮಾಡಿ ಜನರಾ ಮುಂದೆ
ಸಂಭ್ರಮದಿ ತಾನುಂಬ ಊಟ ಬಯಸಿ
ಅಂಬುಜೋದ್ಭವಪಿತನ ಆಗಮಗಳರಿಯದೆ
ತಂಬೂರಿ ಮೀಟಲವ ಹರಿದಾಸನೆ॥ ೨

ಯಾಯಿವಾರವಮಾಡಿ ವಿಪ್ರರಿಗೆ ಮೃಷ್ಟಾನ್ನ
ಪ್ರೀಯದಲಿ ತಾನೊಂದು ಕೊಡದ ಲೋಭಿ
ಮಾಯ ಸಂಸಾರದಲಿ ಮಮತೆ ಹೆಚ್ಚಾಗಿಟ್ಟು
ಗಾಯನವ ಮಾಡಲವ ಹರಿದಾಸನೇ॥ ೩

ಪಾಠಕನ ತೆರನಂತೆ ಪದಗಳನು ತಾ ಪಾಡಿ
ಕೂಟಜನರಾ ಮನವ ಸಂತೋಷಪಡಿಸಿ
ಗೂಟನಾಮಗಳಿಟ್ಟು ಕೊಟ್ಟರಿಯ ತಾನೆನುತ
ತೂಟಕವ ಮಾಡಲವ ಹರಿದಾಸನೇ॥ ೪

ನೀತಿಯಿಲ್ಲವನರಿದು ನಿಗಮವೇದ್ಯನ ನಿತ್ಯ
ವಾತಸುತನಲ್ಲಿಹನ ವರ್ಣಿಸುತಲಿ
ಗೀತ ನರ್ತನದಿಂದ ಕೃಷ್ಣನ್ನ ಪೂಜಿಸುವ
ಪೂತಾತ್ಮ ಪುರಂದರದಾಸರಿವರಯ್ಯ॥ ೫



೪೯

(ವಿಜಯವಿಠ್ಠಲಾಂಕಿತ)

(ವೃಂದಗಾನದಲ್ಲಿ)

ರಾಗ–ಮಣಿರಂಗು ಛಾಪುತಾಳ

ಗುರುಪುರಂದರದಾಸರೆ ನಿಮ್ಮ ಚರಣಸರಸಿಜ ನಂಬಿದೆ॥ ಪ

ಗರುವರಹಿತರ ಮಾಡಿ ಎಮ್ಮನು ಪೊರೆವ ಭಾರವು ನಿಮ್ಮದೆ॥ ಅ

ಒಂದು ಅರಿಯದ ಮಂದಮತಿ ನಾನಿಂದು ನಿಮ್ಮನು ವಂದಿಪೆ
ಇಂದಿರೇಶನ ತಂದು ತೋರಿಸಿ ತಂದೆ ಮಾಡೆಲೊ ಸತ್ಕೃಪೆ॥ ೧

ಪುರಂದರಘಢದೊಳಗೇ ನಿಂದು ನಿರುತ ದ್ರವ್ಯವ ಗಳಿಸಿದೇ
ಪರಮಪುರುಷನು ವಿಪ್ರನಂದದ ಕರವ ನೀಡಿ ಯಾಚಿಸೆ॥ ೨

ಪರಮನಿರ್ಗುಣ ಮನವನರಿತು ಹರಿಗೆ ಸೂರೆಯ ನೀಡುತಾ
ಅರಿತು ಮನದೊಳು ಹರಿದು ಭವಗಳ ತರುಣಿಸಹಿತಾ ಹೊರಟನೆ॥ ೩

ಮಾರಜನಕನ ಸನ್ನಿಧಾನದಿ ಸಾರಗಾನವ ಮಾಡುವ
ನಾರದರೆ ಈ ರೂಪದಿಂದಲಿ ಚಾರುದರುಶನ ತೋರಿದ॥ ೪

ಅಜಭವಾದಿಗಳರಸನಾದ ವಿಜಯವಿಠ್ಠಲನ ಧ್ಯಾನಿಪ
ನಿಜ ಸುಜ್ಞಾನವ ಕೊಡಿಸಬೇಕೆಂದು ಭಜಿಪೆನೋ ಕೇಳ್ ಗುರುವರ॥ ೫



೫೦

(ವಿಜಯವಿಠ್ಠಲಾಂಕಿತ)

**ರಾಗ–ಭೂಪಾಳಿ** **ವಾರ್ಧಿಕಷಟ್ಪದಿ**

ಶರಣು ಶರಣು॥ ಪ

ಶರಣು ಶ್ರೀವ್ಯಾಸಮುನಿ ಚರಣಾಬ್ಜಭೃಂಗ ಜಯ
ಶರಣು ಸುಜ್ಞಾನ ಭಕುತಿ ವೈರಾಗ್ಯಪರನೆ ಜಯ
ಶರಣು ದಾಸೋತ್ತಮರ ಮಣಿಯ ನಿಮಗಾರೆಣೆಯೆ
ಗುರುಪುರಂದರರದಾಸರೆ॥ ಅ

ಪಾಕಶಾಸನಪುರದ ಚಿನಿವಾರ ವರದಪ್ಪ
ನಾ ಕುಮಾರಕನಾಗಿ ಜನಿಸಿ ಸಂಸಾರದೊಳ
ನೇಕ ಬಗೆಯಿಂದ ವಿಷಯಾನಂತೆ ಸಂಚರಿಸಿ
ಲೌಕೀಕಮಾರ್ಗ ತೊಳೆದೂ॥

ಈ ಕಲಿಯುಗದಲ್ಲಿ ತುಂಗಾತೀರದ ಪಂಪಾ
ರಾಕಾಬ್ಜನಂತೆ ಪೊಳೆವೋ ನಿಧಿಗೆ ಬಂದು ನಿ
ರಾಕರಿಸಿ ದುಸ್ಸಂಗ ಸದ್ವೈಷ್ಣವರಾಗಿ ಪತಿಕರಿಸಿ
ಪರಿಭಕುತಿಯನು॥ ೧

ಕಾಮಕ್ರೋಧ ಲೋಭ ಮೋಹ ಮತ್ಸರ ಡಂಭ
ಈ ಮರಿಯಾದೆಗಳ ಮರ್ಮಗಳನೆ ಕಡಿದು ನಿ
ಷ್ಕಾಮದಲಿ ಸಿರಿ ರಂಗನಾಮವನೆ ಕೈಗೊಂಡು
ಆ ಮಹಾರಚನೆಯಲಿ॥
ಸೀಮೆಯೊಳು ಪ್ರಾಕೃತದ ಗೀತೆಯಲ್ಲಿ ಕೊಂಡಾಡಿ
ತಾಮಸರ ಸದೆಬಡಿದು ಮಧ್ವಸಿದ್ಧಾಂತದೊಳು
ಆ ಮಹಾ ಬಿರುದೆತ್ತಿ ಸಾರಿ ಡಂಗುರ ಹೊಯಿಸಿ
ಕಾಮನಯ್ಯನ ಕುಣಿಸುವ॥ ೨

ಶುದ್ಧ ಭಕುತಿಯಿಂದ ಸಿರಿವಿಠ್ಠಲನ ಸಿರಿಪಾದ
ಪದ್ಮಗಂಧವ ಮಧುಪನಂದದಿ ಸೇವಿಸುತ
ತದ್ಧಿಮಿ ಧಿಮಿಕೆಂದು ಕುಣಿಸಿ ಕುಣಿದಾಡುತ
ಬುದ್ಧಿಪೂರ್ವಕದಿಂದಲಿ॥
ಶುದ್ಧಮಂದರಿಗೆಲ್ಲ ಎಂದೆಂದಿಗೂ ಬಿಡದೆ
ಹೊದಿದ್ದ ಪಾಪಗಳ ತಿರುಗಗೊಡದೆಲೆ ಕಾಲಿ
ಲೊದ್ದು ಕಡೆಗೇ ನೂಕಿ ಸುಜ್ಞಾನ ಮಾರ್ಗದಾ
ಪದ್ಧತಿಸ್ಥಿತಿ ಪೇಳಿದ॥

ವರದಪ್ಪನೇ ಸೋಮ ಗುರುರಾಯ ದಿನಕರನು
ಗುರುಮಧ್ವಪತಿಯೆ ಭೃಗು ಅಭಿನವನೆ ಜೀವ ಈ
ವರತನಯ ನಾಲ್ವರನು ಪಡೆದು ಉಪದೇಶಿಸಿ
ಪರಮಜ್ಞಾನಿಗಳ ಮಾಡಿ॥

ಶರಧಿತೆರೆಯಂತೆ ಪರಿಗುಣಗಳನು ಪೊಗಳುತಿಹ
ತರಳರನು ನೋಡಿ ಗುರುವ್ಯಾಸಮುನಿರಾಯರಿಗೆ
ಹಿರಿದಾಗಿ ಮನವುಬ್ಬಿ ಎರಗಿದಂತಃಕರಣ
ಚರಿತೆಯಲಿ ನಲಿದಾಡಿದ|| ೪

ಘೃತದ ಬಿಂದಿಗೆ ತಂದ ತಿಥಿಯುವಾಗರ ಉಂಡ
ಸತಿಯಳೆಂದಾನುಡಿಗೆ ಚತುರಭಾಗ್ಯವನಿತ್ತ
ಪಥದಲ್ಲಿ ತಾಕಾಯ್ದು ಪಥತಪ್ಪಿ ನಡೆಯಲಾ
ಹಿತನಾಗಿ ದೃಷ್ಟಿ ನೋಡಿದ||

ಕ್ಷಿತಿಪಶೋಧಿಸೆ ಅಪರಿಮಿತವಾಗಿ ಉಣ್ಣಿಸಿದ
ಯತಿಯ ಪಂಕ್ತಿಗೆ ಭಾಗೀರಥಿನದಿಯ ತರಿಸಿದ
ಸುತನಾಗಿ ನೀರನತಿಹಿತದಲ್ಲಿ ತಂದ
ಅಪ್ರತಿದೈವದ ಕಿಂಕರರೊ|| ೫

ದುರ್ಜನರ ಮಸ್ತಕಾದ್ರಿಗೆ ವಜ್ರಪ್ರಹರವಿದು
ಸಜ್ಜನರ ದಿವ್ಯ ಚರಣಾಬ್ಜಕ್ಕೆ ಭೃಂಗವಿದು
ನಿರ್ಜರರ ಮೆಚ್ಚು ಮೂರ್ಜಗದೊಳಗೆ ಬಲು ಹೆಚ್ಚು
ಲಜ್ಜೆಯನು ತೊರೆದು ನಿತ್ಯ||

ಹೆಜ್ಜೆಹೆಜ್ಜೆಗೆ ಬಿಡದೆ ದಾಸರ ಕರುಣವೆಂಬ
ವಜ್ರಕವಚವತೊಟ್ಟು ನುಡಿದವನೆ ನುಡಿಸತ್ಯ
ಅರ್ಜುನಾಗ್ರಜ ಒಲಿದು ಸಾಗಿಸುವ ಕರುಣದಲಿ
ಅಬ್ಜಭವನೊಡನೆ ಗತಿಗೆ|| ೬

ಎಂತು ವರ್ಣಿಸಲಿ ಎನಗಳವಲ್ಲ ಧರೆಯೊಳಗೆ
ಸಂತತಿ ನೆಲಸುವಂತೆ ಕಾವ್ಯವನೆ ಸ್ಥಾಪಿಸಿ
ಸಂತಾನದೊಳಗೆ ಗುರುಮಧ್ವಪತಿದಾಸರನು
ಸಂತೈಸಿ ಧರೆಗೆ ತೋರಿ||

ಅಂತ್ಯಕಾಲದಲಿ ಸಿರಿವಿಠ್ಠಲನ ಸ್ಮರಿಸುತ ಸು
ಪಂಥವನು ಪಿಡಿದು ಸದ್ಗತಿಯಲ್ಲಿ ಸೇರಿದರು
ಸಂತತ ದಾಸರಪ್ರಿಯ ವಿಜಯವಿಠ್ಠಲನಂಘ್ರಿ
ಚಿಂತೆಯೊಳಿಪ್ಪ ಅಸ್ಮದ್ಗುರುವೇ॥ ೭



## ೫೧

### (ಪ್ರಸನ್ನವೆಂಕಟಾಂಕಿತ)

**ರಾಗ-ಶಂಕರಾಭರಣ** **ಅಟ್ಟತಾಳ**

ತಂದೆ ಪುರಂದರದಾಸರ ಸ್ಮರಿಸುವೆ ಎನ್ನ
ಮಂದಮತಿಗಳೆದು ಹರಿಭಟನೆನಿಸುವೆ॥ ಪ

ಗುರುವ್ಯಾಸರಾಜರ ಚರಣಾಬ್ಜ ಷಟ್ಚರಣ
ವಿರತಿ ಭಕುತಿ ಜ್ಞಾನಾರ್ಣವನ
ವರ ಉಪನಿಷದ್ವಾರಿಧಿಗೆ ತಿಮಿಂಗಿಲಸಹನ
ಧರೆಯ ಕವಿಕುಲ ಶಿಖಾಮಣಿ ಎನಿಪನ॥ ೧

ದಿನದಿನ ದ್ರವ್ಯಾರ್ಥಲಾಭದಲಿ ತುಷ್ಟನ
ಕನಕಲೋಷ್ಠ ಸಮಾನ ಈಕ್ಷಿಸುವವನ
ಘನಸಿದ್ಧಿಗಳು ತಾವು ಬರಲೊಂಡಬಡದೆ ಹರಿ
ಗುಣಕೀರ್ತನೆಯಲ್ಲಿ ಪರವಶಿದಲ್ಲಿಹನ॥ ೨

ಭವಜಲ ಗೋಷ್ಪಾದಕ್ಕೆ ಸರಿದಾಟಿ ಕಾಮಕ್ರೋ
ಧವ ಮೆಟ್ಟಿ ಭಕ್ತಿಸುಧೆಯುಂಡು ಶೀಗಿ
ಭುವಿಯೊಳು ನಿಜಕೀರ್ತಿ ಹರಹಿ ಪವನಮತ
ದವರೆನಿಪ ದಾಸರಿಗೆ ತವರೂಪ ತೋರಿದವನ॥ ೩

ಕವನೋಕ್ತಿ ಮಳೆಗರೆದು ಹರಿದಾಸ
ಪವರ್ಗಗಳಿಗೆ ವಿರಳಾನಂದವಿತ್ತರ್ಥಿಸುವರ
ನವಭಕುತಿ ಮನಗಂಡು ಸಪಯದಾನಂದಪುರ ಪ
ಥವನು ತೋರಿಸಿದಂಥ ಬಹು ಕೃಪಾಕರನ॥ ೪

ಗೀತ ಠಾಯಿ ಸುಳಾದ್ಯುಗಾಭೋಗ ಪದಪದ್ಮ
ವ್ರಾತ ಪ್ರಬಂಧ ರಚಿಸಿ ವಿಠಲನ
ಪ್ರೀತಿ ಬಡಿಸಿ ಪ್ರತ್ಯಕ್ಷ ಕಂಡು ನಲಿವ ವೈಷ್ಣವಾಗ್ರ
ನಾಥ ಪ್ರಸನ್ನ ವೆಂಕಟಕೃಷ್ಣ ಪ್ರಿಯನ॥ ೫



೫೨

(ಗೋಪಾಲವಿಠಲಾಂಕಿತ)

ಪುರಂದರರಾಯರ ಪುಣ್ಯನಾಮಸ್ಮರಣೆಯನ್ನು
ಜಪಿಸಿರೊ ಸುಜನರು॥ ಪ

ಅನಂತ ಜನುಮದ ಅಘವನ್ನು ಕಳೆದ ಮ್ಯಾಲೆ
ಪುನರಾವರ್ತಿಬಾರದ ಲೋಕಪೊಂದಿದರು॥ ಅ

ಆಗಮಾರ್ಥಗಳನುವಾಗಿ ಸಾರವ ತೆಗೆದು
ರಾಗಪದಕಾವ್ಯದಿಂದ ಶ್ರೀಗುರುಮಧ್ವಮುನಿ ಮತವ ಪೊಂದಿ ಬಲು
ಭಾಗವತ ಧರ್ಮವಹಿಸಿ ಸಾಗರಶಯನನ ಗುಣವ ಕೊಂಡಾಡಿ
ಜಗದೊಳು ಯೋಗಪ್ರವಾಹದಿಂದ ಮೆರೆದ
ಸಾಗರವು ದಕ್ಷಿಣೋತ್ತರ ಪೂರ್ವಪಶ್ಚಿಮ
ಯೋಗದಲಿ ಚರಿಸಿ ಒಳಗಾಗದೆ ಕಲಿಯ ಗೆದ್ದ॥ ೧

ನೋಡಿದ ಮಾತ್ರಿವರ ನಯನಗಳ ದೋಷವು
ಓಡುವುವು ಲೇಶವಿರದೆ ಅಡಿದಾವಮಾತುರದಿ ಇವರ ವಾರ್ತೆಯ ವದನ
ಬೇಡದಿನ್ನೆಂದು ವಿಷಯ ಮಾಡಿದಾಮಾತ್ರಿರವರ ಅರ್ದನಿಯ ಕರಗಳು
ಮಾಡವು ಅನ್ಯಕರ್ಮ ಕೂಡಿವುನ ಬೆರೆದು ಜಪಿಸುತ ನಿತ್ಯ
ಧ್ಯಾನವನು ಮಾಡಿದವರ ಪುಣ್ಯಕೀಡು ನಾ ಕಾಣೆ॥ ೨

ಪು ಎಂದುಚ್ಚರಿಸೆ ಪುಣ್ಯಕರ್ಮಕೆ ಧರ್ಮ ಸಹಾಯವಾಗಿ ಒದಗುವುವು
ರಂ ಎನೆ ಜ್ಞಾನಾಖ್ಯಾವೆಂಬ ಠತುನಾರ್ಥಗಳು ಆಯಾಸವಿಲ್ಲದೆ ಒಪ್ಪುವು
ದ ಎಂದುಚ್ಚರಿಸಿ ಸರ್ವಕಾಮಗಳನ್ನು ದದಾತಿ ಎಂದಾಡುವ
ರ ಎನ್ನ ರಾಜ ಗೋಪಾಲವಿಠ್ಠಲ ತನ್ನ
ಸಾಯುಜ್ಯವಿತ್ತು ಸಲಹುವನು ಸರ್ವದಾ॥ ೩



೫೩

(ವೇಣುಗೋಪಾಲವಿಠ್ಠಲಾಂಕಿತ)

(ವೃಂದಗಾನದಲ್ಲಿ)

**ರಾಗ-ದ್ವಿಜಾವಂತಿ** **ಛಾಪುತಾಳ**

ವಂದಿಪೆ ಪುರಂದರದಾಸರ ಪಾದ
ದ್ವಂದಕೆ ನಾನು ನಿರಂತರ॥ ಪ

ಮಂದರೋದ್ಧರ ಗೋವಿಂದ ಮುಕುಂದನ
ಎಂದಿಗೂ ವಂದಿಸುತಿರ್ಪರ॥ ಅ

ಒದಗಿದಜ್ಞಾನವನೋಡಿಸಿ ಮತ್ತೆ
ಸದಮಲ ಜ್ಞಾನವ ಪಾಲಿಸಿ
ಪದುಮನಾಭನ ಕಥೆ ಕೇಳಿಸಿ ಸನ್
ಮುದದಿ ಪಾಲಿಪರ ಧ್ಯಾನಿಸಿ॥ ೧

ಮೊರೆಹೊಕ್ಕ ಸುಜನಗಿಹಪರದ ಸುಖ
ತರಗಳನೊದಗಿಸಿ ಹರಿಪದದ
ಪರಮಭಕ್ತಿಯ ನೀವರೆಂದರೆದಾವಾಗ
ಸ್ಮರಿಸುವೆನವರಿಗೆ ಕರಮುಗಿದು॥ ೨

ಅನಾಥಜನರನು ಮನ್ನಿಸಿ
ವೇಣುಗೋಪಾಲ ವಿಠ್ಠಲನ್ನ ಕಾಣಿಸಿ
ಜ್ಞಾನ ಭಕ್ತಿಯ ಪಥ ತೋರಿಸಿ ಕಾಯ್ವ
ಜ್ಞಾನಿಗಳರಸನ ತುತಿಸಿ ತುತಿಸಿ॥ ೩



೫೪

(ಜಗನ್ನಾಥವಿಠ್ಠಲಾಂಕಿತ)

(ವೃಂದಗಾನದಲ್ಲಿ)

**ರಾಗ–ನಾದನಾಮಕ್ರಿಯೆ** **ಅಟ್ಟತಾಳ**

ದಾಸರಾಯಾ ಪುರಂದರದಾಸರಾಯಾ॥ ಪ

ದಾಸರಾಯ–ಪ್ರತಿವಾಸರದಲಿ ಶ್ರೀನಿ
ವಾಸನ್ನ ತೋರೋ ದಯಾಸಂದ್ರ–ಪುರಂದರ॥ ಅ

ವರದನಾಮಕ ಭೂಮಿಸುರನ ಮಡದಿಯ ಬ
ಸಿರಲಿ ಜನಿಸಿ ಬಂದು ಮೆರೆದೆ ಧಾರುಣಿಯೊಳು॥ ೧

ಕುಲಿಶಧರಾಹ್ವಯ ಪೊಳಲೊಳು ಮಡದಿ ಮ
ಕ್ಕಳ ಕೂಡಿ ಸುಖದಿಂದ ಕೆಲವು ಕಾಲದಲಿದ್ಯೊ॥ ೨

ಮನೆಧನ ಧಾನ್ಯ ವಾಹನ ವಸ್ತುಗಳನ್ನೆಲ್ಲ
ತೃಣಕೆ ಬಗೆದು ಕೃಷ್ಣಾರ್ಪಣವೆಂದೆ ಬುಧರಿಗೆ॥ ೩

ವ್ಯಾಸರಾಯರಲ್ಲಿ ಭಾಸುರ ಮಂತ್ರೋಪ
ದೇಶವೆಕೊಂಡು ರಮೇಶನ ಒಲಿಸಿದ್ಯೊ॥ ೪

ಪ್ರಾಕೃತ ಭಾಷೆಲಿ ಈ ಕೃತಿ ಪೇಳಿ ಅ
ಪ್ರಾಕೃತ ಹರಿಯಿಂದ ಸ್ವೀಕೃತ ನೀನಾದ್ಯೊ॥ ೫

ತೀರ್ಥಕ್ಷೇತ್ರಂಗಳ ಮೂರ್ತಿಮಹಿಮೆಗಳ
ಕೀರ್ತಿಸಿ ಜಗದಿ ಕೃತಾರ್ಥನೆಂದೆನಿಸಿದೆ॥ ೬

ಪಾತಕವನನಿಧಿ ಪೋತನೆನಿಪ ಜಗ
ನ್ನಾಥವಿಠ್ಠಲನ್ನ ಸಂಪ್ರೀತಿಯ ಪಡೆದ್ಯೊ॥ ೭



೫೫

(ವೆಂಕಟವಿಠ್ಠಲಾಂಕಿತ)

**ರಾಗ–ಕಾಂಬೋಧಿ** **ಝಂಪೆತಾಳ**

ಶ್ರೀಪುರಂದರದಾಸರಾಯ ನಿಮ್ಮ
ಶ್ರೀಪಾದಪದ್ಮಕ್ಕೆ ಎರಗುವೆನು ಸಲಹೆಮ್ಮ॥ ಪ

ಸುರಮುನಿಯು ನಾರದರೆ ಹರಿಯಾಜ್ಞದಿಂದ ಶ್ರೀ
ಪುರಂದರಾಗಡದಲ್ಲಿ ಅವತರಿಸಿದೆ
ತರುಣಿ ಮಕ್ಕಳು ಕೂಡೆ ಪರಮಸೌಖ್ಯದಲಿರುತ
ಹರುಷದಲಿ ಮನೆ ಧನವ ಭೂಸುರರಿಗರ್ಪಣೆ ಮಾಡ್ದೆ॥ ೧

ಆದಿಕಾರಣ ನೀವು ದಾಸಮಾರ್ಗಕೆ ಪ್ರ
ಹ್ಲಾದನವತಾರ ಶ್ರೀವ್ಯಾಸಮುನಿಯಾ
ಪಾದಕೆ ನಮಿಸಲುಪದೇಶವನು ಕೈಕೊಂಡು
ಮೋದತೀರ್ಥರ ಚರಣ ನಾದವಿಂದಲಿ ತುತಿಪೆ॥ ೨

ಅಷ್ಟೈತಮತವ ಕಾಲಿಲೊದ್ದು ಶ್ರೀಗುರು
ಮಧ್ವಸಿದ್ಧಾಂತವನು ಮಾಡಿದ
ಶುದ್ಧ ಭಕ್ತಿ ಜ್ಞಾನ ವೈರಾಗ್ಯ ಪರರಾಗಿ
ಮಧ್ವವಲ್ಲಭನ ಪದ ಹೃದ್ಗುಹದಿ ಪೂಜಿಸುವ॥ ೩

ಹರಿಸರ್ವೋತ್ತಮನೆಂದು ಧರೆಯೊಳಗೆ ನೀವು ಡಂ–
ಗುರವ ಹೊಯ್ಸಿ ಮೆರೆವ ಶ್ರೀಗುರುವರ್ಯರೆ
ತರತಮವು ಪಂಚಭೇದ ಸತ್ಯವೆಂದು ಪೇಳಿ
ಹರಿಪುರವ ಸಾರ್ದ ಶ್ರೀಪುರಂದರರಾಯ॥ ೪

ತತ್ತ್ವಶೋಧನ ಮಾಡಿ ತತ್ತ್ವೇಶರನು ತಿಳಿದು
ತತ್ತತ್ಕಾಲಕೆ ಮಾಳ್ಪ ಕರ್ಮಗಳನಾ
ಉತ್ತಮಶ್ಲೋಕ ಪುರುಷೋತ್ತಮನಿಗರ್ಪಿಸಿ
ಮುಕ್ತಿಮಾರ್ಗವ ಪಿಡಿದೆ ಅತ್ಯಂತ ಮಹಾಮಹಿಮ॥ ೫

ಎರಡ್ಹತ್ತುನಾಲ್ಕು ತತ್ತ್ವದ ವಿಚಾರವ
ಅರುಹು ಹರಿಯೆ ದೈವ ಸಿರಿ ಬ್ರಹ್ಮ ವಾಯು
ಗರುಡ ಭುಜಂಗ ಮಾರಹರ ಇಂದ್ರ ಸುರರೆಲ್ಲ
ತರತಮದಿ ದಾಸರೆಂಬುವ ಜ್ಞಾನ ಕರುಣಿಸುವುದು॥ ೬

ದಾಸವರ್ಯರೆ ವಿಜಯದಾಸರಾಯರಿಗುಪ
ದೇಶಿಸಿದ ಪುರಂದರದಾಸರಾಯ
ಶೇಷಗಿರಿವಾಸ ವೆಂಕಟವಿಠ್ಠಲನ ನಿಜ
ದಾಸರಾ ದಾಸನೆಂದೆನಿಸೆನ್ನ॥ ೭



೫೬

(ಬಾದರಾಯಣವಿಠ್ಠಲಾಂಕಿತ)

ರಾಗ–ಕಾಂಬೋಧಿ ಝಂಪೆತಾಳ

ದಾಸರೇ ಗತಿಯು ನಮಗೆ
ಕಾಸುವೀಸವು ಬೇಡದಂಥ ಸಿರಿ ಪುರಂದರ॥ ಪ

ನದಿಗಳಿಗೆ ಜಲಧಿ ಗತಿ ನರರಿಗೆಲ್ಲರಸು ಗತಿ
ಸುದತಿಯರಿಗೆಲ್ಲ ನಿಜಪತಿಯೇ ಗತಿ
ಸದಕಾಲ ಶಿಷ್ಯರಿಗೆ ಗುರುಚರಣಗಳೆ ಗತಿಯು
ಮುದದಿಂದ ಕರವೆತ್ತಿ ಕೂಗುವೆನು ಪುರಂದರ॥ ೧

ತನಯರಿಗೆ ತಾಯಿ ಗತಿ ಸಸಿಗಳಿಗೆ ಮಳೆಯೆ ಗತಿ
ವನದ ಲತೆಗಳಿಗೆಲ್ಲ ತರುವೆ ಗತಿಯೊ
ಮನೆಗೆ ಬಂದಥಿತಿಗಳಿಗನ್ನದಾನವೆ ಗತಿಯೊ
ಧಣೆದ್ದ ಹಕ್ಕಿಗಳಿಗೆ ಗಿಡ ಗೋಪುರವೆ ಗತಿಯೋ॥ ೨

ರಾಮ ಕಪಿಗಳ ನಮ್ಮ ಹನುಮಪ್ಪ ಕಾಯ್ದಂತೆ
ಸ್ವಾಮಿ ಸಿರಿ ಬಾದರಾಯಣವಿಠ್ಠಲನೆ
ಶ್ರೀಮನೋಹರ ಚರಣಸೇವಕರನುದ್ಧರಿಪ
ಆ ಮಹಾ ನಾರದಾತ್ಮಕರಾದ ಪುರಂದರ॥ ೩





೫೭

## (ಅಭಿನವಜನಾರ್ದನವಿಠ್ಠಲಾಂಕಿತ)

## ಸುಳಾದಿ

॥ಧ್ರುವತಾಳ॥

ಪುರಂದರದಾಸರ ಕರುಣವ ಸಂಪಾದಿಸಿ
ಧರೆಯಮೇಲೆ ಚರಿಸಿ ಶ್ರೀಹರಿಯ
ಕರುಣವ ಸಂಪಾದಿಸಿ ನಿರಯದೂರನಾಗಿ
ವರಸದ್ಗತಿ ಸೇರುವ ಮನ ಮಾಡೆಲೋ
ಬರಿದೆ ಈ ಸಂಸಾರ ಕರೆ ಕರೆಯೊಳು ಮುಳುಗಿ
ಇರಳು ಹಗಲು ಕ್ಲೇಶಬಡದಿರೆಲಾ
ನರಜನ್ಮವನ್ನೆ ತೆತ್ತು ವರಮಧ್ವಮತವನನು
ಸರಿಸಿ ಈ ದಾಸ್ಯ ಭಾವವನ್ನೆ ವಹಿಸಿ
ದುರಳರಿಂದಲಿ ಹಾಳು ಹರಟೆಗೆ ಒಳಗಾಗೆ
ಸರಸಿಯೊಳು ಹೋಮ ಮಾಡಿದಂತೆ
ಕರುಣಿ ಅಭಿನವಜನಾರ್ದನವಿಠ್ಠಲನ್ನ
ಶರಣರ ಕರುಣವೆ ಪರಲೋಕಕ್ಕೆ ಮಾರ್ಗ॥ ೧

॥ಮಟ್ಟತಾಳ॥

ಪರ ಉಪಕಾರಾರ್ಥ ಹರಿಭಕುತರು ಮಾಳ್ಪ
ಚರಣೆಯಲ್ಲಿ ತಿಳಿಸಿ ಸುರಋಷಿ ನಾರದನು
ನಿರಯದರಸನಿಪ್ಪ ಪುರಕೆ ಪೋಗಿ ಅಲ್ಲಿ
ನರಕದೊಳಗೆ ಬಹು ಪರಿಪರಿ ಕ್ಲೇಶದಲಿ
ಹೊರಳುವ ಜೀವರ ಕಣ್ದೆರೆದು ನೋಡಿ ಬಹು

ಕರುಣದಿ ಮಹತಿಯನು ಕರದಲಿ ಪಿಡಿದು
ಸ್ವರವೆತ್ತಿ ಹರಿ ಪುರುಷೋತ್ತಮ ವಿಧಿ
ಹರ ಮೊದಲಾದವರೆ ವರಗತಿದಾಯಕ ನೆಂ
ದ್ದುರುಷದಿಂದ ಬಹು ಪರಿಪರಿ ತುತಿಸುತಿರೆ
ಪರಮಮಂಗಳ ಕಥೆ ಅವರ ಕರ್ಣಕೆ ಬೀಳೆ
ಹರುಷೋನ್ನತದಿಂದ ಹರಿಪುರಕೈದಿದರು
ಸಿರಿ ಅಭಿನವಜನಾರ್ದನವಿಠ್ಠಲ
ಶರಣರು ಮಾಡಿದ ಚರಿತೆಯ ತನ್ನದೆಂಬ|| ೩

||ತ್ರಿವಿಡಿತಾಳ||

ಧರೆಯೊಳು ದುರುಳರು ಪಿರಿದಾಗಿ ಪ್ರಬಲಿಸೆ
ಸುರರೆಲ್ಲ ಶ್ರೀಹರಿಚರಣಕ್ಕೆ ಮೊರೆಯಿಡೆ
ಕರೆದು ಪೇಳಿದ ವಾಯು ಧರೆಯೊಳುದಿಸು ಎಂದು
ಹರಿಯಾಜ್ಞೆ ಶಿರದಲಿ ಧರಿಸಿ ಮಧ್ಯಗೇಹನ
ವರಸತಿಯಲ್ಲಿ ಪುಟ್ಟಿ ತ್ವರಿತದಿಂದ
ವರಮೋಹಕ ಶಾಸ್ತ್ರ ತರಿದು ಸಿದ್ಧಾಂತವ
ನೊರೆದು ಸುಜನರನ್ನು ಉಳುಹಿದಂತೆ
ಎರಡೇಳು ಲೋಕವ ಚರಿಸಿ ನಾರದ ಬಂದು
ಸಿರಿಕೃಷ್ಣ ದ್ವಾರಕಪುರದಲ್ಲಿರೆ
ಎರಡು ಕೈಮುಗಿದು ಕಿನ್ನರಿ ಧರಿಸಿ ಪಾಡೆ
ಶರಣ ನಿನಗೆ ನಾನು ಮರುಳಾದೆ ಬೇಡೆಲೋ
ವರವ ಕೊಡುವೆನೆಂದು ನುಡಿಯಲಾಗ
ಶರಣವತ್ಸಲನೆ, ನೀ ಇರಳು ಹಗಲು ಎನ್ನ
ಸರಸದಲ್ಲಿದ್ದು ಪೇಳಿದ ವಾಕ್ಯವ
ಮರೆಯದೆ ಮನ್ನಿಸಿ ಕಾಯಬೇಕೆಂದೆನೆ
ಹರಿ ನುಡಿದನು ಅಂಕುರಿಸಿ ಆಗ

ಮರಳಿ ಕಲಿಯುಗದಲ್ಲಿ ನೀ ಪುಟ್ಟಲು ನಾನು
ಮರೆಯದೆ ನಿನ್ನ ಎದುರಿಲಿಪ್ಪೆನು
ಪರಮಪುರುಷ ಈ ಪರಿಯಲ್ಲಿ ಪೇಳಲು
ವರ ಪಡೆದು ನಾರದ ಧರೆಯೊಳಗೆ
ಪುರಂದರಗಡದಲ್ಲಿ ವರದನಾಮಕ ಭೂ
ಸುರನ ಉದರದಲ್ಲಿ ಜನಿಸಿ ಬಂದು
ದುರಳ ಸಂಸಾರದಿ ಚರಿಸಿ ಕೆಲವು ದಿನ
ಜರಿದು ಎಲ್ಲ ಭಾಗ್ಯ ಪಂಪಾದಲ್ಲಿ
ಗುರುವ್ಯಾಸಮುನಿಯಿಂದ ಪರವೈಷ್ಣವರಾಗಿ
ಎರಡಾರು ಪುಂಡ್ರವ ಧರಿಸಿ ಮುದ್ರೆ
ಪರಮಜ್ಞಾನಭಕುತಿ ವೈರಾಗ್ಯವನೆ ತಾಳಿ
ಪರಿಪರಿ ಹರಿಯ ಸ್ತೋತ್ರವನೆ ಮಾಡಿ
ಪುರಂದರದಾಸರೆಂಬ ಪೆಸರಿನಿಂದ
ಸುರಗಂಗೆ ಮೊದಲಾದ ಯಾತ್ರೆ ಚರಿಸಿ
ಸಿರಿ ಅಭಿನವಜನಾರ್ದನವಿಠ್ಠಲನ್ನ
ಸ್ಮರಿಸಿ ಸ್ಮರಿಸಿ ಅವನ ಕರುಣವ ಪಡೆದರು॥ ೩

॥ಅಟ್ಟತಾಳ॥

ಮದಡುಜನಗಳ ಒದಗಿ ಪಾಲಿಪೆನೆಂದು
ಅದುಭುತ ಮಧ್ವಶಾಸ್ತ್ರದ ಜ್ಞಾನವಿಲ್ಲವೆಂ
ದದರಿಂದ ಸಿದ್ಧಾಂತ ಪದಗಳ ರೂಪದಿ
ಪದುಮನಾಭನ ದಿವ್ಯಪದಗಳ ಮಹಿಮೆಯು
ಒದಗಿ ಕೊಂಡಾಡುತ ಮುದದಿಂದ ತಿಳಿ
ಸಿದರು ದಿವ್ಯಜ್ಞಾನ ಇದು ಶಾಸ್ತ್ರಾರ್ಥವ
ಹುದು ಅಲ್ಲವೆಂದು ಈ ವಿಧದಿಂದ
ಸಂದೇಹ ಪಡದಿರು ಎಂದೆಂದು

ಸದಮಲ ಯತಿರಾಯನೆದುರಿನಲಿ ಮಧ್ವಶಾ
ಸ್ತ್ರದ ಮ್ಯಾಲೆ ಮುಂಕೊಂಡು ಪದಸುಳಾದಿಗಳು ಬ
ರೆದವಹಿ ನಿಲ್ಲಲು ಹದನರಿಯದೆ ಶಿಷ್ಯ ಒದಗಿ ಬಿಸಾಟಲು
ದ್ವಿದಶಾವರ್ತಿಯಲಿ ಬಂದವರ ಮ್ಯಾಲಿರಲಾಗ
ಮುದದಿ ವ್ಯಾಸಮುನಿ ಗದರಿಸಿ ನುಡಿದಾನು
ಇದರ ಮೇಲಾರು ತಂದಿಡುವರೇನೊ ಮೂರ್ಖ
ಇದೆ ಪುರಂದರ ಉಪನಿಷತು ಎಂದು ಆ
ಅದುಭುತ ಮುನಿಯು ಪೇಳಿದ ಕಾರಣದಿಂದ
ಇದರಲ್ಲಿ ಸಂದೇಹ ಲೇಶಾಂಶ ಮಾಡದೆ
ಬುಧರಾಗುವರು ಈ ಪದಗಳಾಲೋಚಿಸಿ
ಮಧುಮರ್ದನ ಅಭಿನವಜನಾರ್ದನವಿಠ್ಠಲ
ಪದವಿ ಕೊಡುವ ತನ್ನ ಪದಸನ್ನಿಧಾನದಿ॥ ೪

||ಆದಿತಾಳ||

ನಿಜ ಈ ದಾಸರ ಕರುಣವಾದರೆ ನಮ್ಮ
ವಿಜಯರಾಯರು ಅವರನುಗರು ಗೋಪಾಲ
ಭಜಕರ ಕರುಣವು ಪೂರ್ತಿ ಆಗುವುದೈಯ್ಯ
ತ್ರಿಜಗದೊಳಗವ ನಿಜಸುಕೀರ್ತಿಯು
ವಜ್ರವ ಸಂಪಾದಿಸಿ ಧ್ವಜವನೆತ್ತಿ ಮತ್ತೆ
ಗಜದ ಮ್ಯಾಲೆ ಭೇರಿ ಹೊಯ್ಸಿಕೊಳ್ಳುತ್ತ ತಿರುಗುವನು
ಅಜನಿಂದಲಿ ವಿರಜೆಯಲ್ಲಿ ಮುಳುಗಿ ತಾ
ನಿಜ ಸುಖದಲಿ ಸಹಜ ಗತಿ ಐದಿಪ
ಗಜಮುಖ ಅಭಿನವಜನಾರ್ದನವಿಠ್ಠಲ
ಗಜರಾಜಗೊಲಿದ ತೆರದಿ ತಾ ಒಲಿವನು॥ ೫

ಜೊತೆ

ದಾಸರ ಕಡುಕರುಣಕ್ಕೆ ಗಾತ್ರನಾದವನಿಗೆ
ಈಶ ಅಭಿನವಜನಾರ್ದನವಿಠ್ಠಲ ಸುಖವೀವ॥



೫೮

(ಶ್ಯಾಮಸುಂದರಾಂಕಿತ)

(ವೃಂದಗಾನದಲ್ಲಿ)

ದಾಸಗುರೋ ದಾಸಗುರೋ
ವಾಸವನಾಮಕ ದಾಸಗುರೋ॥ ಪ

ಭೂಸುರರಿಗೆ ಧನರಾಶಿ ಸಮರ್ಪಿಸಿ
ವ್ಯಾಸರಾಯರುಪದೇಶಗೊಂಡ ಹರಿ॥ ಅ

ಜಲಜಭವನ ಪಿತನಾಜ್ಞೆಯಲಿ ಈ
ಕಲಿಯುಗದಲಿ ಜನ್ಮತಾಳುತಲಿ
ಅಲವಬೋಧರಮತ ನೆಲೆಯನು ಸುಲಭದಿ
ತಿಳಿಗನ್ನಡದಲಿ ತಿಳುಹಿಸಿ ಸಲಹಿದ ಹರಿದಾಸ ಗುರೋ ೧

ಪವನದೇವನ ಒಲಿಸುತಲಿ ಮಾ
ಧವನ ಸ್ತುವಿಸಿ ಸಲೆ ಕುಣಿಯುತಲಿ
ಕವನದಿ ಭಕುತಿಯ ನವವಿಧಮಾರ್ಗವ
ಅವನಿಗೆ ಬೀರಿದ ದಿವಿಜಮೌನಿವರ ಹರಿದಾಸ ಗುರೋ॥ ೨

ಕಾಮಿತಫಲಗಳಗರೆಯುತಲೀ ಬಲು
ಪಾಮರ ಜನರನು ಸಲಹುತಲಿ
ಶ್ರೀಮನೋವಲ್ಲಭ ಶ್ಯಾಮಸುಂದರನ
ನಾಮಾಮೃತವನು ಪ್ರೇಮದಿಂದುಣಿಸಿದ ಹರಿದಾಸ ಗುರೋ॥ ೩



೫೯

(ಕಾರ್ಪರ ನರಹರಿ ಅಂಕಿತ)

ರಾಗ–ಶಂಕರಾಭರಣ ಆದಿತಾಳ

ಗುರುವರ್ಯ–ಪುರಂದರ ಗುರುವರ್ಯ॥ ಪ

ಗುರುವರ್ಯ ಕಾಯಬೇಕೆನ್ನ–ಮಧ್ವ
ಗುರುಕೃತ ಗ್ರಂಥಾರ್ಥಜ್ಞಾನ–ಕೊಟ್ಟು
ಕರಣತ್ರಯಗಳಿಂದಾಚರಿಸುವ ಕರ್ಮವ
ಹರಿ ಮಾಡಿಸುವನೆಂಬ ಸ್ಮರಣೆಯ ಕರುಣಿಸೋ॥ ಅ

ಸುರಮುನಿ ನಿನ್ನಪ್ರಾರ್ಥನದಿ–ಶ್ರೀಮ
ದ್ಗುರು ವೇದವ್ಯಾಸರು ದಯದಿ–ಪಾ
ಮರ ಪಂಡಿತರಿಗೆ ಸುಲಭದಿ–ಧರ್ಮ ತಿಳಿದಾ
ಚರಿಪರೆಂದು ಮುದದಿ–ಅರಿತು
ನಿರುತ ಸೇವಿಪರಿಗೆ ಪರಮಮಂಗಳವೀವ
ವರಭಾಗವತಗ್ರಂಥ ನಿರ್ಮಿಸಿದರು ಸತ್ಯ॥ ೧

ಕಲಿಯುಗದಲಿ ಹರಿನಾಮ-ಜನರ
ಕಲಿಕಲ್ಮಷಾದ್ರಿ ಸುತ್ರಾಮ-ಎಂದು
ತಿಳಿದು ಕೀರ್ತಿಪರಿಗೆ ಪರಮ-ಮಂ
ಗಳ ಕರನಾಮದಿ ಮಹಿಮ-ಎನುತ
ಇಳೆಯೊಳು ವರಪುರಂದರಗಡದಲಿ ಪುಟ್ಟಿ
ಬಲು ವಿಧ ಹರಿನಾಮಂಗಳನು ವಿರಚಿಸಿದ॥ ೨

ಕಾಶ್ಯಾದಿ ಕ್ಷೇತ್ರ ಸಂಚರಿಸಿ-ಪದ
ರಾಶಿ ಸುಳಾದಿಗಳ ರಚಿಸಿ-ಸಂ
ತೋಷತೀರ್ಥರ ಮತ ಬಲಿಸಿ-ಗುರು
ವ್ಯಾಸರಿಂದುಪದೇಶಗ್ರಹಿಸಿ-ಜಗದಿ
ಭೂಸುರಪಾಲಕ ಕಾರ್ಪರ ನರ
ಕೇಸರಿಗತಿಪ್ರಿಯ ದಾಸರೆಂದೆನಿಸಿದ॥ ೩



## ೬೦

## (ಪ್ರಸನ್ನ ಶ್ರೀನಿವಾಸ)

ಶ್ರೀರಾಗ ಆದಿತಾಳ

ಶರಣು ಪುರಂದರದಾಸರಾಯರೆ॥

ಶರಣು ಶರಣು ದಯಾನಿಧೆ
ಶರಣು ವ್ಯಾಸಮುನೀಂದ್ರ ಪ್ರಿಯತಮ
ಶರಣು ಮನ್ಮನೋಭೀಷ್ಟದ॥ ಅ

ಜ್ಞಾನಭಕ್ತಿ ವೈರಾಗ್ಯ ಶಮ ದಮ
ಗುಣಗಣಾದಿ ಸಂಪನ್ನ ನೀ
ಹೀನವಿಷಯಗಳಲ್ಲಿ ರತನು ಬೂಟಕನು ಗುಣಹೀನ ನಾ॥ ೧

ನಿನ್ನ ಸುಸ್ವಭಾವದ ಔ
ದಾರ್ಯ ಗುಣದಿಂದೆನ್ನನು
ಇನ್ನು ಮುಂದೆ ಕೊರತೆ ಸರ್ವವ ಪರಿಹರಿಸಿ ಪಾಲಿಸೋ॥ ೨

ಶ್ರೀಪುರಂದರ ವಿಜಯವಿಠ್ಠಲ
ಗೋಪಾಲ ಕಪಿಲ ಶ್ರೀಶಗೆ
ಪ್ರಪ್ಪಜನಪಿತ ಶ್ರೀಪ್ರಸನ್ನ ಶ್ರೀನಿವಾಸಗೆ ಪ್ರಿಯತಮ॥ ೩



೬೧

(ಶ್ರೀಕೃಷ್ಣವಿಠ್ಠಲಾಂಕಿತ)

**ರಾಗ–ಮಧ್ಯಮಾವತಿ** **ತ್ರಿಪುಟತಾಳ**

ಎಂತು ಪೊಗಳಲಿ ನಾನು॥ ಪ

ಕಂತುಪಿತನೇಕಾಂತಭಕ್ತನ ಪಂಥವನು ಪದ
ಪಂಕ್ತಿಯಲಿ ತುಂಬಿಟ್ಟು ಸಲಹಿದ ದಾಸವರ್ಯರ॥ ಅ

ಪಾಂಡುರಂಗನ ನಿತ್ಯ ನೆನೆಯುತ್ತ
ಪಂಡಿತೋತ್ತಮರೊಡನೆ ಸುಖಿಸುತ್ತ
ಕಂಡುಹರಿಯನು ಮುಂದೆ ಕುಣಿಯುತ್ತ
ಕುಂಡಲಿಗೆ ನಿಜಭೂಷಣ ಎನಿಸುತ್ತ

ಭಂಫಜನರಾ ಪುಂಡುಪೂರ್ಗವ
ಕಂಡಕಂಡೆಡೆ ಖಿಂಡ್ರಿಸುತ ಬ್ರ-
ಹ್ಮಾಂಡದೊಡೆಯನ ಭಕ್ತಿ ಬಿತ್ತುತ
ಹಿಂಡಿ ಮುಕ್ತಿಮಾತ ರಸವ ಕುಡಿಸಿದ ದಾಸವರ್ಯರ॥ ೧

ನೊದಲು ಗಾಯಕ ದೇವಸಭೆಯಲ್ಲಿ
ಮುದದಿ ಕಾಮುಕ ಚೇಷ್ಟೆ ನಡೆಸುತ್ತಲಿ
ಪದವಿಂಚ್ಯುತನಾಗಿ ದಾಸಿಯಲಿ
ಉದಿಸಿ ಬಂದು ಸಾಧು ಸಂಗದಲಿ॥
ಒದಿಗೆ ತಳ್ಳುತ ಭವದ ಕೋಟಲೆ
ಮುದದಿ ಜಪಿಸುತ ವಾಸುದೇವನ
ಪದವಿ ಸಾಧಿಸಿ ದೇವಋಷಿ ತಾ
ಪದುಮನಾಭನ ನೆನೆದು ನರಕವ ಬ-
ರಿದು ಮಾಡ್ದ ಮಹಾನುಭಾವನ॥ ೨

ಕಾಸಿನಾಶಯವು ದೋಷವೆಂತೆಂದು
ಹೇಸಿ ವಿಷಯದಿ ಲೇಸು ಸಿಗದೆಂದು
ಶ್ರೀಶ ಸಿಗುವನು ದಾಸಗೆಂತೆಂದು
ಆಶೆಯಲಿ ಸಾರಬೇಕೆಂದು॥
ಆಸು ಸಂಪದ ನೂಕಿ ಭರದಿಂ
ವ್ಯಾಸರಾಯರ ಶಿಷ್ಯನೆನಿಸುತ
ವಾಸುದೇವನ ದಾಸನಾಗುತ
ದೋಷ ಅಜ್ಞಾನವ ನಾಶಮಾಡಿದ
ದೇಶ ತಿರುಗಿದ ದಾಸವರ್ಯರ॥ ೩

ಭಕ್ತಿಯಿಲ್ಲದ ಗಾನ ತಾನಿನ್ನು
ಕತ್ತಿಕೂಗನುಮಾನವಿಲ್ಲೆಂದು
ನಿತ್ಯದೇವನ ಗಾನ ಗೈಯಲು
ಗಾತ್ರವಿದು ನಿಜ ವೀಣೆಯೆಂತೆಂದು॥
ಸಪ್ತಸ್ವರಗಳ ಕ್ಲಿಪ್ತಮರ್ಮಗ
ಳೆತ್ತಿ ತೋರುತ ಶ್ರೇಷ್ಠತರ ಸಂ
ಗೀತ ಶಾಸ್ತ್ರವ ಬಿತ್ತಿ ಜಗದೊಳು ಸೂತ್ರ ಸಂ
ಮತ ನೀತಿ ನುಡಿದಿಹ ದಾಸವರ್ಯರ॥ ೪

ಮುಂದೆ ದಿವಿಜರ ಭಾಷೆ ಶಿಥಿಲತೆಯು
ಪೊಂದಿ ಪುಸ್ತಕದೀಚೆ ಬರದೆಂದು
ಛಂದ ಮರ್ಮವ ತಂದಿಡುವೆ ನಮ್ಮೀ
ಅಂದ ಕನ್ನಡದೊಳಗೆ ಎಂತೆಂದು॥
ಕಂದ ವೃತ್ತ ಸುಳಾದಿ ಪದಗಳ
ಛಂದ ಭೂಷಣ ವೃಂದ ನೀಡುತ
ನಂದದಿಂ ಕರ್ಣಾಟಮಾತೆಯು
ಮುಂದೆ ತಾ ನಲಿವಂತೆ ಮಾಡಿದ ದಾಸವರ್ಯರ॥ ೫

ನಾರಿ ಮನೆ ಪರಿವಾರ ಹರಿಗೆಂದು
ಸಾರವನ್ನೀ ಮುರಾರಿ ಮನೆಯೆಂದು
ಚಾರುಶ್ರುತಿಗತಸಾರ ನಡತೆಯಲಿ
ಸೂರಿಯಾದವ ತೋರಬೇಕೆಂದು॥
ನೀರಜಾಕ್ಷನ ಧೀರ ದೂತನ
ಸಾರ ಮತವನು ಸಾರಿ ಸಾರುತ
ದೂರ ಓಡಿಸಿ ಮೂರುಮತಗಳ
ನೇರಸುಖಪಥ ತೋರಿಸಿದ ಮಹರಾಯದಾಸರ॥ ೬

ಕರ್ಮಕೋಟಲೆಗಿಲ್ಲ ಕೊನೆಯೆಂದು
ಮರ್ಮ ತಿಳಿಯುತ ಬಿಂಬಹೃದಯಗನ
ನಿರ್ಮಮತೆಯಿಂದೆಸಗಿ ಕರ್ಮಗಳ
ಕರ್ಮಪತಿಗೊಪ್ಪಿಸುತ ಸರ್ವಸ್ವ॥
ಧರ್ಮಗರ್ಭನ ಭಕ್ತಿಭಾಗ್ಯದಿ
ಪೇರ್ಮೆಯಿಂ ಹರಿದಾಸನೆನಿಸುತ
ಶರ್ಮ ಶಾಶ್ವತವಿತ್ತು ಸಲಹುವ
ಪರ್ವನೀಡಿದ ವಿಶ್ವಬಾಂಧವ॥ ೭

ಇಂದಿರೇಶನು ಮುಂದೆ ಕುಣಿಯುತಿರೆ
ಕುಂದುಂಟೆ ಮಹಿಮಾತಿಶಯಗಳಿಗೆ
ತಂದೆ ಕೌತುಕವೃಂದ ಮಳೆಗರೆದು
ಕಂದನನು ಪೊರೆದಂದವೇನೆಂಬೆ॥
ಬಂದು ಸತಿಸಹ ಮಂದಿರಕೆ ಗೋ
ವಿಂದ ಪಾಕವಗೈದು ಬ್ರಾಹ್ಮಣ
ವೃಂದಕ್ಕಿಕ್ಕುತ ದಾಸರಿಗೆ ಮುದ
ತಂದ ಮಾಧವ ಭಾಗ್ಯಕೆಣೆಯುಂಟೆ॥ ೮

ದೀನ ಹೊಲೆಯಗೆ ಪ್ರಾಣ ಬರಿಸಿದನು
ಏನು ಒಲ್ಲದೆ ಹರಿಯ ಯಜಿಸಿದನು
ಜ್ಞಾನ ಭಾಗ್ಯದಿ ಮುಳುಗಿ ತೇಲಿದನು
ದೀನಜನರುದ್ಧಾರ ಮಾಡಿದನು॥
ದಾನಿ ಜಯಮುನಿ ವಾಯು ಹೃದಯಪ
ಚಿನ್ಮಯ ಶ್ರೀಕೃಷ್ಣ ವಿಠ್ಠಲನ
ಗಾನಸುಧೆಯನು ಬೀರಿಸುತ ವಿ
ಜ್ಞಾನವಿತ್ತ ಮಹೋಪಕಾರಿ ವಿಶೇಷ ಮಹಿಮವ॥ ೯



೬೨

(ತಂದೆ ವೆಂಕಟೇಶವಿಠ್ಠಲಾಂಕಿತ)

ರಾಗ–ಮೋಹನ ಆದಿತಾಳ

ಎಂಥಾಮಹಿಮ ನೋಡಿರೋ। ನಾರದ ಮುನಿ
ಪಂಥವ ಪೊಂದಿ ಬದುಕಿರೋ|| ಪ

ಎಂಥಾ ಮಹಿಮ ನಮ್ಮ
ಪ್ರಾಂತಾಡೊಳಾಥ್ಯಾತ್ಮ
ಕ್ರಾಂತೀ ಎಬ್ಬಿಸಿ ಮಿಥ್ಯ
ಧ್ವಾಂತಾ ಧ್ವಂಸಕನಾದ॥ ಅ

ಪಾಮರರನ್ನು ಪೊರೆವ। ಉದ್ದೇಶಾರ್ಥ
ಕಾಮನಯ್ಯನ ವರವ॥
ನೇನುದಿ ಸ್ವೀಕರಿಸಿ। ಭೀಮಾರಥಿಯ ತೀರ
ಸೋಮಾಧಿಪತಿಘಡ। ನಾಮಾ ನಗರಿಯಲೀ॥
ಕಾಮಲೋಭಗಳ ಧಾಮನೆನಿಸಿ ಹರಿ
ತಾಮರಸಾಂಘ್ರಿಯು ಪ್ರೇಮದಿ ನೆನೆಯದ
ತಾ ಮೈಮರೆದಿರೆ ಭಾಮಾವರ ಮುನ
ತಾಮಸಹರಿಸಲು ತಾಮುದೆವಾಂತ॥ ೧

ಪಾಂಡುರಂಗನ ಚರಿಯ। ಸ್ಮರಿಸಿ ವಿದ್ವ–
ನ್ಮಂಡಲಿಯೊಳು ಹಿರಿಯ॥
ಗಂಡುಗಲಿ ವೇದಾಂತ। ಮಾಂಡಲೀಕನು ತರ್ಕ
ತಾಂಡವಾರ್ಯನ ಪಾದ। ಪೊಂಡರೀಕದ್ವಯ॥

ಬಂಡುಣಿ ಅಂಕಿತ। ಕೊಂಡು ವಿಜ್ಞಾನ ಕ
ರಂಡವೆನಿಸಿ ಹೃ। ನ್ಮಂಡಲಸ್ಥಿತ ಹರಿ
ಕಂಡು ಮಧ್ವಾಗಮಾ। ಖಂಡಾಮೃತರಸ
ಉಂಡು ಜೀರ್ಣಿಸಿದ। ತೋಂಡಾಗ್ರೇಸರ॥ ೨

ಸಕಲ ವೈದಿಕ ಲೌಕಿಕ। ಕರ್ಮವು ನಿಷ್ಕಾ
ಮುಕವಾಗಲವು ಸಾರ್ಥಕ॥
ಅಕಟಾ ಈ ರಾಹಸ್ಯ। ಪ್ರಕರಣ ತಿಳಿಯದೆ
ಮಕಮಾರಿ ಪಾಂಡಿತ್ಯ। ಕಕುಲಾತೆಯಿಂದಲೀ॥
ಸುಖವರಿಯದೆ ಜನ। ವಿಕಲಮತಿಯ ದು
ರ್ಮುಖಿಗಳಾಗೆ ಬಂ। ಧಕವ ಕಳೆದು ಹೃ
ನ್ಮುಕುರ ಮಧ್ಯ ತಾ। ರಕನ ಕಾಂಬ ಪರಿ
ಸುಖತೀರ್ಥರ ಮತ। ಪ್ರಕಟಣೆ ಮಾಡಿದ॥ ೩

ಸುಲಭಮುಕ್ತಿಯ ಸಾರುವ। ಅಧ್ಯಾತ್ಮದ
ಒಲವು ಭಕ್ತಿಗೆ ಬರುವ॥
ಸುಲಲಿತ ಸಾಹಿತ್ಯ। ಪಳೆವಾತಿನಲಿ ಕರ್ಮ
ಕೊಳೆಯ ಸಂಕೀರ್ತನ। ಜಲದಿ ನಿರ್ಮಲಗೈದು॥
ಮಲೆತಮಾಯ್ಗಳಭಿ। ಕಲಿತವಾದಾರ್ಥವ
ಬಲುಮೆಯಿಂದಳಿ। ದಲವಬೋಧಮತ
ಜಲದಿಮಂಥನದಿ। ತಳೆದ ಸುಧಾರಸ
ವಿಳೆಯ ವಿಬುಧಗಣ। ಕೊಲಿದುಣಗಲಿಸಿದ॥ ೪

ದ್ವಂದ್ವಾರ್ಪಣೆಯ ಕ್ರಮವ। ನಿತ್ಯಾನು।
ಸಂಧಾನದೊಳು ತರುವ॥
ಬಂಧುರದಾಧ್ಯಾತ್ಮ। ಸಂದೇಶ ದೃಷ್ಟಾಂತ।
ದಿಂದ ತೋರಿದ ಜ್ಞಾನಿ। ಸಂದೋಹ ಮೆಚ್ಚಲು॥

ನಿಂದು ಕುಣಿವ ಕುಳಿ। ತಂದಾಡುವ ಬಹ
ನಿಂದೆ ಸ್ತೋತ್ರ ಮನ। ಸಿಂದಾಗುವ ಜ್ಞಾ–
ನೇಂದ್ರಿಯ ಕರ್ಮದ। ಗಂಧರೂಪರಸ।
ಬಂದು ಪೋದುದ್ದರಿ। ಯಿಂದೆನ್ನುವ ಗುರು॥ ೫

ಬಿಂಬಕ್ರಿಯದ ಭಾವವ। ತಿಳಿದು ಹರಿಯ
ಡಿಂಬದೊಳಗೆ ಕಾಂಬುವ॥
ಸಂಭ್ರಮವೇನೆಂಬೆ। ನಂಬಿ ಧ್ಯಾನಿಪರ ಹೃ।
ದಂಬರದಲಿ ಬಿಂಬ। ನಿಂಬು ಗೊಳುವನೆಂದು॥
ಕುಂಭಿಣಿಯೊಳು ಪ। ದ್ಮಾಂಬನಂಕಿತ
ವೆಂಬ ಪ್ರಕ್ರಿಯಾ। ರಂಭಿಸಿ ಶುದ್ಧ ಕುಂ-
ಟುಂಬಿಗರಿಗೆ ಜ್ಞಾ। ನಾಂಬಕ ತೆರೆದ ಕೈ।
ತಂಬೂರಿ ತುಳ। ಸ್ಯಾಂಬಕಿಗಳದ॥ ೬

ದಾಸನಾಗುವ ಭಾಗ್ಯಕೆ। ಮಿಗಿಲಿಲ್ಲ ಸ–
ನ್ಯಾಸಾದಿ ಶ್ರಮವೇತಕೆ॥
ಏನೇನು ಬಂದರು। ದಾಸೀನನಾಗಿ ಸ–
ರ್ವೇಶ ಕ್ಲೃಪ್ತಿಗೆ ಕೊಂಕು। ಲೇಶಾವಿಲ್ಲೆನುತ॥
ತೋಷಪಡುತ ನಿ। ರ್ದೋಷ ತಂದೆ ವೆಂಕ
ಟೇಶವಿಠ್ಠಲ ಸ। ರ್ವಾಶ್ರಯವೆಂದರಿ
ದೀಸಮೀರ ಸಮ। ಯಾಸಕ್ತಿಯ ಚಿ–
ಧ್ಯಾನದಿ ನಿರ್ಗುಣ। ದೇಶಿಯನರುಹಿದ ೭



## ೬೩

### (ರಮಾಕಾಂತವಿಠ್ಠಲಾಂಕಿತ)

**ರಾಗ–ಜಂಜೂಟಿ** **ಆದಿತಾಳ**

("ಯಾತರಭಯ ಶ್ರೀನಾಥನ"–ಎಂಬಂತೆ)

ದಾಸರ ದಯ ಒಂದಿದ್ದರೆ ಮನುಜಗೆ
ವಾಸುದೇವನು ದಯಮಾಡುವನು॥ ಪ

ದಾಸದೀಕ್ಷೆಯ ಸಂದೇಶವಿತ್ತ ಕಮ–
ಲೇಶನ ಪ್ರಿಯದಾಸ ಶ್ರೇಷ್ಠ ಪುರಂದರ॥ ಅ

ಪುರಂದರದಾಸರೆ ದಾಸರೆಂದೆನುತ
ಗುರುವ್ಯಾಸರಾಯರು ಸಾರಿದರು
ಹರಿಯ ಆಣತಿಯಿಂದ ನರರನುದ್ಧರಿಸಲು
ಧರೆಗೆ ಇಳಿದು ಬಂದ ಸುರಮುನಿಗಳು ಇಂಥ॥ ೧

ಗುರುವಿನಿಂದಲೆ ಪರಮಗತಿಯು ಸಾಧನವೆಂದು
ಅರಸುತಲತಿ ಬರಲತಿ ಕರುಣದಿಂದ
ಹರಿಯ ಅಂಕಿತವಿತ್ತು ಕರಪಿಡಿದೆತ್ತಿದ
ಗುರುವ್ಯಾಸರಾಜರ ಶಿಷ್ಯ ಪುರಂದರ॥ ೨

ಅನಿಲಮತದ ತತ್ತ್ವ ಅನುಭವದಲಿ ತಂದು
ಚಿನುಮಯನೊಲವ ಸಾಧನವ ಮಾಳ್ಪ
ಅನುಪಮ ಪಥ ಸಜ್ಜನರಿಗೊರೆದು
ಲಕ್ಷ್ಮೀಶನ್ನ ದಾಸರಮಾಡಿ ಪೊರೆದ ಪುರಂದರ॥ ೩

ಜ್ಞಾನಪೂರ್ವಕ ಹರಿಧ್ಯಾನವ ಅನುಸಂ–
ಧಾನದಿಂದಲಿ ಸರ್ವಸ್ಥಾನದಲೀ
ಮಾಣದೆ ಧೇನಿಸಿ ಮಾನಸದಲಿ ಸುಖ
ಕಾಣುವ ಭಾಗ್ಯವ ತೋರ್ದ ಪುರಂದರ॥ ೪

ವೇದಪುರಾಣ ಸುಬೋಧ ಮಧ್ವಾಗಮ
ಶೋಧಿಸಿ ಕನ್ನಡ ಕವನದಲೀ
ಮೇದಿನಿಯೊಳು ಸತ್ಸಾಧನಪರರಿಗೆ
ಹಾದಿಯ ತೋರಿ ಉದ್ಧರಿಸಿದ ಪುರಂದರ॥

ವಾತಸುತನ ಸಂಪ್ರೀತಿಪಾತ್ರರು ಸಂ–
ಗೀತ ನರ್ತನದಿಂದ ಭೂತಳದಿ
ದಾತ ಶ್ರೀನಾಥನ ಖ್ಯಾತಿ ಕೊಂಡಾಡುವ
ಪಾತಕದೂರ ವಿಖ್ಯಾತ ಪುರಂದರ॥ ೬

ಬಾಳಿನೊಳಿಹ ಪರದೇಳಿಗೆ ಶ್ರೀಹರಿ
ಊಳಿಗದವರಿಗೆ ಬಯಸುತಲೀ
ಪೇಳುತ ನಾಲ್ಕು ಮುಕ್ಕಾಲು ಲಕ್ಷವದ
ಪಾಲಿಸಿದ ಕರುಣಾಳು ಪುರಂದರ॥ ೭

ಭಕ್ತವರದ ಪಾದಾಸಕ್ತ ದಾಸರಕೂಟ
ಮಸ್ತಕಮಕುಟ ವಿರಕ್ತ ಗುರು
ಚಿತ್ತಜಪಿತನ ವಿಚಿತ್ರಲೀಲೆಗಳನ್ನು
ನಿತ್ಯ ನೋಡುವ ಪೂತಾತ್ಮ ಪುರಂದರ॥ ೮

ಕಂತುಜನಕ ರಮಾಕಾಂತವಿಠ್ಠಲನ ಏ-
ಕಾಂತದಿ ಭಜಿಸಿ ಹೃದ್ಗ್ರಂಥಿಯನು
ಅಂತ್ಯಗೊಳಿಪ ಮುಕ್ತಿಪಂಥವನೆ ತೋರಿ
ಸಂತರ ಪೊರೆದ ಧೀಮಂತ ಪುರಂದರ॥ ೯

॥ದಾಸಕಕ್ಷವು ಸಮಾಪ್ತಿ ॥

॥ಶ್ರೀಮಧ್ವೇಶಾರ್ಪಣಮಸ್ತು॥



॥ ಶ್ರೀಃ ಹರಿಃ ಓಂ॥

ಭಾಗ ೨

# ಯತಿವರೇಣ್ಯರ ಪರವಾದ ಕೀರ್ತನೆಗಳು

## ಶ್ರೀಮದುತ್ತರಾದಿಮಠದ ಯತಿಪರಂಪರೆ

# ಶ್ರೀಮದುತ್ತರಾದಿಮಠದ ಯತಿವರ್ಯರ ಪರಂಪರಾ ಸ್ತೋತ್ರ

## ಧ್ಯಾನಶ್ಲೋಕಗಳು

ಬ್ರಹ್ಮಾಂತಾ ಗುರವಸ್ಸಾಕ್ಷಾದಿಷ್ಟಂ ದೈವಂ ಶ್ರಿಯಃ ಪತಿಃ।
ಆಚಾರ್ಯಾಃ ಶ್ರೀಮದಾಚಾರ್ಯಾಃಸ್ಸಂತು ಮೇ ಜನ್ಮ ಜನ್ಮನಿ॥ ೧

ಶ್ರೀಹಂಸಪರಮಾತ್ಮಾನಂ ವಿರಿಂಚಿ ಸನಕಾದಿಕಾನ್।
ದೂರ್ವಾಸ ಸೋನಿಧೀನ್ಜ್ಞೇಂದ್ರವಾಹನ ತೀರ್ಥಕಾನ್॥ ೨

ಕೈವಲ್ಯತೀರ್ಥಾನ್ ಜ್ಞಾನೇಶಾನ್ಪರತೀರ್ಥಾನ್ನಮಾಮ್ಯಹಂ।
ಸತ್ಯಪ್ರಜ್ಞಾನ್ ಪ್ರಾಜ್ಞತೀರ್ಥಾನನ್ಯಾಸ್ತದ್ವಂಶಜಾನಪಿ॥ ೩

ಪುರೈವ ಕೃಷ್ಣಾಸಿದ್ಧಾನ್ನ ಭುಕ್ತ್ಯಾ ಶೋಧಿತ ಮಾನಸಂ।
ಅಚ್ಯುತಪ್ರೇಕ್ಷತೀರ್ಥಂ ಚ ಮಧ್ವಾರ್ಯಾಣಾಂ ಗುರುಂ ಭಜೇ॥ ೪

ಲಸತು ಶ್ರೀಮದಾನಂದತೀರ್ಥೇಂದುರ್ನೋ ಹೃದಂಬರೇ।
ಯದ್ವಚಶ್ಚಂದ್ರಿಕಾಸ್ವಾಂತ ಸಂತಾಪಂ ವಿನಿಕೃತಂತಿ॥ ೫

ಪೂರ್ಣಪ್ರಜ್ಞಕೃತಂ ಭಾಷ್ಯಂ ಆದೌತದ್ಭಾವಪೂರ್ವಕಂ।
ಯೋ ವ್ಯಾಕರೋನ್ನಮಸ್ತಸ್ಮೈ ಪದ್ಮನಾಭಾಖ್ಯಯೋಗಿನೇ॥ ೬

ಸಸೀತಾಮೂಲರಾಮಾರ್ಚಾಕೋಶ ಗಜಪತೇಃ ಸ್ಥಿತಾ।
ಯೇನಾನೀತಾ ನಮಸ್ತಸ್ಮೈ ಶ್ರೀಮನ್ ನೃಹರಿಭಿಕ್ಷವೇ॥ ೭

ಸಾಧಿತಾಖಿಳ ಸತ್ತತ್ತ್ವಂ ಬಾಧಿತಾಖಿಳ ದುರ್ಮತಂ।
ಬೋಧಿತಾಖಿಳ ಸನ್ಮಾರ್ಗಂ ಮಾಧವಾಖ್ಯಯತಿಂ ಭಜೇ॥ ೮

ಯೋಽವಿದ್ಯಾರಣ್ಯ ವಿಪಿನಂ ತತ್ವಮಸ್ಯಾಶಿನಾಚ್ಛಿನತ್।
ಶ್ರೀಮದಕ್ಷೋಭ್ಯತೀರ್ಥಾರ್ಯ ಹಂಸಿನಂ ತಂ ನಮಾಮ್ಯಹಮ್॥ ೯

ಯಸ್ಯವಾಕ್ಕಾಮಧೇನುರ್ನಃ ಕಾಮಿತಾರ್ಥಾನ್ಪ್ರಯಚ್ಛತಿ।
ಸೇವೇತ ಜಯಯೋಗೀಂದ್ರಂ ಕಾಮಬಾಣಚ್ಛಿದಂ ಸದಾ॥ ೧೦

ಮಾಧ್ಯದದ್ವೈತ್ಯಂಧಕಾರ ಪ್ರದ್ಯೋತನ ಮಹರ್ನಿಶಂ।
ವಿಧ್ಯಾಧಿರಾಜಂ ಸುಗುರುಂ ಧ್ಯಾಯಾಮಿ ಕರುಣಾಕರಮ್॥ ೧೧

ವೀಂದ್ರಾರೂಢಪದಾಸಕ್ತಂ ರಾಜೇಂದ್ರಮುನಿಸೇವಿತಂ।
ಶ್ರೀಕವೀಂದ್ರಮುನಿಂ ವಂದೇ ಭಜತಾಂ ಚಂದ್ರಸನ್ನಿಭಮ್॥ ೧೨

ವಾಸುದೇವ ಪದದ್ವಂದ್ವ ವಾರಿಜಾಸಕ್ತ ಮಾನಸಂ।
ಪದವ್ಯಾಖ್ಯಾನ ಕುಶಲಂ ವಾಗೀಶಯತಿಮಾಶ್ರಯೆ॥ ೧೩

ದ್ಯುಮಣ್ಯಭಿಜನಾಬ್ಧೀಂದು ರಾಮವ್ಯಾಸಪದಾರ್ಚಕಃ।
ರಾಮಚಂದ್ರಗುರುರ್ಭೂಯಾತ್ ಕಾಮಿತಾರ್ಥಪ್ರದಾಯಕಃ॥ ೧೪

ಯದ್ಭಕ್ತ್ಯಾ ಮೂಲರಾಮಸ್ಯ ಪೇಟಿಕಾತ್ಯಕ್ತ ಭೂಮಿಕಾ।
ವಿದ್ಯಾನಿಧಿರ್ಧಿಯಂ ದದ್ಯಾದಷ್ಟಷಷ್ಟಬ್ದ ಪೂಜಕಃ॥ ೧೫

ರಘುನಾಥಗುರುಂ ನೌಮಿ ವಿದ್ಯಾನಿಧಿಕರೋದ್ಭವಮ್।
ಕೂರ್ಮೋ ವರುಣ ಗಂಗೇ ಚ ಯಸ್ಯ ಪ್ರತ್ಯಕ್ಷತಾಂ ಗತಾಃ॥ ೧೬

ಮಹಾಪ್ರವಾಹಿನೀ ಭೀಮಾಯಸ್ಯ ಮಾರ್ಗಮದಾನ್ಮುದಾ।
ರಘುವರ್ಯೋ ಮುದಂ ದದ್ಯಾತ್ಕಾಮಿತಾರ್ಥ ಪ್ರದಾಯಕಃ ೧೭

ಭಾವಬೋಧಕೃತಂ ಸೇವೆ ರಘೂತ್ತಮ ಮಹಾಗುರುಂ।
ಯಚ್ಛಿಷ್ಯ ಶಿಷ್ಯಶಿಷ್ಯಾದ್ಯಾ ಟಿಪ್ಪಣ್ಯಾಚಾರ್ಯ ಸಂಜ್ಞಿತಾಃ॥ ೧೮

ನ ದಗ್ಧಂ ಯಸ್ಯ ಕೌಪೀನಮಗ್ನೌ ದತ್ತಮಪಿಸ್ಫುಟಂ।
**ವೇದವ್ಯಾಸಗುರುಂ ನೌಮಿ ಶ್ರೀವೇದೇಶನಮಸ್ಕೃತಮ್॥** ೧೯

ಶ್ರೀಮತ್ಸುಧಾದ್ಭುತಾಂಭೋಧಿ ವಿಕ್ರೀಡನ ವಿಚಕ್ಷಣಾನ್।
ವಾಕ್ಯಾರ್ಥ ಚಂದ್ರಿಕಾಕಾರಾನ್ವಿದ್ಯಾಧೀಶಗುರೂನ್ ಭಜೇ॥ ೨೦

ವಿದ್ಯಾಧೀಶಾಬ್ಧಿ ಸಂಭೂತೋ ವಿದ್ವತ್ಕುಮುದಬಾಂಧವಃ ।
**ವೇದನಿಧ್ಯಾಖ್ಯ ಚಂದ್ರೋಽಯಂ ಕಾಮಿತಾರ್ಥಾನ್ಪ್ರಯಚ್ಛತಮ್॥** ೨೧

ವೇದನಿಧ್ಯಾಲವಾಲೋತ್ಥಃ ವಿದುಷಾಂ ಚಿಂತಿತಪ್ರದಃ।
ಸತ್ಯವ್ರತಾಖ್ಯ ಕಲ್ಪದ್ರುರ್ಭೂಯಾದಿಷ್ಟಾರ್ಥಸಿದ್ಧಯೇ ೨೨

ಅನಧೀತ್ಯ ಮಹಾಭಾಷ್ಯಂ ವ್ಯಾಖ್ಯಾತಂ ಯದನುಗ್ರಹಾತ್।
ವಂದೇ ತಂ ವಿಧಿನಾ ಸತ್ಯನಿಧಿಂ ಸಜ್ಞಾನಸಿದ್ಧಯೇ॥ ೨೩

**ಸತ್ಯನಾಥಗುರುಃ** ಪಾತುಯೋಽಧೀರೋ ನವಚಂದ್ರಿಕಾಂ।
ನವಾಮೃತ ಗದಾತೀರ್ಥ ತಾಂಡವಾನಿವ್ಯಚೀಕ್ಲೃಪತ್॥ ೨೪

ಸತ್ಯನಾಥಾಬ್ಧಿ ಸಂಭೂತಸ್ಸದ್ಯೋಗಣ ವಿಜೃಂಭಿತಃ।
**ಸತ್ಯಾಭಿನವತೀರ್ಥೇಂದುಸ್ಸಂತಾಪಾನ್ಹಂತು ಸಂತತಮ್॥** ೨೫

ಸತ್ಯಾಭಿನವದುಗ್ಧಾಬ್ಧೇಸ್ಸಂಜಾತ್ಸಕಲೇಷ್ಟದಃ।
**ಶ್ರೀಸತ್ಯಪೂರ್ಣತೀರ್ಥೇಂದುಸ್ಸಂತಾಪಾನ್ಹಂತು ಸಂತತಮ್॥** ೨೬

ಸತ್ಯಪೂರ್ಣಾಂಬೋಧೇರ್ಜಾತೋರ್ವಿದ್ವಜ್ಜವ ವಿಜೃಂಭಿತಃ।
ದನೀಧ್ವಂಸೀತುನಸ್ತಾಪಂ **ಶ್ರೀಸತ್ಯವಿಜಯೋಡುಪಃ॥** ೨೭

ಶ್ರೀಸತ್ಯವಿಜಯಾಂಬೋಧೇರ್ಜಾತಂ **ಸತ್ಯಪ್ರಿಯಾಮೃತಂ॥**
ಜರಾಮೃತೇ ಜಂಘನೀತು ವಿಬುಧಾನಾಂ ಮುದೇ ಸದಾ॥ ೨೮

ನೈವೇದ್ಯಗವಿಷಂ ರಾಮೋ ವೀಕ್ಷ್ಯ ತದ್ಭುಕ್ತಿಭಾಗ್ಗುರುಃ।
ಯೋಽದರ್ಶಯದ್ರವಿಂ ರಾತ್ರೌ ಸತ್ಯಬೋಧೋಽಸ್ತು ಮೇ ಮುದೇ॥ ೨೯

ವಿಷ್ಣೋಃ ಪದ್ಮಶ್ರೀದ್ಯೋರ್ವಾತ್ಮೈ ಸ್ವಾಂತಧ್ವಾಂತ ನಿವಾಕರಃ।
ಶ್ರೀಸತ್ಯಸಂಧ ಸೂರ್ಯೋಽಯಂ ಭಾಸತಾಂ ನೋಹೃದಂಬರೇ॥ ೩೦

ಶ್ರೀಸತ್ಯಸಂಧ ಸಿಂಧೂತ್ಥಃ ಶ್ರೀಸತ್ಯವರ ಚಂದ್ರಮಾಃ।
ಪ್ರಾರ್ಥಿತಾರ್ಥಪ್ರದೋನಿತ್ಯಂ ಭೂಯಃಸ್ಯಾದ್ದೃಷ್ಟಸಿದ್ಧಯೇ॥ ೩೧

ಶ್ರೀಸತ್ಯವರ ದುಗ್ಧಾಬ್ಧೇರುತ್ಥಿತಾ ಜಗತೀತಲೇ।
ಸುಧಾ ಶ್ರೀಸತ್ಯಧರ್ಮಾಖ್ಯಾ ಪಾವಯೇತ್ ಸ್ಮರತಸ್ಸತಃ॥ ೩೨

ಸತ್ಯಧರ್ಮಾಬ್ಧಿ ಸಂಭೂತಶ್ಚಿಂತಾಮಣಿಃ।
ಸತ್ಯಸಂಕಲ್ಪ ಕಲ್ಪದ್ರುಮಃ ಕಲ್ಪಯೇತ್ ಕಾಮಧುಜ್ ಮಮ॥ ೩೩

ಸತ್ಯಸಂಕಲ್ಪವಾದ್ಧ್ಯುತ್ಥಃ ಸತ್ಯಸಂತುಷ್ಟ ಚಂದ್ರಮಾಃ।
ಪ್ರಾರ್ಥಿತಾಽಶೇಷದಾತಾ ಚ ಭಕ್ತವೃಂದಸ್ಯ ನಿತ್ಯದಾ॥ ೩೪

ಸತ್ಯಸಂತುಷ್ಟವಾರಾಶೇರ್ಜಾತ ಸ್ಸತ್ಯಪರಾಯಣಃ।
ಚಿಂತಾಮಣಿಸ್ಸದಾ ಭೂಯಾತ್ಸತಾಂ ಚಿಂತಿತಸಿದ್ಧಯೇ॥ ೩೫

ಸತ್ಪರಾಯಣ ದುಗ್ಧಾಬ್ಧೇಸ್ಸಂಜಾತಾ ಕೀರ್ತಿಕಾಮದಾ।
ಕಾಮಧೇನು ಸತ್ಯಕಾಮನಾಮ್ನೀ ಭೂಯಾತ್ಸತಾಂ ಮುದೇ॥ ೩೬

ಸತ್ಯಕಾಮಾರ್ಣವೋದ್ಭೂತಃ ಶ್ರೀಮತ್ಸತ್ಯೇಷ್ಟ ಸದ್ಗುರುಃ।
ಸತಾ ಚಿಂತಾಮಣಿರಿವ ಚಿಂತಿತಾರ್ಥಪ್ರದೋ ಭುವಿ॥ ೩೭

ಸತ್ಯೇಷ್ಟಾರ್ಯಸರಿನ್ನಾಥಾದುದ್ಭೂತೋಽದ್ಭುತ ದೀಪ್ತಿಮಾನ್।
ನಾಶಯೇತ್ ಹೃದಯಧ್ವಾಂತಂ ಸತ್ಪರಾಕ್ರಮ ಕೌಸ್ತುಭಃ॥ ೩೮

ಸತ್ಪರಾಕ್ರಮದುಗ್ಧಾಬ್ಧೇಸ್ಸಂಜಾತಃ ಕೀರ್ತಿಚಂದ್ರಿಕಃ।
ಸಂತಾಪಂ ಹರತು **ಶ್ರೀಮಾನ್ಸತ್ಯವೀರ್ಯೇಂದು** ರಂಜಿತಾ॥ ೩೯

ಸತ್ಯವೀರಾಟವಾಲೋತ್ಥಃ ವಿದುಷಾಂ ಚಿಂತಿತಪ್ರದಃ।
**ಸತ್ಯಧೀರಾಖ್ಯ** ಕಲ್ಪದ್ರುಃ ಭೂರ್ಯಾದಿಷ್ಟಾರ್ಥಸಿದ್ಧಯೇ॥ ೪೦

ಸತ್ಯಧೀರ ಕರಾಬ್ಜೋತ್ಥಃ ಜ್ಞಾನವೈರಾಗ್ಯಸಾಗರಃ।
**ಸತ್ಯಜ್ಞಾನಾಖ್ಯ** ತರಣಿಃ ಸ್ವಾಂತಧ್ವಾಂತಂ ನಿಕೃಂತತು॥ ೪೧

ಆಸೇತೋರಾತುಷಾರಾದ್ರೇಃ ಯೋದಿಶೋಜಿತವಾನ್ಮೃಹೃಃ।
**ಸತ್ಯಧ್ಯಾನಗುರುಃ** ಪಾತು ಯತೀಂದ್ರೈರಪಿ ಪೂಜಿತಃ॥ ೪೨

ಪ್ರಾವೋಚದ್ಯೋಽಧಿಕಂ ನ್ಯಾಯಸುಧಾವಾಕ್ಯಾರ್ಥ ಚಂದ್ರಿಕಾಂ।
**ಸತ್ಯಪ್ರಜ್ಞ** ಗುರುರ್ದದ್ಯಾತ್ ಪ್ರಜ್ಞಾವೈರಾಗ್ಯಂ ಸದಾ॥ ೪೩

ವೆಂಕಟೇಶಾದ್ರಿಮಾರಭ್ಯ ಸೇತುಂ ತೋತಾದ್ರಿಪೂರ್ವಕಾನ್।
ಗತ್ವಾ ದಿಗ್ವಿಜಯೇ ಪಾತು **ಸತ್ಯಾಭಿಜ್ಞ** ಗುರೂತ್ತಮಃ॥ ೪೪

ಸತ್ಯಾಭಿಜ್ಞಕರೋಬ್ಜೋತ್ಥಃ ಶ್ರೀಸುಧಾಪಾನ ತತ್ಪರಃ।
**ಸತ್ಯಪ್ರಮೋದೋ** ಯತಿರಾಟ್ ಜೀಯಾದ್ಭುವಿ ಶತಂ ಸಮಾಃ॥ ೪೫

**॥ಇತಿ ಶ್ರೀಮದುತ್ತರಾದಿಮಠೀಯ ಶ್ರೀಪಾದಾನಾಂ ಗುರುಪರಂಪರಾಗತ ಶ್ಲೋಕಮಾಲಿಕಾ ಸಂಪೂರ್ಣಂ॥**

॥ಶ್ರೀಮಧ್ವೇಶಾರ್ಪಣಮಸ್ತು॥



॥ ಶ್ರೀಃ ಹರಿಃ ಓಂ॥

## ಶ್ರೀಮದುತ್ತರಾದಿಮಠದ ಯತಿವರೇಣ್ಯರ ಪರಂಪರೆ

| ಕ್ರ.ಸಂ. | ಯತಿವರೇಣ್ಯರು | ವಿವರಗಳು |
|---|---|---|
| ೧ | ಹಂಸನಾಮಕ ಪರಮಾತ್ಮ | ಮೂಲ |
| ೨ | ಚತುರ್ಮುಖ ಬ್ರಹ್ಮದೇವರು | ಪ್ರಾರಂಭ |

| | | |
|---|---|---|
| ೧ | ಸನಕಾದಿಗಳು | |
| ೨ | ದೂರ್ವಾಸರು | ದ್ವಾಪರಯುಗದಲ್ಲಿ |
| ೩ | ಜ್ಞಾನನಿಧಿಗಳು | ಅವತರಿಸಿದ |
| ೪ | ಗರುಡವಾಹನತೀರ್ಥರು | ಲೋಕೋತ್ತರಪುರುಷರು |
| ೫ | ಕೈವಲ್ಯತೀರ್ಥರು | |
| ೬ | ಜ್ಞಾನೇಶತೀರ್ಥರು | |

(ಪರಂಪರೆಯನ್ನು ಮುಂದಿನ ಪುಟದಲ್ಲಿ ಮುಂದುವರಿಸಲಾಗಿದೆ)

# ಕಲಿಯುಗದಲ್ಲಿ ಪರಂಪರೆ

| ಕ್ರ.ಸಂ. | ಯತಿಪುಂಗವರು | ವೃಂದಾವನಸ್ಥಳ | ಆರಾಧನಾದಿನ |
|---|---|---|---|
| ೧ | ಶ್ರೀಅಚ್ಯುತಪ್ರೇಕ್ಷಾಚಾರ್ಯರು | .... | .... |
| ೨ | ಶ್ರೀಮದಾನಂದತೀರ್ಥ ಭಗವತ್ಪಾದರು | ಕ್ರಿ.ಶ.೧೦೪೦ರಲ್ಲಿ ಬದರಿಕಾಶ್ರಮಕ್ಕೆ ಆಗಮನ | ಮಾಘಶುದ್ಧನವಮಿ (ಶ್ರೀಮನ್ಮಧ್ವ ನವಮಿ) |
| ೩ | ಶ್ರೀಪದ್ಮನಾಭತೀರ್ಥರು | ನವವೃಂದಾವನ | ಕಾರ್ತೀಕ ಶುದ್ಧ ಚತುರ್ದಶಿ |
| ೪ | ಶ್ರೀನರಹರಿತೀರ್ಥರು | ಚಕ್ರತೀರ್ಥ | ಪುಷ್ಯಬಹುಳ ಸಪ್ತಮೀ |
| ೫ | ಶ್ರೀಮಾಧವತೀರ್ಥರು | ಮಣೂರು | ಭಾದ್ರಪದ ಕೃಷ್ಣ ಅಮಾವಸ್ಯೆ |
| ೬ | ಶ್ರೀಅಕ್ಷೋಭ್ಯತೀರ್ಥರು | ಮಳಖೇಡ | ಮಾರ್ಗಶೀರ ಕೃಷ್ಣ ಪಂಚಮೀ |
| ೭ | ಶ್ರೀಜಯತೀರ್ಥರು | ಮಳಖೇಡ | ಆಷಾಢ ಕೃಷ್ಣ ಪಂಚಮೀ |
| ೮ | ವಿದ್ಯಾಧಿರಾಜರು | ಯರಗೊಳ | ವೈಶಾಖ ಶುದ್ಧ ತೃತೀಯಾ |
| ೯ | ಶ್ರೀಕವೀಂದ್ರತೀರ್ಥರು | ನವವೃಂದಾವನ | ಚೈತ್ರಶುದ್ಧನವಮೀ |

| | | | |
|---|---|---|---|
| ೧೦ | ಶ್ರೀವಾಗೀಶತೀರ್ಥರು | ಆನೆಗುಂದಿ | ಚೈತ್ರ ವದ್ಯ ತೃತೀಯಾ |
| ೧೧ | ಶ್ರೀರಾಮಚಂದ್ರತೀರ್ಥರು | ಯರಗೊಳ | ವೈಶಾಖ ಶುದ್ಧ ಷಷ್ಠೀ |
| ೧೨ | ಶ್ರೀವಿದ್ಯಾನಿಧಿಗಳು | ಯರಗೊಳ | ಕಾರ್ತೀಕ ಬಹುಳ ಚತುರ್ಥಿ |
| ೧೩ | ಶ್ರೀರಘುನಾಥತೀರ್ಥರು | ಮಳಖೇಡ | ಮಾರ್ಗಶೀರ ಕೃಷ್ಣ ಪ್ರತಿಪದ |
| ೧೪ | ಶ್ರೀರಘುವರ್ಯರು | ಆನೆಗೊಂದಿ | ಜ್ಯೇಷ್ಠ ಕೃಷ್ಣ ತದಿಗೆ |
| ೧೫ | ಶ್ರೀರಘೂತ್ತಮರು | ತಿರುಕೋಯಿಲೂರು | ಪುಷ್ಯ ಶುದ್ಧ ದ್ವಾದಶೀ |
| ೧೬ | ಶ್ರೀವೇದವ್ಯಾಸ | ಪೆನಗೊಂಡ | ಚೈತ್ರ ಶುದ್ಧ ತೃತೀಯ |
| ೧೭ | ಶ್ರೀವಿದ್ಯಾಧೀಶರು | | ಪುಷ್ಯ ಬಹುಳ ಚತುರ್ದಶೀ |
| ೧೮ | ಶ್ರೀವೇದನಿಧಿತೀರ್ಥರು | ಪಂಢರಪುರ | ಕಾರ್ತೀಕ ಶುದ್ಧ ದ್ವಾದಶೀ |
| ೧೯ | ಶ್ರೀಸತ್ಯವ್ರತತೀರ್ಥರು | ಸಾಂಗಲಿ | ಫಾಲ್ಗುಣ ಶುದ್ಧ ಷಷ್ಠೀ |
| ೨೦ | ಶ್ರೀಸತ್ಯನಿಧಿತೀರ್ಥರು | ನಿವೃತ್ತಿಸಂಗಮ | ಮಾರ್ಗಶೀರ ಶುದ್ಧ ದಶಮಿ |
| ೨೧ | ಶ್ರೀಸತ್ಯನಾಥತೀರ್ಥರು | ಅರುಣಾಚಲಕ್ಷೇತ್ರ | ಮಾರ್ಗಶೀರ ಶುದ್ಧ ದ್ವಾದಶೀ |
| ೨೨ | ಶ್ರೀಸತ್ಯಾಭಿನವತೀರ್ಥರು | ನಾಚಾರಗುಡಿ | ಜ್ಯೇಷ್ಠ ಶುದ್ಧ ತ್ರಯೋದಶೀ |
| ೨೩ | ಶ್ರೀಸತ್ಯಪೂರ್ಣತೀರ್ಥರು | ಕೋಲಪುರ | ಜ್ಯೇಷ್ಠ ಕೃಷ್ಣ ದ್ವಿತೀಯಾ |

| | | | |
|---|---|---|---|
| ೨೪ | ಶ್ರೀಸತ್ಯವಿಜಯತೀರ್ಥರು | ಕೌಂಡಿಣ್ಯನದಿತೀರ | ಚೈತ್ರ ಕೃಷ್ಣ ದ್ವಾದಶೀ |
| ೨೫ | ಶ್ರೀಸತ್ಯಪ್ರಿಯತೀರ್ಥರು | ಮಾನಾಮಧುರೈ | ಚೈತ್ರ ಶುದ್ಧ ತ್ರಯೋದಶೀ |
| ೨೬ | ಶ್ರೀಸತ್ಯಬೋಧರು | ಸವಣೂರು | ಫಾಲ್ಗುಣ ಕೃಷ್ಣ ಪ್ರತಿಪದ |
| ೨೭ | ಶ್ರೀಸತ್ಯಸಂಧರು | ಮಹಿಷಿ | ಜ್ಯೇಷ್ಠ ಶುದ್ಧ ದ್ವಿತೀಯಾ |
| ೨೮ | ಶ್ರೀಸತ್ಯವರತೀರ್ಥರು | ಸಂತೆಬಿದನೂರು | ಶ್ರಾವಣ ಶುದ್ಧ ಸಪ್ತಮೀ |
| ೨೯ | ಶ್ರೀಸತ್ಯಧರ್ಮತೀರ್ಥರು | ಹೊಳೆಹೊನ್ನೂರು | ಶ್ರಾವಣ ಕೃಷ್ಣ ತ್ರಯೋದಶೀ |
| ೩೦ | ಶ್ರೀಸತ್ಯಸಂಕಲ್ಪತೀರ್ಥರು | ಮೈಸೂರು | ಆಷಾಢ ಶುದ್ಧ ಪೂರ್ಣಿಮಾ |
| ೩೧ | ಶ್ರೀಸತ್ಯಸಂತುಷ್ಟತೀರ್ಥರು | ಮೈಸೂರು | ಫಾಲ್ಗುಣ ಕೃಷ್ಣ ಅಮಾವಾಸ್ಯೆ |
| ೩೨ | ಶ್ರೀಸತ್ಯಪರಿಪೂರ್ಣತೀರ್ಥರು | ಸಂತೆಬಿದನೂರು | ಆಶ್ವಯುಜ ಶುದ್ಧ ಸಪ್ತಮೀ |
| ೩೩ | ಶ್ರೀಸತ್ಯಕಾಮರು | ಆತಕೂರು | ಪುಷ್ಯ ಬಹುಳ ಷಷ್ಠೀ |
| ೩೪ | ಶ್ರೀಸತ್ಯೇಷ್ಟರು | | ಭಾದ್ರಪದ ಶುದ್ಧ ದ್ವಾದಶೀ |
| ೩೫ | ಶ್ರೀಸತ್ಯಪರಾಕ್ರಮರು | ಚಿತ್ತಾಪುರ | ಆಶ್ವಯುಜ ಶುದ್ಧ ಅಷ್ಟಮೀ |
| ೩೬ | ಶ್ರೀಸತ್ಯವೀರತೀರ್ಥರು | ಕೊರ್ಲಹಳ್ಳಿ | ಕಾರ್ತೀಕ ಶುದ್ಧ ದಶಮೀ |
| ೩೭ | ಶ್ರೀಸತ್ಯಧೀರತೀರ್ಥರು | ಆತಕೂರು | ಜ್ಯೇಷ್ಠ ಕೃಷ್ಣ ನವಮೀ |

| | | | |
|---|---|---|---|
| ೩೮ | ಶ್ರೀಸತ್ಯಜ್ಞಾನತೀರ್ಥರು | **ರಾಜಮಹೇಂದ್ರಿ** | ಮಾಘ ಶುದ್ಧ ದ್ವಾದಶೀ |
| ೩೯ | ಶ್ರೀಸತ್ಯಧ್ಯಾನತೀರ್ಥರು | **ಪಂಢರಪುರ** | ಚೈತ್ರ ಶುದ್ಧ ಸಪ್ತಮೀ |
| ೪೦ | ಶ್ರೀಸತ್ಯಪ್ರಜ್ಞತೀರ್ಥರು | **ಆತಕೂರು** | ಚೈತ್ರ ಶುದ್ಧ ದ್ವಿತೀಯಾ |
| ೪೧ | ಶ್ರೀಸತ್ಯಾಭಿಜ್ಞತೀರ್ಥರು | **ರಾಣಿಬೆನ್ನೂರು** | ಪುಷ್ಯ ಕೃಷ್ಣ ಅಷ್ಟಮಿ |

೪೨ **ಶ್ರೀಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು**–ಈಗ ಸರ್ವಜ್ಞಾಚಾರ್ಯರ ಪೀಠದಲ್ಲಿ ವಿರಾಜಮಾನರಾಗಿರುವ ಯತಿವರೇಣ್ಯರು.

# ೨ ಯತಿಪರಂಪರಾ ಕೀರ್ತನೆಗಳ ಸಂಗ್ರಹ

## ಶ್ರೀಮದುತ್ತರಾದಿಮಠದ ಯತಿಗಳ ಪೀಳಿಗೆ

### ೬೪

(ತಂದೆವೆಂಕಟೇಶವಿಠ್ಠಲಾಂಕಿತ)

ರಾಗ–ಭೂಪಾಳಿ ವಾರ್ಧಿಕಷಟ್ಪದಿ

ಸ್ಮರಿಸು ಗುರುಸಂತತಿಯನು ಮನವೇ॥ ಪ

ಸ್ಮರಿಸು ಗುರುಸಂತತಿಯ ಹರುಷನಿರ್ಭರದಿಂದ
ದೊರಕುವುದು ವೈರಾಗ್ಯ ಜ್ಞಾನ ಸದ್ಭಕ್ತಿಗಳು
ಹರಿಯ ಕರುಣ ಪ್ರಸಾದ ಸ್ಫುರಿಸುಗು ನಿರಂತರದಿ
ವರಮುಕ್ತಿಪಾಥೇಯವೂ॥ ಅ

ಶ್ರೀಪತಿಯು ಶ್ರೀನಾಭಿಕೂಪಭವ ಸನಕ ಶಿವ
ರೂಪನಹ ದೂರ್ವಾಸ ತಚ್ಛಿಷ್ಯ ಜ್ಞಾನನಿಧಿ
ತಪಸಿತಾರಾಕ್ಷವಹ ಕೈವಲ್ಯಜ್ಞಾನೇಶ ಪರತೀರ್ಥ ಸತ್ಯಪ್ರಜ್ಞ
ಅಪರಿಮಿತಮಹಿಮ ಪ್ರಾಜ್ಞಾಚ್ಯುತಪ್ರೇಕ್ಷಾಖ್ಯ
ಉಪಮಾನರಹಿತ ದಶಪ್ರಮತಿಯನುಮಾನಯತಿ
ಕಪಿಪ ಕೃಷ್ಣಾ ರಮಣ ಸುಖತೀರ್ಥ ಪೂರ್ಣಭೂಧಾಸುಪತಿ
ಮಧ್ವರಾಯ॥ ೧

ಕಮಲನಾಭನು ಮಾಧವಾಕ್ಷೋಭ್ಯ ನರಹರಿಯು
ಸುಮನಸೋತ್ತಂಸ ಜಯರಾಯ ವಿದ್ಯಾಧಿನೃಪ
ಕ್ರಮದಲಿ ಕವೀಂದ್ರಮುನಿ ವಾಗೀಶ ರಾಮೇಂದು
ವಿಬುಧೇಂದ್ರ ವಿದ್ಯಾನಿಧಿ

ಆ ಮಹಾರಘುನಾಥ ರಘುವರ್ಯರುತ್ತಮರು
ಸ್ವಾಮಿ ವೇದವ್ಯಾಸತೀರ್ಥ ವಿದ್ಯಾಧೀಶ
ಸಾಮಾದಿ ವೇದನಿಧಿ ಸತ್ಯವ್ರತ ಸತ್ಯನಿಧಿ ಸತ್ಯನಾಥಾಭಿನವರು॥ ೨

ಸತ್ಯಪೂರ್ಣರು ಸತ್ಯವಿಜಯ ಸತ್ಯಪ್ರಿಯರು
ಅತ್ಯಧಿಕಮಹಿಮಾಂಬುನಿಧಿ ಸತ್ಯಬೋಧಾಖ್ಯ
ಮತ್ತೆ ಪ್ರಹ್ಲಾದಂಶ ಸತ್ಯಸಂಧಾಭಿದರು ಸತ್ಯವರ ಸತ್ಯಧರ್ಮ
ಸತ್ಯೋಪಸರ್ಗಯುತ ಸಂಕಲ್ಪ ಸಂತುಷ್ಟ
ಸತ್ಯಪಾರಾಯಣರು ಸತ್ಯಕಾಮೇಷ್ಟಾಖ್ಯ
ಪ್ರತ್ಯರ್ಥಿಪಾಟನ ಪರಾಕ್ರಮ ಸತ್ಯವೀರರು ಸತ್ಯಧೀರತೀರ್ಥ॥ ೩

ಗುಪ್ತಮಹಿಮೋಪೇತ ಸಪ್ತಜಿಹ್ವಾಂಶಯುತ
ವ್ಯಾಪ್ತ ಚಿಂತನಶೀಲ ಪ್ರಾಪ್ತ ಜಯರಾಯಕೃಪ
ಮಾಪ್ತಾಂಘ್ರಿ ಕಂಜ ಕಂಜಲ್ಕಾನುರಕ್ತ ಗುರು ಸತ್ಯಜ್ಞಾನಾರ್ಯವರ್ಯ
ದೀಪ್ತ ಪ್ರತಿಭಾರ್ಕ ನಿರ್ವ್ಯಾಪ್ತಪ್ರತ್ಯೂಹತಮ
ಗೋಪ್ತಾದ್ಭುತಾತ್ಮ ಪರ್ಯಾಪ್ತಾಪರೋಕ್ಷಗತ
ಸುಪ್ತಭಾವಿಕ ಹೃದಯವ್ಯಾಪ್ತ ಭವಪರಿತಾಪ ತಪ್ತಜನರಾಕಾಬ್ಧಿಜ॥ ೪

ಶಾಂತನಂತರ್ಮುಖನು ಭಕ್ತಚಿಂತಾರತ್ನ
ಕೌಂತೇಯಲಬ್ಧ ಪ್ರಸಾದಾತ್ಮವಿತ್ಸುಗುಣಿ
ಭ್ರಾಂತಿಕಾಂತಾರಾಶುಶುಕ್ಷಣಿ ದ್ವೈತಮತಸಂಪ್ರತಿಷ್ಠಾಪನಪರ
ಮಂಥಿತಾಗಮ ಸ್ವಾಂತನಭಿನವಾನಂದ ಪರಿ
ಪಂಥಿ ಸಮಯ ತಮಾಲದಾವಾನಲಾಖಿಳದಿ
ಗಂತ ವಿಶ್ರಾಂತ ಧವಳಿಮ ಸುಸತ್ಕೀರ್ತಿಯುತ ಸತ್ಯಧ್ಯಾನಾಖ್ಯ
ಯತಿರಾಟ್॥ ೫

ಪೇಳಲಳವೇ ಸೂತ್ರಭಾಳಾಕ್ಷರೆಲ್ಲ ಹರಿ
ಯೂಳಿಗಪ ಬಹು ಬಯಸಿ ಭಿಕ್ಷುವೇಷದಿ ಮಾಧ್ವ
ಪೀಳಿಗೆಯ ಬೆಳೆಸಿ ಸಮ್ಯಕ್‌ಜ್ಞಾನಪೀಯೂಷ ವೀರವೈಷ್ಣವರಿಗಿತ್ತು

ಕಾಲಬಲದಿ ಪ್ರವೃತ್ತಿಶೀಲರಾಗಿಹ ಬುಧರ
ಜಾಲಕಮರಾಪಗೆಯಲಾಳ್ವ ಮರ್ಯಾದ ಸರ್ವ
ಮೂಲಗಳ ರಚಿಸಿ ಸಾಧಿಸಿ ತತ್ತ್ವದೇಳಿಗೆಯ ಡಿಂಡಿಮುವ
ಮೊಳಗಿಸಿದರು॥ ೬

ಉತ್ತರಶ್ರೀಮಠದ ತತ್ತ್ವಸಿಂಹಾಸನಾ ವೇ
ಷ್ಟಿತ ಮಹಂತ ಮುನಿಸತ್ತಮರ ದಿವ್ಯಾಖ್ಯ
ಸತ್ತೀರ್ಥಪ್ರಾಶನದಿ ದುಸ್ತರಾಘವಿನಾಶ ಸ್ವಸ್ಥಚಿತ್ತವೂ ಹರ್ಷವೂ
ಹೊತ್ತು ಮೂಡುವವೇಳೆ ಸತ್ಯಪ್ರಜ್ಞಾಖ್ಯರನು
ಸತ್ಯಾಭಿನವ ಸತ್ಯಪ್ರಮೋದ ತೀರ್ಥರ ನೆನೆಯೆ
ದತ್ತ ಪ್ರಾಣನು ತಂದೆವೆಂಕಟೇಶವಿಠ್ಠಲ ನಿನ್ನೆತ್ತಣದೊ ಭಯವವರ್ಗೆ॥ ೭



## ೧. ಶ್ರೀಸತ್ಯಪ್ರಮೋದತೀರ್ಥರು

(ಈಗ ಶ್ರೀಸರ್ವಜ್ಞಾಚಾರ್ಯರಪೀಠದಲ್ಲಿ ವಿರಾಜಮಾನರಾಗಿರುವ ಉತ್ತರಾದಿಮಠಾಧೀಶರು)

೨೫

(ಗುರುಗೋವಿಂದವಿಠ್ಠಲಾಂಕಿತ)

ರಾಗ–ಕಾಂಬೋಧಿ ಝಂಪೆತಾಳ

ಸತ್ಯಾಭಿಜ್ಞಕರಜ ಶ್ರೀಸತ್ಯಪ್ರಮೋದಾ
ತೀರ್ಥ ನಿಮ್ಮಯ ಚರಣದ್ವಂದ್ವಕಾನಮಿಪೇ॥ ಪ

ವೈರಾಗ್ಯಸದ್ಭಾಗ್ಯ ಪರಮನಿಧಿಯೆನಿಸುತಲಿ
ಶ್ರೀರಾಮಪದ ತುಂಗ ಸರಸೀರುಹಭೃಂಗಾ
ಊರೂರು ಚರಿಸುತಲಿ ಆ ರಾಮಪದದ್ವಂದ್ವ
ಆರಾಧಕರಿಗ್ತೋರಿದೆ ಪರಮತತ್ತ್ವಗಳಾ॥ ೧

ವಾದಿಗಳ ಹೃದಯ ನಿರ್ಭೇದಗೈಸುವ ನಿಮ್ಮ
ವಾದಗಳ ಗಡಣೆಗಳ ವಾದಿಗಳು ಕೇಳಿ
ಪಾದವನು ಕ್ರಮಿಸುತ್ತ ಗೈದರು ಪಲಾಯನವ
ಮೋದಪ್ರಮೋದಹರಿ ಕಾರುಣ್ಯಪಾತ್ರಾ॥ ೨

ಕಲ್ಯಾಣಪುರಿಯೊಳಗೆ ಎಲ್ಲ ವೈಷ್ಣವರ್ನೆರೆದು
ಫುಲ್ಲನಾಭನು ಶ್ರೀವೇದವ್ಯಾಸರನೂ
ಚೆಲ್ವಗಜ ವಾಹನದಿ ಕಳ್ಳಿರಿಸಿ ಐತರಲು
ಎಲ್ಲ ಭಕ್ತರು ವೊರೆಯೆ ಅಂಬರವು ಬಿರಿಯೇ॥ ೩

ಖರನಾಮಸಂವತ್ಸರ ಸುಮೂರೆಡನೇಮಾಸ
ಆರೆರಡನೇ ದಿನದಿ ಚಾರು ನಿಮ್ಮಯ ಮಠದಲೀ
ಧೀರ ನೀ ಸ್ಥಾಪಿಸಿದೆ ಎರಡು ವೃಂದಾವನವ
ಶ್ರೀ ರಘೂತ್ತಮ ಸಿರಿ ಸತ್ಯಧ್ಯಾನರ ಭಕ್ತಿಲೀ॥ ೪

ನವರತ್ನ ಮಂಟಪದಿ ಶ್ರೀವರನ ಕುಳ್ಳಿರಿಸಿ
ವಿವಿಧ ವಿಧಿವತ್ಪೂಜೆ ಹವಣೆಯಲಿ ಮಾಡೇ
ಅವನಿಸುರರುಗಳಿಂದ ಸ್ತವನವೇದಗಳಿಂದ
ಶ್ರವಣಸುಖವಾನಂದ ಕಳೆದು ಭವಬಂಧಾ॥ ೫

ಕೋಪರಹಿತರು ಎನಿಸಿ ಶ್ರೀಪತಿಯ ಧ್ಯಾನಿಸುತ
ತಾಪಸೀಗಳು ತೀರ್ಥ ಪ್ರಾಪ್ತಿಸುತ್ತಿರೆ ಭಕುತರೂ
ಪಾಪ ಕಳೆದೆವು ಎಂಬ ಸಲ್ಲಾಪದೊಳು ತಪನ
ತಾಪ ಮರೆತರು ನೋಡಿ ಪಾಪ ಹೊರದೂಡೀ॥ ೬

ಹತ್ತಾರುಸಾಸಿರಕೆ ಮತ್ತೆ ಭೋಜನಗೈಸಿ
ಕೃತ್ತಿವಾಸನತಾತ ಉತ್ತಮೋತ್ತಮನೆನ್ನುತಾ
ಸತ್ಯವಲ್ಲಭ ಗುರುಗೋವಿಂದವಿಠ್ಠಲನ
ಪ್ರತ್ಯಹರ್ ಅರ್ಚಿಸುವ ಸತ್ಯಪ್ರಮೋದಾರ್ಯ॥ ೭



## ೨. ಶ್ರೀಸತ್ಯಧ್ಯಾನತೀರ್ಥರು

(ಪುಣ್ಯದಿನ-ಚೈತ್ರಶುದ್ಧ ಅಷ್ಟಮಿ. ಸ್ಥಳ-ಪಂಢರಾಪುರ)

ಧ್ಯಾನಶ್ಲೋಕ

ಸತ್ಯಜ್ಞಾನ ಕರಾಂಬೋಜೋದಯ ಗುರೋ ಶ್ರೀರಾಮಪದಾಶ್ರಯಃ।
ಪ್ರತ್ಯರ್ಥ್ಯೇಭ ಕುಂಭದಲನೇ ಸಿಂಹ ಪ್ರಬರ್ಹಾಯಕಃ॥
ಭೃತ್ಯಾಭೀಷ್ಟ ಫಲಪ್ರದೇ ಸುರದ್ರುಮಸಮಃ।
ತ್ವತ್ಪಾದೇ ಪ್ರಣಮಾಮಿ ಸತ್ಯಧ್ಯಾನಯತಿರಾಟ್ ತ್ವಂ
ಪಾಹಿಮಾಂ ಕರುಣಯಾ॥

೬೬

(ತಂದೆ ವೆಂಕಟೇಶವಿಠ್ಠಲಾಂಕಿತ)

ರಾಗ-ಕಾಂಬೋಧಿ ಝಂಪೆತಾಳ

ಆನಮಿಪೆ ಶ್ರೀಸತ್ಯಧ್ಯಾನಯತಿಗಳಿಗೆ॥ ಪ

ಹೀನೈಕ್ಯಕಾನನ ತನೂನಪಾತನಿಗೆ॥ ಅ

ಆಸೇತು ಹಿಮಗಿರಿ ಪ್ರವಾಸ ಕೈಕೊಂಡಖಿಳ
ವ್ಯಾಸಸೂತ್ರಾದಿ ಪ್ರಸ್ಥಾನತ್ರಯದಲೀ
ದೇಶಿಕರ ವಿದ್ವದ್ಸಭಾಸಮ್ಮೇಳದೊಳನಿಲ
ಭಾಷ್ಯಾರ್ಥಗಳ ಪ್ರತಿಷ್ಠಾಪಿಸಿದನೆಂದೂ॥ ೧

ಸತ್ಯಜ್ಞಾನಾರ್ಣವ ಮಹತ್ತರೋಡುಪ ಭಕ್ತ
ಹೃತ್ತಮಾಂತಕಭಾನು ಪ್ರತ್ಯರ್ಥಿಹ
ಮಿಥ್ಯವಿದ್ರಾವಣ ವಿಚಾರಸಾರಾದ್ಯಮಿತ
ತತ್ತ್ವಪ್ರಮೇಯ ಸರ್ವತ್ರ ಮೆರೆಸಿದನೆಂದು॥ ೨

ಜ್ಞಾನಾಯು ಭಕ್ತಿ ವೈರಾಗ್ಯಾನುಕೂಲದಲಿ
ದಾನಾನುಕಂಪ ವಿದ್ವತ್ಪ್ರಭೆಯಲಿ
ಜಾನಕೀಪತಿವಿಠಲ ಕೃಷ್ಣವ್ಯಾಸಾರ್ಚನೆ ವಿ
ಧಾನದೊಳಗಭಿನವಾನಂದಮುನಿಯೆಂದು॥ ೩

ಈ ವಿಧ ಮಹಾಮಹಿಮರೀಭುವಿಲಿ ಜನಿಸುವುದೇ
ಪಾವಮಾನಿಗರ ಸದ್ಭಾಗ್ಯವೆನುತ
ಭಾವದೊಳು ಇವರಂಘ್ರಿರೇಣೆನವರವನಾಗಿ
ಸೇವಿಸಲು ದುರ್ಮೋಹ ವ್ಯಾವರ್ತವೆಂದು॥ ೪

ಭೌಮವಾರ ವಸಂತ ಚೈತ್ರಾದಿ ಅಷ್ಟಮಿಯ
ಯಾಮ್ಯಯಾಮದೆ ಚಿತ್ರಭಾನುವಿನಲಿ
ಭೀಮರಥಿತೀರ ತಂದೆವೆಂಕಟೇಶವಿಠ್ಠಲನ
ಧಾಮವೈದಿದ ಕರ್ಮದೇವರಿವರೆಂದು॥ ೫



೬೭

(ಶಾಮಸುಂದರಾಂಕಿತ)

**ರಾಗ–ಕಾಂಬೋಧಿ** **ಝಂಪೆತಾಳ**

ಪಾಂಡುನಂದನರಂತೆ ತೋರುತಿಹರು
ಪಂಡಿತೋತ್ತಮ ಸತ್ಯಧ್ಯಾನ ತೀರಥರು॥ ಪ

ನಿಜಜ್ಞಾನ ಚಿಹ್ನದೀ ವಿನಯಾದಿ ಸದ್ಗುಣದಿ
ದ್ವಿಜರಾಜಸತ್ಕುಲದಿ ಸುಜನಗಣದಿ
ಕುಜನವರ್ಗವ ನೀಗಿ ವೃಜಿನವರ್ಜಿತರಾಗಿ
ಗಜವರದನಂಘ್ರಿಯುಗ ಭಜನ ತತ್ಪರರಾಗಿ॥ ೧

ಧರಮಬಲ್ಲವರಾಗಿ ಗುರುಭಕ್ತಿಯುತರಾಗಿ
ವರಸುಗೀತಾರ್ಥ ತತ್ವಜ್ಞರಾಗೀ
ಧರಣಿ ಮೇಲುಳ್ಳ ಸುಕ್ಷೇತ್ರ ಸತ್ತೀರ್ಥ
ಚರಿಸುತಲಿ ಕರಿ ತುರಗ ಪರಿಪಾಲಿಸುವರಾಗಿ॥ ೨

ಋಷಿವ್ಯಾಸ ಉಕ್ತಿಯಲಿ ನಿಶಿ ಹಗಲು ಮನವಿರಿಸಿ
ವಸುಧೆಸುರರಿಗೆ ಸಮ್ಮೋದಗೊಳಿಸಿ
ವಸುದೇವಸುತ ಶ್ಯಾಮಸುಂದರನ ವಶಗೊಳಿಸಿ
ದಶದಿಶದಿ ಜಯಭೇರಿ ಅಸಮರೆಂದ್ಹೊಡಿಸುತಲೀ॥ ೩



೩೮

(ಕಾರ್ಪರ ನರಹರಿ ಅಂಕಿತ)

ರಾಗ–ಕಾಂಬೋಧಿ ಝಂಪೆತಾಳ

ಸತ್ಯಧ್ಯಾನರ ನಿತ್ಯ ಸ್ಮರಿಸಿ ಕೃತಕೃತ್ಯನು ನೀನಾಗೋ॥ ಪ.

ಮರ್ತ್ಯನೆ ಶ್ರೀಗುರು ಸತ್ಯಜ್ಞಾನ।
ಸುತೀರ್ಥರಕರಕಂಜೋತ್ಥರಾದ ಗುರು॥ ಅ.

ಸುತ್ತಲು ಬಿಡದೆ ಧರಿತ್ರಿಯೊಳಗೆ ಸುಕ್ಷೇತ್ರಗಳ ಚರಿಸಿ
ಮತ್ತಮಾಯಿಜನ ಹಸ್ತಿಗಣಕೆ ಪಂಚವಕ್ತ್ರರೆಂದು ಕರೆಸಿ
ಛಾತ್ರವರ್ಗ ಸಂಯುಕ್ತರಾಗಿ ಸುಖ
ತೀರ್ಥರ ಸುಮತಕೆ ಸಂಸ್ಥಾಪಕ ಗುರು॥ ೧

ಏನು ಕರುಣವೊ ಜ್ಞಾನಿಗಳನು ಧನದಾನದಿ ದಣಿಸುತಲಿ
ಕ್ಷೋಣಿವಿಬುಧರಿಗೆ ನ್ಯಾಯ ಸುಧಾರಸಪಾನ ಮಾಡಿಸುತಲಿ
ದೀನ ಜನಕೆ ಸುರಧೇನು ಎನಿಸಿದ ಮ
ಹಾನು ಭಾವರೆಂದು ಸಾನುರಾಗದಲಿ॥ ೨

ಹೇಮವಜ್ರಮಯ ಮಂಟಪದಲಿ ಶ್ರೀರಾಮನ ಪದಪದುಮ
ನೇಮದಿ ಪೂಜಿಸುವಾ ಮಹವೈಭವ ನೋಳ್ಪ ಜನರ ಜನುಮ
ಈ ಮಹಿಯೊಳು ಸಾರ್ಥಕವೆನಿಸಿತು ಬಹು
ಧೀಮಜ್ಜನರಿಗೆ ಕಾಮಿತ ಗರೆಯುವ॥ ೩

ಹರಿಪದಪೊಂದಲು ಮರುತಶಾಸ್ತ್ರವೆಂಬೊ ತರಣಿಯೋಳ್ಪಗಲಿರಳು
ಹರುಷದಿ ಕುಳಿತಿಹ ಧರೆಸುರರನು ಭವಶರಧಿ ದಾಟಿಸಲು
ಕರದೊಳು ದಂಡವ ಧರಿಸಿ ನಿಂದಿರುವರರುಣವಸನದಲಿ
ಪರಿಶೋಭಿತತನು॥ ೪

ಶರಣಜನರ ಬಹುದುರಿತ ತಮಕೆ ದಿನಕರ ಸಮರೆನಿಸುತಲಿ
ಸಿರಿ **ಕಾರ್ಪರ ನರಹರಿಯ** ಚರಣಯುಗ್ಮ ಸ್ಮರಿಸುತ ಹರುಷದಲಿ
ಧರೆಯೊಳು ಪಂಢರಪುರ ಸುಕ್ಷೇತ್ರದಿ ವರತನುವಿರಿಸಿದ
ಪರಮ ಮಹಿಮ ಗುರು॥ ೫



೭೯

(ಗುರುಗೋವಿಂದವಿಠ್ಠಲಾಂಕಿತ)

**ರಾಗ–ಆನಂದಭೈರವಿ** **ಛಾಪುತಾಳ**

ಸತ್ಯಧ್ಯಾನರ ಪಾದ ನಿತ್ಯದಿ ಭಜಿಸುವ
ಭೃತ್ಯನೆ ಬಲು ಧನ್ಯನೋ|| ಪ

ತತ್ತ್ವವಾದ ಸ್ಥಾಪಿಸುತ
ಅತ್ಯಧಿಕ ಸಂತೃಪ್ತಿಯಲಿ
ನಿತ್ಯ ಹರಿ ಸರ್ವೋತ್ತಮನೆಂದು
ಭೃತ್ಯಜನಕೊತ್ತೊತ್ತಿ ಪೇಳುವ|| ಅ

ಮುನಿಕುಲ ಸನ್ಮಾನ್ಯ ಸತ್ಯಜ್ಞಾನರ ಕರಜ
ಮಾನಮೇಯ ಜ್ಞಾನನಿಪುಣ||
ಹೀನ ಮಾಯ್ಗಳ ಗೋಣ ಮುರಿದು
ಸ್ವಾನುಭಾವದಿ ಬ್ರಹ್ಮಸತ್ಯ
ಜ್ಞಾನ ಆನಂದವೆನುತಲಿ
ಆನುಪೂರ್ವವೇದಾರ್ಥಪೇಳ್ದ|| ೧

ಈ ಮಹಿಯೊಳು ಭರತ ಭೂಮಿಯೊಳಖಿಳ ಸು
ಸೀಮೆಯ ಚರಿಸುತಲೀ||
ನೇಮದಿಂದಲಿ ಪಾದಭಿಕ್ಷೆಯ
ಪ್ರೇಮದಿಂದಲಿ ಬಯಸಿ ಬರುತ
ಗ್ರಾಮಗ್ರಾಮದ ಭ್ರಾಮಕ ಜನ
ಸ್ತೋಮವ ನಿಸ್ತೇಜಗೈಸಿದ|| ೨

ಪರಮಹಂಸೋತ್ತಮ ಪರವಾದಿಗಜಸಿಂಹ
ಗುರುವರಹಿತ ಸಾರ್ವಭೌಮಾ॥
ವರ ಸುವತ್ಸರ ಚಿತ್ರಭಾನುವು
ಚೈತ್ರಶುಕ್ಲದಿ ಅಷ್ಟಮೀದಿನ
ಸಿರಿ ಗುರುಗೋವಿಂದವಿಠ್ಠಲನ
ಚರಣ ಸರಸಿಜ ಸೇರಿ ಮರೆವ॥ ೩



## ೩. ಶ್ರೀಸತ್ಯವೀರತೀರ್ಥರು (ಕ್ರಿ.ಶ.1801–1808)

(ಆರಾಧನೆ–ಕಾರ್ತಿಕ ಶುದ್ಧ ದಶಮಿ)
(ಸ್ಥಳ–ಕೊರ್ಲಹಳ್ಳಿ)

ಧ್ಯಾನಶ್ಲೋಕ

ಸತ್ಯವೀರಾಲವಾಲೋತ್ಥಃ ವಿದುಷಾಂ ಚಿಂತಿದಪ್ರದಃ ।
ಸತ್ಯಧೀರಾಖ್ಯ ಕಲ್ಪದ್ರುಃ ಭೂರ್ಯಾದಿಷ್ಟಾರ್ಥಸಿದ್ಧಯೇ॥

೭೦

(ತಂದೆವೆಂಕಟೇಶವಿಠ್ಠಲಾಂಕಿತ)

ರಾಗ–ಆನಂದಭೈರವಿ ಆದಿತಾಳ

ಗುರುರಾಯ ಕಾವುದೆಮ್ಮನು ತ್ವರಿತಾ
ಪರಮಾದ್ಭುತ ಚರಿತಾ।
ಸರಿಗಾಣೆ ನಿಮಗಿನ್ನರಸಲು ಸತತಾ
ಧರಣಿಪತಿ ಮಹಿತಾ॥ ಪ

ಚರಣಪಂಕಜಯುಗ್ಮ ಸ್ಮರಿಪ ಜನರ ನಿತ್ಯಾ
ಪರಿಪಾಲಿಪ ಬಿರುದುಳ್ಳ ಸತ್ಯವೀರ॥ ಅ

ಸುಖತೀರ್ಥಾಮಲ ಸಮಯಾಂಬುಧಿಚಂದ್ರ
ಶುಭತಮಗುಣಸಾಂದ್ರ।
ಶುಕನಂತೆ ಶ್ರೀಪತಿಧ್ಯಾನ ನಿಸ್ತಂದ್ರ
ಭೂಸುರ ದೇವೇಂದ್ರ॥
ಸಕಲಸದಾಗಮನಿಕರಿಾಲಯು ಸ
ನ್ಮುಖನಾರ್ಚಿತ ಸದ್ವಿಕಚಪಯೋನಿಜ॥ ೧

ಯಮರಾಟ್ ಶ್ರೀಸತ್ಯಪರಾಕ್ರಮತನುಜ
ಯೋಚಿಪೆನೆ ನಾಮನುಜ।
ವಿಮತಾವಳಿ ಜಲರಾಶಿಗೆ ನೀ ಘಟಜ
ಸಂಸ್ತುತ ರಘುಕುಲಜ॥
ಶಮದಮ ಪ್ರಾಣವ ಸತ್ಕ್ರಮದಿಂದಲಿ ಹೃ-
ತ್ಕಮಲ ಸೀತಾರಮಣನ ಧ್ಯಾನಿಪ॥ ೨

ಒಂದಾರುವ್ರತ ಸುನಂದನ
ತರುವೆ ವರ್ಣಿಪುದಕೆ।
ಬೃಂದಾರಕ ದೈಶಿಕ ನಿಮ್ಮಡಿಗೆರಗುವೆ
ತೇಜೋರಾಜಿತರವೇ॥
ತಂದೆವೆಂಕಟೇಶವಿಠ್ಠಲನ ಎನ್ ಹೃನ್-
ಮಂದಿರದಲಿ ನಿಂದಿರುವಂತೆ ವಯಡಿಸೋ॥ ೩



# ೪. ಶ್ರೀಸತ್ಯಕಾಮತೀರ್ಥರು (ಕ್ರಿ.ಶ.1785-1793)

(ಪುಣ್ಯದಿನ–ಪುಷ್ಯಬಹುಳ ಷಷ್ಠಿ)
(ಸ್ಥಳ–ಆತಕೂರು)

**ಧ್ಯಾನಶ್ಲೋಕ**

**ಸತ್ಯಕಾಮಾರ್ಣವೋದ್ಭೂತಃ ಶ್ರೀಮತ್ಸತ್ಯೇಷ್ಟಸದ್ಗುರುಃ।**
**ಸತಾಂ ಚಿಂತಾಮಣಿರಿವ ಚಿಂತಿತಾರ್ಥಪ್ರದೋಭೂವಿ॥**

೭೧

(ವೆಂಕಟ–ಅಂಕಿತ)

**ರಾಗ–ಸುರುಟಿ** **ಅಟ್ಟತಾಳ**

ಸತ್ಯಕಾಮಗುರುಗಳ ನೋಡೆ
ಸದ್ವರಗಳ ಬೇಡೆ॥ ಪ

ನಿತ್ಯಾನಿತ್ಯಾತ್ಮಕವೆಂಬ ಈ ಜಗಕೆ
ಸತ್ಯ ಹರಿವಾಯುಗಳೆಂಬಂಥ
ಶ್ರುತ್ಯರ್ಥ ಸರಥಕ್ಕೆ ಸಾ–
ರಥಿಗಳಾಗಿ ಮೆರೆವರಿವರು॥ ೧

ವರ ವೈಷ್ಣವಾಗ್ರಣಿ ಸ–
ಮೀರಮತ ವಿರೋಧಿ ಮೇಘಕೆ
ದೂರವೋಡಿಸುವೋ ಝಂಝಾ–
ಮಾರುತೋಪಮ ಮಹಿಮರಿವರು॥ ೨

ಸಾಸಿರಾಖ್ಯ ಮೊದಲು ಬ್ರ–
ಹ್ಮೇಶ್ವರಿಗಸಾಧ್ಯ ವೆಂಕಟ
ದಾಸಭಾವ ತಿಳಿದು ಹೃ–
ದ್ವಾಸನಾಗಿರುವನಿಲ್ಲೀ॥ ೩

## ೫. ಶ್ರೀಸತ್ಯಧರ್ಮತೀರ್ಥರು (ಕ್ರಿ.ಶ. 1719-1752)

(ಪುಣ್ಯದಿನ–ಶ್ರಾವಣ ಬಹುಳ ತ್ರಯೋದಶೀ)
[ಸ್ಥಳ–ಹೊಳೇಹೊನ್ನೂರು (ಶಿವಮೊಗ್ಗಾ ಜಿಲ್ಲೆ)]

ಧ್ಯಾನಶ್ಲೋಕ
ಶ್ರೀಸತ್ಯವರ ದುಗ್ಧಾಬ್ಧೇರುತ್ಥಿತಾ ಜಗತೀತಲೇ ।
ಸುಧಾಶ್ರೀ ಸತ್ಯಧರ್ಮಾಖ್ಯೋ ಪಾಪಯೇತ್ ಸ್ಮರತಸ್ಸತಃ॥

೭೨

(ಶ್ರೀದವಿಠ್ಠಲಾಂಕಿತ)

ಚಿತ್ತೈಸೈ ಬಿನ್ನೈಸುವೆ ಪರಾಕು॥ ಪ

ಸತ್ಯಧರ್ಮ ಸದ್ಗುರುರಾಯಾ॥ ಅ

ನಿನ್ನ ನಂಬಿದವ ಧನಮದಾಂಧರಿಗೆ
ಇನ್ಯಾತಕೆ ತೆರೆಯಲಿ ಬಾಯಾ॥ ೧

ಕಾಲಹರಣ ಬಲು ಕಷ್ಟವಾಗುತದೆ
ಪಾಲಿಸುವುದು ಸತ್ಪಾಥೇಯಾ॥ ೨

ಶ್ರೀದವಿಠ್ಠಲಾಶ್ರಿತ ಜನವತ್ಸಲ
ಸಾಧುಸೇವ್ಯ ಸತ್ಕವಿಗೇಯಾ॥ ೩



೭೩

(ತಂದೆ ವೆಂಕಟೇಶವಿಠ್ಠಲಾಂಕಿತ)

ರಾಗ–ಭೈರವಿ ಆದಿತಾಳ

ಭರ್ಮೋಧರನ ಪ್ರತಿಬಿಂಬ। ಸತ್ಯ
ಧರ್ಮ ಸುಜ್ಞಾನ ಕದಂಬ॥ ಪ

ನಿರ್ಮಲ ನಿಷ್ಕಾಮ್ಯ। ಕರ್ಮಾಸಕ್ತನೆ ವಾಯು
ಧರ್ಮೋದ್ದೀಪಕ ಮಾಯಿ। ಮರ್ಮದ ವಿದಾರಣ ಅ

ಸತ್ಯವರಾಬ್ಧಿ ಶಶಾಂಕಭಕ್ತ
ಹೃತ್ತಾಪಹರ ಬಿರುದಾಂಕ॥
ಪ್ರತ್ಯರ್ಥಿಪಾಟನ ಚಿತ್ರಜವೈರಿ ನಿ।
ರ್ಮತ್ಯರೇಢ್ಯನೆ ಜ್ಞಾನವಿತ್ತಪ ವಿಬುಧ॥
ಅತ್ಯಧಿಕ ಮಹಿಮಾಬ್ಧೆ ವೈಷ್ಣವ
ತತ್ತ್ವಸಾರ ವಿಚಾರ ಜಗದೊಳು
ಬಿತ್ತರಿಪ ಸದ್ಭಾಗವತಜನ
ಮಸ್ತಕಸ್ಥಿತಮಣಿ ಬುಧಾಗ್ರಣಿ॥ ೧

ನಾನಾವಿಚಿತ್ರ ಸುಮಹಿಮ–ಭಕ್ತಿ
ಜ್ಞಾನ ಸದ್ವೈರಾಗ್ಯ ಪ್ರತಿಮಾ॥
ಧ್ಯಾನಾದಿ ಅಷ್ಟವಿಧಾನದೊಳಪರೋಕ್ಷ
ಜ್ಞಾನಾನುಭವವೀಯೋ–ಆನಮಿಸುವೆ ಕರ್ಮ॥
ಕಾನನಕೆ ವೈಶ್ವಾನರನೆ ಪ್ರ
ಸ್ಥಾನತ್ರಯದಧ್ಯಾತ್ಮಭಾವ ನ
ವೀನ ರಚನೆಯೊಳ್ತೋರಿದದ್ಭುತ
ಜ್ಞಾನಶೀಲ ಪರಾರ್ಥಪಟಲ॥ ೨

ಆರಾಧಕರ ಪೊರೆಯಲೆಳಸೀ–ಹೊಳೆಹೊ
ನ್ನೂರಿನೊಳಗೆ ನಿಂತ ತಪಸೀ॥
ಸಾರೆ ತಂದೆವೆಂಕಟೇಶವಿಠ್ಠಲನ ಚರ
ಣಾರವಿಂದದಿ ಮನಸೇರಿಸುತಿಪ ಧೀರ॥
ಧಾರಣೆಯೊಳ್ ವಿಕೃತ್ಯಬ್ಧ ಶ್ರಾವಣ
ಕೃಷ್ಣಪಕ್ಷ ತ್ರಯೋದಶಿಯ ಶುಭ
ವಾರದೊಳಗವತಾರ ಮುಗಿಸಿ ವಿ–
ಹಾರಗೈಯ್ಯುವ ಮಹೇಶ ಮುನಿಶಾ॥ ೩



## ೬. ಶ್ರೀಸತ್ಯವರತೀರ್ಥರು (ಕ್ರಿ.ಶ.1794-1797)

(ಪುಣ್ಯದಿನ–ಶ್ರಾವಣ ಶುದ್ಧ ಸಪ್ತಮೀ)
(ಸ್ಥಳ–ಸಂತೇಬೆನ್ನೂರು)

ಧ್ಯಾನಶ್ಲೋಕ
ಶ್ರೀಸತ್ಯಸಂಧಸಿಂಧೂತ್ಥಃ ಶ್ರೀಸತ್ಯವರ ಚಂದ್ರಮಃ।
ಪ್ರಾರ್ಥಿತಾರ್ಥ ಪ್ರದೋನಿತ್ಯ ಭೂಯಃಸ್ಯಾದ್ಧೃಷ್ಟಿಸಿದ್ಧಯೇ॥

೭೮

(ಜಗನ್ನಾಥವಿಠ್ಠಲಾಂಕಿತ)

ರಾಗ–ಕಾಂಬೋಧಿ ಝಂಪೆತಾಳ

ಸತ್ಯವರ ಮುನಿಪ ದಿಕ್ಪತಿಗಳಂತೆ
ನಿತ್ಯದಲಿ ತೋರ್ಪ ನೋಳ್ಪರಿಗೆ ಸಂಭ್ರಮದಿ॥ ಪ

ಸಿಂಧೂರವೇರಿ ದೇವೇಂದ್ರನಂತೊಪ್ಪುವರು
ವಂದಿಪಜನರಘಾವಾಳಿ ಕೃಶಾನು
ಮಂದಜನರಿಗೆ ದಂಡಧರನಂತೆ ತೋರ್ಪ ಕ
ಮರ್ಗಂದಿಪನು ನರವಾಹನೇರಿ ನಿಋುರುತಿಯೆನಿಪ॥ ೧

ಜ್ಞಾನಾದಿ ಗುಣದಿ ರತ್ನಾಕರನೆನಿಪ ಶೈವ
ಜೈನಾದಿ ಮತ ಘನಾಳಿಗೆ ಮಾರುತಾ
ದೀನಜನರಿಗೆ ಧನದನಾಗಿ ಸಂತೈಪ ವ್ಯಾ–
ಖ್ಯಾನ ಕಾಲದಿ ಜಗದೀಶಾನಂದನೊಂದೆರೆದಾ। ೨

ಶ್ರೀಮದ್ರಮಾಪತಿ ಜಗನ್ನಾಥವಿಠ್ಠಲ
ಸ್ವಾಮಿ ಪಾದಾಬ್ಜ ಭಜನಾಸಕ್ತಾನಿಲ
ಧೀಮಂತ ಗುರುಸಾರ್ವಭೌಮ ಭೂಸುರನುತನೆ ಮ–
ಹಾಮಹಿಮ ಪೊಗಳಲೆನ್ನೊಶವೆ ಕರುಣಾಸಿಂಧು॥ ೩



## ೭. ಶ್ರೀಸತ್ಯಸಂಧತೀರ್ಥರು (ಕ್ರಿ.ಶ.1783–1794)

**(ಪುಣ್ಯದಿನ–ಜ್ಯೇಷ್ಠ ಶುದ್ಧ ಬಿದಿಗೆ)**
**ಸ್ಥಳ–ಮಹಿಷಿ (ಶಿವಮೊಗ್ಗಾ ಜಿಲ್ಲಾ)**

**ಧ್ಯಾನಶ್ಲೋಕ**

**ವಿಷ್ಣೋಃ ಪದಾಶ್ರಿದ್ಯೋದ್ಯಾತ್ಕೈ ಸ್ವಾಂತಧ್ವಾಂತ ದಿವಾಕರಃ।**
**ಶ್ರೀಸತ್ಯಸಂಧ ಸೂರ್ಯೋಽಯಂ ಭಾಸತಾಂ ನೋ ಹೃದಂಬರೇ॥**

೭೫

(ಜಗನ್ನಾಥವಿಠ್ಠಲಾಂಕಿತ)

**ರಾಗ–ಕಾಂಬೋಧಿ** **ಝಂಪೆತಾಳ**

ವಂದಿಸುವೆ ಗುರುಸತ್ಯಸಂಧ ಮುನಿಯಾ
ವೃಂದಾವನಕೆ ಹರುಷದಿಂದ ಎಂದೆಂದೂ॥ ಪ

ಗಂಗಾಪ್ರಯಾಗ ಗಯಾ ಶ್ರೀಶೈಲಹೋಬಲ ಭು–
ಜಂಗಾದ್ರಿ ಮೊದಲಾದ ಕ್ಷೇತ್ರಗಳನು
ಇಂಗಿತಜ್ಞರ ಸಹಿತ ಸಂಚರಿಸಿ ವರಮಹಿಮ
ತುಂಗಾತಟದಿ ವಾಸವಾಗಿಪ್ಪ ಯತಿವರಗೆ॥ ೧

ಭೂದೇವನುತ ಸತ್ಯಬೋಧಮುನಿವರ ಕರ
ವೇದಿಕದೊಳುದ್ಭವಿಸಿದ ಕಲ್ಪವೃಕ್ಷ
ಸಾಧುಜನರಿಗೆ ಬೇಡಿದಿಷ್ಟಾರ್ಥಗಳ
ಮೋದದಿ ಕೊಡುವ ಮಹಿಮರನು ಕಂಡು॥ ೨

ಶ್ರೀಮನೋರಮನ ಅತಿವಿಮಲತರಶಾಸ್ತ್ರ
ನಾಮಾವಳಿಗೆ ಸುವ್ಯಾಖ್ಯಾನ ರಚಿಸಿ
ಧೀಮಂತ ಜನರಿಗುಪದೇಶಿಸಿದ ನಿರಂತರ
ಧಾಮ ಜಗನ್ನಾಥವಿಠ್ಠಲನೊಲುಮೆ ಪಡೆದವರಿಗೆ॥ ೩



# ೮. ಶ್ರೀಸತ್ಯಬೋಧತೀರ್ಥರು (ಕ್ರಿ.ಶ.1744-1783)

(ಪುಣ್ಯದಿನ–ಫಾಲ್ಗುಣ ಕೃಷ್ಣ ಪ್ರತಿಪದ)
ಸ್ಥಳ–ಸವಣೂರು

ಧ್ಯಾನಶ್ಲೋಕ

ನೈವೇದ್ಯ ಗವಿಷಂ ರಾಮೋ ವೀಕ್ಷ್ಯ ತದ್ಭುಕ್ತಿಭಾಗ್ಗುರುಃ।
ಯೋಽದರ್ಶಯದ್ರವಿಂ ರಾತ್ರೌ ಸತ್ಯಬೋಧೋಽಸ್ತು ಮೇ ಮುದೇ॥

೭೬

(ವಿಜಯವಿಠ್ಠಲಾಂಕಿತ)

ರಾಗ–ಸಾವೇರಿ ಆದಿತಾಳ

ನುತಿಸಿ ಬೇಡುವೆ ವರವ ಕರವ ಮುಗಿದು
ಸತತ ಲಕುಮೀಪತಿಯ ಭಕುತಿ ಒಂದೇ ಇರಲಿ॥ ಪ

ಮದನಶರತಿಮಿರಾರ್ಕ ಸ್ವಜನವಾರ್ಧಿಗೆ ಪೂರ್ಣ–
ವಿಧು ಮಂಗಳಗಾತ್ರ ಬಲು ಸುಲಭ
ಬುಧನಾಗಿ ಶಿಷ್ಯರ್ಗೆ ಸುಧೆಯ ಪೇಳುವ ಮೌನಿ
ಎದುರಿಲ್ಲ ನಿಮಗೆಲ್ಲಿ ಗುರುವೆ ಸುರತರುವೆ॥ ೧

ಅಂದವಾದ ಕಾವ್ಯ ಸಾಮರ್ಥ್ಯಧೀರುವೆ
ಮಂದಹಾಸದಿ ನೋಳ್ಪ ಭಕುತಜನರ
ಒಂದೊಂದು ಪದಾರ್ಥ ಪಿಡಿವ ಗಂಟಲ ರಾಹು
ನಂದತೀರ್ಥರಮತಕೆ ಕೇತುಸ್ಥಾನೀಯ ನಿತ್ಯ॥ ೨

ವಾದಿಗಳೆದೆಯಶೂಲ ಸತ್ಯಪ್ರಿಯಕರಜಾತ
ಸಾಧುಸಜ್ಜನಗೇಯ ಸತ್ಯಬೋಧ
ಮೋದಿ ಹಯವದನರಾಮ ವಿಜಯವಿಠ್ಠಲ
ನಾದಿದೈವವೆಂದು ಎಣಿಸುವ ಜಪಶೀಲ॥ ೩



೭೭

(ಗೋಪಾಲದಾಸರು ಮತ್ತು ಅವರ ಸಹೋದರರಿಂದ ವಿರಚಿತ)

ರಾಗ-ಮೋಹನ ಅಟ್ಟತಾಳ

ಮಾರಮದಘನಸಮೀರ ಮಧ್ವಮತೋ-
ದ್ಧಾರ ಶುಭಗುಣಸಾಗರಧೀರ
ಗುರು ಸತ್ಯಬೋಧಾರ್ಯ ಹರಿಕರುಣದಲಿ
ಪರವರ್ಗವ ಗೆಲಿದು ಧಾರುಣಿಯೊಳು ಮೆರೆದೆ॥ ಪ

ಮುನಿನಿಮ್ಮ ಮಹಿಮೆಯನು ತಿಳಿಯದಲೆ ದಂಡೆತ್ತಿ
ಮನಸಿಜನು ಬರಲು ಕೇಳಿ-ತಾಳಿ
ಘನಮಹಿಮ ಸತ್ಯಪ್ರಿಯಗುರುಕರುಣಧೃಡಕವಚ
ವನು ಧರಿಸಿ ಧೀರರಾಗಿ-ಸಾಗಿ
ಮನೋಜಯ ಅಷ್ಟಾಂಗಯೋಗಸಾಧನ ಬಲದಿ
ಮಣಿಯದಲೆ ಮಲೆತು-ಕಲೆತು
ಪ್ರಣವಾದಿ ಮಂತ್ರಪ್ರತಿಪಾದ್ಯಮೂರ್ತಿಗಳ ೧

ಕುಸುಮಾಸ್ತ್ರನಂಗನಾಗಲು ಉಡುಸಹಿತ ಹಿಮಗು
ವೆಸಗಿ ನಭಕೇರಿನಿಂದ–ಮಂದ
ಸೊಶನ ಮೆಲ್ಲನೆ ಜರಿದ ವನಕೆ ಪೋಗಿ ವಸಂತ
ಝಷ ಮಕರ ಜಲದೊಡಗೆ–ನಡುಗೆ
ಎಸೆವ ಶುಕಪಿಕಸಮೂಹಗಳು ಭಯಪಟ್ಟು ಬಲು
ದಶದಿಶೆಗೆ ಓಡಿಪೋಗೆ–ಕೂಗೆ
ಹೊಸಮಲ್ಲಿಕಾದಿ ಕುಟ್ಮಳಗಳಂಜಿ ಬಾಯಿಬಿಡಲು
ಯಶೋನಿಧಿಯೆ ತವಕೀರ್ತಿ ಪಸರಿಸಿತು ಭುವನದಲಿ॥ ೨

ಮಾರನಪಜಯ ಕಂಡು ಕ್ರೋಧಾದಿವರ್ಗಗಳು
ದೂರದಲಿ ನಿಂದು ನಮಿಸೆ–ಗಮಿಸೆ
ಧೀರ ನಿಮ್ಮ ಪಾಂಡಿತ್ಯ ಕಂಡು ತಲೆಬಾಗಿ ಫಣಿ
ಧಾರುಣಿ ತಳಕೆ ನಡೆದ–ವಿಬುಧ
ವೀರ ಕರ್ಣನು ನಿಮ್ಮ ವೀರ್ದತ್ಯಾಗವ ನೋಡಿ
ಸೇರ್ದ ರವಿಮಂಡಲವನು–ಅವನು
ಶ್ರೀರಾಮವ್ಯಾಸ ಗೋಪಾಲವಿಠ್ಠಲನಂಘ್ರಿ
ಆರಾಧಕರೆ ತಮ್ಮ ಚಾರುಚರಣಕೆ ನಮಿಪೆ॥ ೩



೭೮

(ಜಗನ್ನಾಥವಿಠ್ಠಲಾಂಕಿತ)

ರಾಗ–ಪಂತುವರಾಳಿ ಅಟ್ಟತಾಳ

ನಾ ಧನ್ಯನಾದೆನಿಂದು । ಸತ್ಯ
ಬೋಧರಾಯರ । ಪಾದ ಕಮಲವ ಕಂಡು॥ ಪ

ಹಿಂಗಿದವಿಳದೋಃಷಂಗಳು ಸನ್ಮುನಿಗಳಿವ
ರಂಘ್ರಿ ಸಂದರುಶನದೀ
ಗಂಗಾದಿತೀರ್ಥ ಭುಜಂಗಾದಿ ಮೊದಲಾದ
ತುಂಗ ತೀರ್ಥಯಾತ್ರೆಯ ಫಲ ಸಮನಿಸಿತು॥ ೧

ಆವ ಮುನಿಗಳೋ ಮತ್ತಾವ ದೇವತೆಗಳೋ
ಆವಾವ ಬಲ್ಲ ಮತ್ತ್ಯಾವಾಗಲೂ
ಸೇವಿಸುವರ ಕೃಪಾವಲೋಕನದಿಂದ
ಪಾವನ ಮಾಡಲು ಕೋವಿದಾರ್ಯರ ಕಂಡು॥ ೨

ಸೀತಾರಮಣ ಜಗನ್ನಾಥವಿಠ್ಠಲರೇಯಾ
ಭೂತಳದೊಳಗೀ ಮಹಾತ್ಮರನಾ
ಪ್ರೀತಿಯಿಂ ಸೃಜಿಸಿದನಾಥಜನರನ ಪು–
ನೀತರ ಮಾಡಲು ಆತ ತಕ್ಷಣದಿ॥ ೩

೭೯

(ಶ್ರೀರಘುಪತಿ)

**ರಾಗ-ಜಂಜೂಟಿ** **ಅಟ್ಟತಾಳ**

ವಂದಿಪೆ ಗುಣಸಾಂದ್ರರಾ। ನಾನು
ವಂದಿಪೆ ವರ ಗುಣಸಾಂದ್ರರಾ॥ ಪ

ವಂದಿಪೆ ವರಗುಣಸಾಂದ್ರ ಶಿಖಾಮಣಿ
ಸುಂದರ ಗುರು ಸತ್ಯಬೋಧರಾ॥ ಅ

ಜಪತಪ ವ್ಯಾಖ್ಯಾನ ಅಪರಿಮಿತ ಜ್ಞಾನ
ತಪ್ಪೋನಿಧಿ ಗುರು ಸತ್ಯಬೋಧರಾ॥ ೧

ಅದ್ವೈತಶಾಸ್ತ್ರದ ಸದ್ದಡಗಿಸಿದಂಥಾ
ಮಧ್ವರಾಯರ ಮುಖ್ಯಶಿಷ್ಯರಾ॥ ೨

ಕಾಮಿತಫಲವೀವ ಸ್ವಾಮಿ ಶ್ರೀ ರಘುಪತಿಯ
ಪ್ರೇಮದಿ ಭಜಿಸುವ ಗುರುಗಳಾ॥ ೩



೮೦

(ಮೋಹನ್ನವಿಠ್ಠಲಾಂಕಿತ)

ರಾಗ–ಮಧ್ಯಮಾವತಿ ಅಟ್ಟತಾಳ

ಯಾವನೆದುರು ಮೂರ್ಜಗದೊಳು ಲೋಕ
ಪಾವನ್ನ ಗುರು ಸತ್ಯಬೋಧಯತೀಂದ್ರಗಿನ್ನು॥ ಪ

ಬಲುಸುಂದರ ಸೀತಾರಘುಪತಿ–ಪಾದ
ನಳಿನಯುಗ್ಮವ ಪೂಜಿಪ ಯತಿ–ಎಮ
ಗೊಲಿದು ಪಾಲಿಸುವನು ಸನ್ಮತಿ–ಈ
ಜಲಜಭವಾಂಡದೊಳ್ ತುಂಬಿರೆ ಕೀರುತಿ|| ೧

ಪೀಳಿಗೆರಾಮ ದಿಗ್ವಿಜಯರಾಮ–ಸಿರಿ
ಲೋಲ ವಿಠ್ಠಲ ವ್ಯಾಸ ಕೂರ್ಮ–ಕಮ
ಲಾಲಯ ದೇವಿಯ ಸಿರಿನಾಮ–ದಿಂದ
ವಾಲಗವೀಯುವ ಗುರುಸಾರ್ವಭೌಮಗೆ॥ ೨

ಯತಿವರ ಶ್ರೀ ಸತ್ಯಪ್ರಿಯರ–ಕರ
ಶತಪತ್ರಭವ ಭಕ್ತರಾಧಾರ–ಮ
ನ್ಮಥನ ಮಾರ್ಗಣ ಗೆದ್ದ ಗಂಭೀರ–ರತಿ
ಪತಿಪಿತ ಮೋಹನವಿಠ್ಠಲ ಕಿಂಕರಗೆ॥ ೩



೮೧

(ಕಾರ್ಪರ ನರಹರಿ ಅಂಕಿತ)

(ವೃಂದಗಾನದಲ್ಲಿ)

ರಾಗ–ಕಪಾಲಿ ಝಂಪೆತಾಳ

ಭಕುತಿ ಪಾಲಿಸೋ ವಿರಕ್ತಿ ಕರುಣಿಸೋ॥ ಪ

ಸತ್ಯಪ್ರಿಯತೀರ್ಥ ಕರಜ ಸತ್ಯಬೋಧ ಗುರುವರೇಣ್ಯ॥ ಅ

ಪೃಥ್ವಿಜಾವಲ್ಲಭನ ಪಾದ । ನಿತ್ಯ ಪೂಜಿಸುತಲಿ ಜಗದಿ
ಮತ್ತಮಾಯಿ ಗಜಕುಲ । ಪಂಚವಕ್ತ್ರನೆನಿಸಿ ಮೆರೆದ ಗುರುವೆ॥ ೧

ನಂದತೀರ್ಥಮತ ಪಯೋಬ್ಧಿ । ಚಂದ್ರ ಸದೃಶರೆನಿಸಿ ಸತತ
ನಂದಶಾಸ್ತ್ರ ಬೋಧಿಸಿ ಬುಧ । ವೃಂದಕೆ ಆನಂದ ಗರೆದ॥ ೨

ಇರಳುಕಾಲದಲಿ ನಭದಿ । ತರಣಿ ಬಿಂಬ ತೋರಿದಂಥ
ಪರಮ ಮಹಿಮ ನಿಮ್ಮಯ ಶುಭ । ಚರಣ ಸ್ಮರಣೆ ಕರುಣಿಸೆನಗೆ॥ ೩

ಕೋನೇರಿಯಾಚಾರ್ಯರು ನಿಮ್ಮ । ಕಾಣುತ ತೀರ್ಥವನು ಕೊಂಡು
ವಾನರ ದೇಹವನು ತ್ಯಜಿಸಿ ಸು । ಸ್ಥಾನಗತಿಯ ಪಡೆದರು ಜವ॥ ೪

ಶರಣಜನರ ಪೊರೆವ ಕಾರ್ಪರ। ನರಹರಿ ಪದದಿಂದ ಜನಿತ
ಸುರನದಿ ನಿಮ್ಮಯ ಬಳಿಗೆ ಬಂ । ದಿರುವ ಮಹಿಮೆ ತುತಿಸಲೆಂದು॥ ೫



೮೨

(ಗುರುಗೋವಿಂದವಿಠ್ಠಲಾಂಕಿತ)

ರಾಗ–ಶಂಕರಾಭರಣ ಆಟ್ಟತಾಳ

ನೋಡಿದೇ–ಗುರುವರರ ನಾ ನೋಡಿದೇ ॥ ಪ

ನೋಡಿ ಗುರುಗಳ ಪಾದ–ಈಡಾಡಿ ಶಿರವನು
ಬೇಡೆ ಭಕ್ತಿಜ್ಞಾನ–ನೀಡುತ ಪೊರೆವರ॥ ಅ

ಹೇಮಕಾಮಿನಿಯನೆ ಜರಿದೂ–ಪ್ರಿಯರ
ಪ್ರೇಮದ ಚರಣಗಳ್ಪಿಡಿದೂ–ಬಲು
ನೇಮದಲ್ಕಾತಿಯಾಗಿ ಮೆರೆದೂ–ಮಾಯಿ
ಗೋಮಾಯಿಗಳನೆಲ್ಲ ಜರಿದೂ–ಆಹಾ॥
ರಾಮಚಂದ್ರರ ಪಾದ । ತಾಮರಸವರ ಧರಿಸಿ
ಭೂಮಿಯೊಳಗೆ ಚರಿಸಿ । ಮೆರೆಸಿದ ಗುರುಗಳ॥ ೧

ಶೇಷರೂಪಿಲಿ ಬಂದ ಹರಿಯಾ–ಗುಪ್ತ
ಭಾಷೆಯ ಕೇಳುತ್ತ ಗೃಹವಾ–ಪೊಕ್ಕು
ಮೀಸಲೆಂದೆನಿಸಿದ ಧನವಾ–ಲೇಸಾ
ಯಾಸಿಲ್ಲದೆ ತೆಗಿಸ್ಯದನಾ–ಆಹಾ॥
ಏಸೇನು ಜನುಮದಿ । ಪೋಷಿಸಿರೂವರನ
ಶ್ರೀಶಗರ್ಪಿಸುತಲಿ । ತೋಷವಪಡಿಸಿದರ॥ ೨

ಮೋದದಿ ಹರಿಪರನೆಂದೂ–ಪೂರ್ಣ
ಭೋದರೆ ಗತಿ ನಮಗೆಂದೂ–ಮಾಯ
ವಾದಗಳನೆ ಬಿಡಿರೆಂದೂ–ಸತ್ಯ
ಬೋಧರೆ ಆರುಹಾತ ನಿಂದೂ–ಆಹಾ॥
ವೇದವಿನುತ ಗುರುಗೋವಿಂದವಿಠ್ಠಲನ
ಪಾದಪಿಡಿದು ಸವಣೂರಿನಲಿ ಮೆರೆದವರ॥ ೩



## ೯. ಶ್ರೀಸತ್ಯಪ್ರಿಯತೀರ್ಥರು (ಕ್ರಿ.ಶ. 1733–1744)

ಪುಣ್ಯ ದಿನ–ಚೈತ್ರ ಶುದ್ಧ ತ್ರಯೋದಶೀ
ಸ್ಥಳ– ಮಾನಾಮಧುರೆ (ತಮಿಳುನಾಡು)

ಧ್ಯಾನಶ್ಲೋಕ–
ಶ್ರೀ ಸತ್ಯವಿಜಯಾಂಬೋಧೇರ್ಜಾತಂ ಸತ್ಯಪ್ರಿಯಾಮೃತಂ।
ಜರಾಮೃತೇ ಜಂಘನೀತು ವಿಬುಧಾನಾಂ ಮುದೇ ಸದಾ॥

೮೩

(ವಿಜಯವಿಠ್ಠಲಾಂಕಿತ)

ರಾಗ–ಕಲ್ಯಾಣಿ ಝಂಪೆತಾಳ

ಸತ್ಯಪ್ರಿಯ ಗುರುರಾಯಾ । ಮಂಗಳಕಾಯ
ನಿತ್ಯದಲಿ ನಿಜಭೃತ್ಯಸಹಾಯ॥ ಪ

ಮಧ್ವಮತಾಬ್ಧಿಚಂದ್ರ। ಸದ್ಗುಣಸಾಂದ್ರ,
ಅದ್ವೈತಮಹಾದ್ರಿ ಇಂದ್ರ। ಈ ಧರೆಯೊಳಗನಿ–
ರುದ್ಧನೆ ಪರಸೋದೆದ್ದು। ನೆಗೆಹಿ ಕರ–
ಬದ್ಧಕಂಕಣರಾಗಿ। ಸಿದ್ಧಪ್ರಮೇಯಗಳನುದ್ಧರಿಸಿದ
ಪರಿಶುದ್ಧ ಸ್ಮರಮಾರ್ಗಣ ಗೆದ್ದ॥ ೧

ವಿತರಣದಲಿ ಬಲು ಶೂರಾ। ಕೀರ್ತಿ ವಿಹಾರ
ಸತತ ವೇದಾರ್ಥ ವಿಚಾರ। ಮಿತಿ ಇಲ್ಲದೆ ಅ–
ಚ್ಯುತನ ಕಥಾಮೃತ। ತತ್ತ್ವಮಾರ್ಗದಲಿ ವಿ–
ಹಿತನಿಷ್ಠರಿಗೆ ನಗುತ ಪೇಳಿದ। ಅದ್ಭುತ ಮಹಿಮ
ಸುಚರಿತ। ಆನಂದಭರಿತಾ॥ ೨

ನೆನೆಸಿದವರ ಸುರಧೇನು। ನಿಮಗೆಲ್ಲಿ ನಾನು
ಎಣೆಗಾಣೆ ಎಣಿಸಲು ಮೇಣೂ
ಮುನಿ ಸತ್ಯಬೋಧರ ಮನದಲಿ ನಿಂದ–
ರ್ಚನೆಯನು ಘನವಾಗಿ ಕೈಕೊಂಬ। ಗುಣನಿಧಿ
ವಿಜಯವಿಠ್ಠಲನ ಚರಣಾಂಬುಜ ಧ್ಯಾನ। ಮಾಡುವ ತ್ರಾಣಾ॥ ೩



೮೪

(ಗುರುಗೋವಿಂದವಿಠ್ಠಲಾಂಕಿತ)

**ರಾಗ–ಬೇಹಾಗ್** **ಆದಿತಾಳ**

ವೃಂದಾವನ ನೋಡಿದೆ। **ಸತ್ಯಪ್ರಿಯರ**
ವೃಂದಾವನ ನೋಡಿದೇ॥ ಪ

ಸತ್ಯಪೂರ್ಣ ಕರಜರೆನಿಸಿ । ಸುತ್ತ ಕ್ಷೇತ್ರಗಳನೆಲ್ಲ
ಮತ್ತೆ ಬರಲು ಶ್ರೀರಂಗಕ್ಕೆ । ಛತ್ರೇಸಿಂಗ ಭೇಟಿಯಾದ॥ ೧

ಶತ್ರುಗಳ ಗೆದ್ದು ಬಂದು । ಸತ್ಯಪ್ರಿಯರಿಗೆರಗಿ ಅವನು
ಇತ್ತು ಊರುಗಳನೆರಡು । ನೆತ್ತಿ ಚಾಚಿ ನಮಿಸಿದ॥ ೨

ಮಾನಮಧುರಿ ಊರಿನಲ್ಲಿ । ಪ್ರಾಣೋತ್ಕ್ರಮಣ ಸಮಯದಲ್ಲಿ
ಜ್ಞಾನಿ ರಾಮಾಚಾರ್ಯರಿಗೆ । ದಾನ ಮಾಡ್ದ ತುರ್ಯಾಶ್ರಮ॥ ೩

ಮಾಧವನ ದಯದಿಂದೆ । ಸಾಧಿಸುತ ಬದರಿಯಾತ್ರೆ
ವೇದವತಿ ತೀರದಲ್ಲಿ । ಸಾಧುಗಳ ವೃಂದಾವನ॥ ೪

ವೇದವೇದ್ಯನಾದ ಗುರು । ಗೋವಿಂದವಿಠ್ಠಲನ
ಮೋದದಿಂದ ಭಜಿಸುತ್ತ । ಆದರದಿ ಧ್ಯಾನಾಸಕ್ತ॥ ೫



## 10. ಶ್ರೀಸತ್ಯಪೂರ್ಣತೀರ್ಥರು

ಪುಣ್ಯದಿನ–ಜ್ಯೇಷ್ಠ ಬಹುಳ ಬಿದಿಗೆ
ಸ್ಥಳ–ಕೋಲಪುರ

ಧ್ಯಾನಶ್ಲೋಕ–

**ಸತ್ಯಾಭಿನವ ದುಗ್ಧಾಬ್ಧೇಸ್ಸಂಜಾತ ಸಕಲೇಷ್ಟದಃ।**
**ಶ್ರೀಸತ್ಯಪೂರ್ಣತೀರ್ಥೇಂದು ಸಂತಾಪಾನ್ಹಂತು ಸಂತತಂ॥**

೬೫

(ವಿಜಯವಿಠ್ಠಲಾಂಕಿತ)

ರಾಗ–ಪೂರ್ವಿ ಆದಿತಾಳ

ಭಜಿಸಿರೋ ಬಿಡದೆ–ವಿರಾಜಮಾನರಾಗಿ ನಿತ್ಯ
ಕುಜನರೊಳಾಡದಲೆ–ನಿಜಭಕುತಿಯಿಂದ ॥ ಪ

ಭಾಜಬಲವುಳ್ಳ ಪರಜರಟ್ಟುವ ದಿ
ಗ್ವಿಜಯ ಸತ್ಯಪೂರ್ಣರ ಸುಜನರೊಂದಾಗಿ॥ ಅ

ಭರದಿಂದ ಬಂದು ನಿಂದು–ನಿರೀಕ್ಷಿಸಿ ನಿರ್ಮಲ
ಕರಯುಗಳ ಮುಗಿದು–ಶಿರವಾ ನಿಲ್ಲದೆ ।
ಧರಣಿಯಾ ಮ್ಯಾಲೆಂದು ಇವರ ಸಾಷ್ಟಾಂಗ ನಮ
ಸ್ಕರಿಸಿ ಕೊಂಡಾಡಿ ನಿಂ । ದಿರಲಾ ಸರರಿಗೆಲ್ಲ॥
ಪರಿಪರಿ ಜನ್ಮದ ತರತರದಪಗಳು
ಪರಿಹರವೋ ಒಂದರಘಳಿಗೆಯಲಿ
ಸರಿಯನ್ನಬಹುದಿವರ ದರ್ಶನಲಾಭ
ದುರುಳರಿಗಾಗದು ಮರಿಯದೆ ಚೆನ್ನಾಗಿ॥ ೧

ನೆರೆನಂಬಿ ನಿಮ್ಮಯ–ಗೋತುರ ಸಹಿತಕ್ಕೆ ಜ್ಞಾನಾಂ
ಕುರವಾಗುವುದು ಇದು–ಉರಕಾಲ ಸ್ಥಿರವೆನ್ನಿ ।
ತರತಮ್ಯತತ್ತ್ವ–ತಾತ್ಪರ್ಯ ವಿಧ ತಿಳಿದು
ತಿರುಗುವರನುದಿನ–ಸುರರು ಮೆಚ್ಚುತಲಿರೆ॥
ಮುರರಿಪು ಚತುರ್ದಶಧರಣಿಗೆ ಪರನೆಂದು
ಬಿರುದನು ಎತ್ತಿ ಡಂಗುರ ಹೊಯಿಸಿ ಡಿಂ
ಗರಿಗೆ ಸಚ್ಛಾಸ್ತ್ರ ಅರುಹಿ ಸುಖಾರ್ಥವ
ಕರೆದು ಕೊಡುವ ಯತಿಶಿರೋಮಣಿ ಕರ್ಣಾ॥ ೨

ಅವನಿಯೊಳು ಸತ್ಯಾಭಿನವತೀರ್ಥರ–ಪಾದಾಂಬು
ಜಾತ ಕೃಷ್ಣಾತಮ–ಭವಸರಿತ ನಿವಾಸ ।
ದಿವಿಜೇಶನಾಯುಧ–ಕವಚದಿಂದಲಿ ತ
ನ್ನವರನೆ ಪೊರೆದೆತ್ತಿ–ನವವಿಧ ಬಗೆ ತೋರಿ॥
ತವಕದಿ ಕೋಲಪುರ ಪವಿತರ ಸ್ಥಳದಲ್ಲಿ
ರವಿಯಂತೆ ಪೊಳೆವರು ಭವದೋಷ ಕಳೆವುತ
ಕವಿಗಳ ಮನೋಹರ ವಿಜಯವಿಠ್ಠಲನ
ಶ್ರವಣ ಮನನ ಧ್ಯಾನವನು ಬಲ್ಲವರಾ॥ ೩



## 11. ಶ್ರೀರಘೂತ್ತಮತೀರ್ಥರು (ಕ್ರಿ.ಶ.1479–1517)

ಪುಣ್ಯದಿನ–ಪುಷ್ಯಶುದ್ಧ ದ್ವಾದಶೀ
ಸ್ಥಳ–ತಿರುಕೋಯಿಲೂರು

ಧ್ಯಾನಶ್ಲೋಕ–
ಭಾವಬೋಧಕೃತಂ ಸೇವೇ ರಘೂತ್ತಮ ಮಹಾಗುರುಂ।
ಯಚ್ಛಿಷ್ಯಸಿಷ್ಯಸಿಷ್ಯಾದ್ಯಾಷ್ಟಿಪ್ಪಣ್ಯಾಚಾರ್ಯ ಸಂಜ್ಞಿತಾಃ॥

೭೨

(ಶ್ರೀದವಿಠ್ಠಲಾಂಕಿತ)

ರಾಗ–ಭೈರವಿ ಆದಿತಾಳ

ನೋಡಿದೆ ಗುರುಗಳ ನೋಡಿದೆ॥ ಪ

ನೋಡಿದೆನು ಗುರುಗಳ ಪಾದಾಬ್ಜವ
ಪಾಡಿದೆನು ಸನ್ಮಹಿಮೆಗಳ ನಾ
ಬೇಡಿದೆನು ಮನವಣಿಯೆ ವರಗಳ
ಈಡು ಇಲ್ಲದೆ ಕೊಡುವ ಪ್ರಭುಗಳ॥ ಅ

ಪಂಚಕೃಷ್ಣಾರಣ್ಯ ಕ್ಷೇತ್ರ । ಪಿನಾಕಿಯು ತೀರದಲಿ ನಿಂತು
ಮಿಂಚುತಿಹ ಕಾಷಾಯದಂಡ । ಕಮಂಡಲವ ಧರಿಸುತ್ತ ಧರೆಯೊಳು॥
ಪಂಚಬಾಣನ ಪಿತನ ಗುಣಗಳ
ಅಂಚೆಯದಿ ಪೊಗಳುತ್ತ ಹರುಷದಿ
ಸಂಚಿತಾಗಾಮಿಗಳ ಕಳೆದು ಪ್ರ-
ಪಂಚದಲಿ ಮೆರೆವಂಥ ಗುರುಗಳ॥ ೧

ಅಲವಬೋಧರ ಭಾಷ್ಯಟೀಕಾ । ಭಾವವನು ಸುಜನರಿಗೆ ಬೋಧಿಸಿ
ಕಲುಷಮತಗಿರಿ ಸಮುದಯಂಗಳ । ಕುಲಿಶದಂಡದಲಿ ಖಂಡಿಸುತಲಿ
ಮೂಲರಾಮ ದಿಗ್ವಿಜಯರಾಮರ ಪಾದಕ-
ಮಲಕೆ ಭೃಂಗನೆನಿಸುತ
ಶೀಲಭಕ್ತಿ ವಿರಕ್ತಿ ಮತಿಗಳ
ಪಾಲಿಸುವ ಯತಿಮೌಳಿ ರತುನರ॥ ೨

ಕಾಮಧೇನು ಸುಕಲ್ಪತರು ಚಿಂತಾ । ಮಣಿಯುಪೋಲ್ ಕಾಮಿತಾರ್ಥವ
ಪ್ರೇಮದಲಿ ಬೀರುತ್ತ ಅಧ್ಯಾತ್ಮದಿ । ತಾಪತ್ರಯ ಕಳೆಯುವ
ಸ್ವಾಮಿ ಶ್ರೀಹರಿ ಶ್ರೀದತ್ತಲನ
ದಾಸಾಗ್ರಣಿಯೆನಿಸಿ ಮೆರೆವರ
ನೇಮದಿಂದಲಿ ಶ್ರೀರಘೂತ್ತಮ
ಮೌನಿವರ್ಯರ ಕರುಣ ಬಯಸುತ॥ ೩



## ೮೭

### (ತಂದೆವೆಂಕಟೇಶವಿಠ್ಠಲಾಂಕಿತ)

ರಾಗ–ಹಿಂದೋಳ ಆದಿತಾಳ

ಪಾಹಿ ರಘೂತ್ತಮ ಗುರುರಾಯ–ವಿ
ದ್ಯಾಯು ಯತಿಶ್ರೀ ವಿಜ್ಞಾನ ಪ್ರದಾಯ॥ ಪ

ಪಾಹೀ ಪ್ರಮೋದಾಗಮಾನಂದಿತಾಯ। ದಿಗಧಿಪಾಯ।
ಗುಣಸಾಗರಾಯ। ಬುಧಗೇಯ। ಅಜೇಯ॥ ಅ

ರಘುವರ್ಯ ಪಾದಾಬ್ಜ ಮಧುಲಿಡ್ವರ
ಅಘಶೈಲಮಘವಾನಾನಘಧೀವರಾ
ನಿಗಮಾಗಮಾನಂತೋದಿತ ಭಾಸ್ಕರ॥
ರಘುವರಾಬ್ಜ ಪದಯುಗಳೇಂದೀವರ
ನಿಗದಿತಾಶುಗಾಶಯ ನಿಶ್ರೇಯ॥ ೧

ನತಕಲ್ಪದ್ರುಮ ಸಿದ್ಧ ನಿಕಷಾತ್ಮಜ
ಶಿತಿಕಂಠಯುತನೀತ ವಾತಾತ್ಮಜ
ಯತಿವರ್ಯಾನ್ವಿತ ತತ್ತ್ವಕ್ರತು ಋತ್ವಿಜ॥
ಕ್ಷಿತ್ಯಮೃತಾಂಧಸಸತ್ತಮ ದಕ್ಷಿಣ
ಚಿತ್ತಚಾರಿಧುನಿ ನಿತ್ಯವಿಹಾರಿ॥ ೨

ನಿರವದ್ಯ ಸುಖಭಾವಬೋಧಾತ್ಮಕ
ಸಿರಿ ತಂದೆ ವೆಂಕಟೇಶವಿಠ್ಠಲಾರ್ಚಕ
ಸ್ಮರ ಸಂವತ್ಸರ ಪುಷ್ಯ ಶುಕ್ಲಾಧಿಕ॥
ಸ್ವರ್ಧಿನಾಭ್ರಪುರ ನಿರ್ಗಮನೋತ್ಸುಕ
ದುರ್ಗಮ ಭವಸಂಸರ್ಗ ವಿದಾರಕ॥

೮೮

## (ಗುರುಗೋವಿಂದವಿಠ್ಠಲಾತ್ಮಕ)

## ವೃಂದಗಾನದಲ್ಲಿ

ರಾಗ–ನಾದನಾಮಕ್ರಿಯೆ ಆದಿತಾಳ

ನಮೋ ದೈಶಿಕಾರ್ಯ। ರಘೂತ್ತಮ ಪದ
ನಮೋ ದೇವತಾತ್ಮ॥ ಪ

ವಿಮಲರಾಮ ಸನ್ಮಹಿಮ। ಭಜಕರ ಗುರು
ನಮೋನಮೋ ಪೂತಾತ್ಮ॥ ಅ

ನಾರಿಚೋರ ಸಂಹಾರ ಪದಾಂಬುಜ ಆರಾಧನ ದೀಕ್ಷ
ಸಾರಸುರಸ ಗ್ರಂಥಾರಾಧಿಸೆ ಬಹು ಚಾರು ವ್ಯಾಖ್ಯಕೃತ ದೀಕ್ಷ
ಭಾರಿ ಗ್ರಂಥ ಬೃಹದಾರಣ ವಿವರಣ ನ್ಯಾಯಗ್ರಂಥಲಕ್ಷ್ಯ
ಸಾರ ತತ್ತ್ವಪ್ರಭೆ ಚಾರುಗೀತಪ್ರಭೆ ತೋರ್ದೆ ಭಾವದಕ್ಷ॥ ೧

ಭಾವುಕಜನ ಸದ್ಭಾವದಿ ಮೆರೆವ ಸುಭಾವಬೋಧಕಾರ್ಯ
ತೀವ್ರಮನದ ದುರ್ಭಾವ ಕಳೆದು ಹರಿಭಾವ ಈಯೋ ವರ್ಯ
ಭಾವಕೊಲಿವ ಕರ್ಮಾವಳಿಗಲ್ಲನೆ ಜರಿಪೇಳ್ದ ದಾಸಾರ್ಯ
ಕಾವ ಕರುಣಿ ಹರಿಭಾವದಿ ನಿಲ್ಲುವ ಭಾವಬೋಧಕೃತಿ ಆರ್ಯ॥ ೨

ಗುರುಗಳೆನಿಪ ರಘುವರ್ಯ ಕರಾಬ್ಜಜ ಶರಣ ಕಲ್ಪವೃಕ್ಷ
ವಿರಚಿಸಿ ನ್ಯಾಸವ ವರಸು ಅಂಗದೊಳು ಸುರರ ಕಾಂಬದಕ್ಷ
ಗುರು ತೈಜಸ ಒರೆಯೆ ನ್ಯಾಯಸುಧೆ ಪೇಳ್ದ ಕೋಣಾಧ್ಯಕ್ಷ
ಪರಿಪರಿ ಪ್ರಾರ್ಥಿಪೆ ಗುರುಗೋವಿಂದವಿಠ್ಠಲನ ಚರಣದಿ ದೀಕ್ಷ॥ ೩

॥ ಶ್ರೀಃ ಹರಿಃ ಓಂ ॥

## ಯತಿಕಕ್ಷಾ

### ಭಾಗ—೩

# ಶ್ರೀ ರಾಘವೇಂದ್ರಗುರುಸಾರ್ವಭೌಮರ ಮಠದ ಯತಿವರ್ಯರ ಪರಂಪರೆ

# ಶ್ರೀರಾಘವೇಂದ್ರ ಗುರುಸಾರ್ವಭೌಮರ ಮಠದ ಯತಿಪರಂಪರಾ

| ಕ್ರಮ ಸಂಖ್ಯೆ | ಯತಿಗಳ ಪರಂಪರೆ | ಕಾಲ | ವೃಂದಾವನಸ್ಥಳ | ಆರಾಧನಾ ದಿನ |
|---|---|---|---|---|
| ೧ | ಶ್ರೀಮದಾನಂದತೀರ್ಥ ಭಗವತ್ಪಾದರು | 1238–1317 | — | ಮಾಘ ಶುದ್ಧ ನವಮಿ (ಬದರಿಕಾಶ್ರಮ ಪ್ರವೇಶ) |
| ೨ | ಶ್ರೀಪದ್ಮನಾಭತೀರ್ಥರು | 1367–1324 | ನವವೃಂದಾವನ | ಕಾರ್ತೀಕ ಕೃಷ್ಣ ಚತುರ್ದಶಿ |
| ೩ | ಶ್ರೀನರಹರಿತೀರ್ಥರು | 1324–1333 | ಚಕ್ರತೀರ್ಥ | ಪುಷ್ಯ ಬಹುಳ ಸಪ್ತಮೀ |
| ೪ | ಶ್ರೀಮಾಧವತೀರ್ಥರು | 1333–1350 | ಮಣ್ಣೂರು | ಭಾದ್ರಪದ ಕೃಷ್ಣ ಅಮಾವಾಸ್ಯೆ |
| ೫ | ಶ್ರೀಅಕ್ಷೋಭ್ಯತೀರ್ಥರು | 1354–1365 | ಮಳಖೇಡ | ಮಾರ್ಗಶೀರ್ಷ ಕೃಷ್ಣ ಪಂಚಮಿ |
| ೬ | ಶ್ರೀಜಯತೀರ್ಥರು | 1365–1388 | ಮಳಖೇಡ | ಆಷಾಢ ಕೃಷ್ಣ ಪಂಚಮೀ |
| ೭ | ಶ್ರೀವಿದ್ಯಾಧಿರಾಜತೀರ್ಥರು | 1388–1392 | ಜಗನ್ನಾಥಪುರಿ | ವೈಶಾಖ ಶುದ್ಧ ತೃತೀಯ |

| | | | | |
|---|---|---|---|---|
| ೮ | ಶ್ರೀಕವೀಂದ್ರತೀರ್ಥರು | 1392 1398 | ನವವೃಂದಾವನ | ಚೈತ್ರ ಶುದ್ಧ ನವಮೀ |
| ೯ | ಶ್ರೀವಾಗೀಶತೀರ್ಥರು | 1398–1406 | ನವ ವೃಂದಾವನ | ಚೈತ್ರ ಶುದ್ಧ ತೃತೀಯಾ |
| ೧೦ | ಶ್ರೀರಾಮಚಂದ್ರತೀರ್ಥರು | 1406–1435 | ಯರಗೊಳ | ವೈಶಾಖ ಶುದ್ಧ ಷಷ್ಠೀ |
| ೧೧ | ಶ್ರೀವಿಬುಧೇಂದ್ರತೀರ್ಥರು | 1435–1490 | ತಿರುನಲ್ವೇಲಿ | ಮಾರ್ಗಶೀರ್ಷ ಶುದ್ಧ ನವಮೀ |
| ೧೨ | ಶ್ರೀಜಿತಾಮಿತ್ರತೀರ್ಥರು | 1490–1492 | ಕೃಷ್ಣಾತೀರ | ಮಾರ್ಗಶೀರ್ಷ ಕೃಷ್ಣ ಅಮಾವಾಸ್ಯೆ |
| ೧೩ | ಶ್ರೀರಘುನಂದನತೀರ್ಥರು | 1492–1504 | ಹಂಪೆ | ಕಾರ್ತೀಕ ಕೃಷ್ಣ ಅಷ್ಟಮೀ |
| ೧೪ | ಶ್ರೀಸುರೇಂದ್ರತೀರ್ಥರು | 1504–1575 | ಮಧುರೆ | ಪುಷ್ಯ ಶುದ್ಧ ದ್ವಾದಶೀ |
| ೧೫ | ಶ್ರೀವಿಜಯೀಂದ್ರತೀರ್ಥರು | 1575–1614 | ಕುಂಭಕೋಣ | ಜ್ಯೇಷ್ಠ ಕೃಷ್ಣ ತ್ರಯೋದಶೀ |
| ೧೬ | ಶ್ರೀಸುಧೀಂದ್ರತೀರ್ಥರು | 1614–1621 | ನವವೃಂದಾವನ | ಫಾಲ್ಗುಣ ಬಹುಳ ದ್ವಿತೀಯಾ |
| ೧೭ | ಶ್ರೀರಾಘವೇಂದ್ರ ಗುರುಸಾರ್ವಭೌಮರು | 1621-1671 | ಮಂತ್ರಾಲಯ | ಶ್ರಾವಣ ಕೃಷ್ಣ ದ್ವಿತೀಯ |

| | | | | |
|---|---|---|---|---|
| ೧೮ | ಶ್ರೀಯೋಗೀಂದ್ರತೀರ್ಥರು | 1671–1688 | ಶ್ರೀರಂಗ | ಮಾಘ ಶುದ್ಧ ನವಮೀ |
| ೧೯ | ಶ್ರೀಸೂರೀಂದ್ರತೀರ್ಥರು | 1688–1692 | ಮಧುರೆ | ಜ್ಯೇಷ್ಠ ಶುದ್ಧ ದ್ವಿತೀಯ |
| ೨೦ | ಶ್ರೀಸುಮತೀಂದ್ರತೀರ್ಥರು | 1692–1725 | ಶ್ರೀರಂಗ | ಆಶ್ವಯುಜ ಕೃಷ್ಣ ದ್ವಾದಶೀ |
| ೨೧ | ಶ್ರೀಉಪೇಂದ್ರತೀರ್ಥರು | 1725–1728 | ಶ್ರೀರಂಗ | ಮಾರ್ಗಶೀರ್ಷ ಕೃಷ್ಣ ಅಷ್ಟಮೀ |
| ೨೨ | ಶ್ರೀವಾದೀಂದ್ರತೀರ್ಥರು | 1728–1750 | ಮಂತ್ರಾಲಯ | ಜ್ಯೇಷ್ಠ ಶುದ್ಧ ನವಮೀ |
| ೨೩ | ಶ್ರೀವಸುದೇಂದ್ರತೀರ್ಥರು | 1750–1761 | ಕೆಂಚನಗುಡ್ಡ (ಶಿರಗುಪ್ಪ ಹತ್ತಿರ) | ಆಶ್ವಯುಜ ಕೃಷ್ಣ ಸಪ್ತಮೀ |
| ೨೪ | ಶ್ರೀವರದೇಂದ್ರತೀರ್ಥರು | 1761–1785 | ಪೂನಾ | ಆಷಾಢ ಶುದ್ಧ ಷಷ್ಠೀ |
| ೨೫ | ಶ್ರೀಧೀರೇಂದ್ರತೀರ್ಥರು | 1765–1785 | ಹೊಸರಿತ್ತಿ | ಫಾಲ್ಗುಣ ಶುದ್ಧ ತ್ರಯೋದಶೀ |
| ೨೬ | ಶ್ರೀಭುವನೇಂದ್ರತೀರ್ಥರು | 1785–1799 | ರಾಜವಳ್ಳಿ | ವೈಶಾಖ ಕೃಷ್ಣ ಸಪ್ತಮೀ |
| ೨೭ | ಶ್ರೀಬೋಧೇಂದ್ರತೀರ್ಥರು | 1799–1835 | ನಂಜನಗೂಡು | ಚೈತ್ರ ಕೃಷ್ಣ ತೃತೀಯ |

| | | | | |
|---|---|---|---|---|
| ೨೮ | ಶ್ರೀಸುಜನೇಂದ್ರತೀರ್ಥರು | 1835–1836 | ನಂಜನಗೂಡು | ಕಾರ್ತೀಕ ಕೃಷ್ಣ ಅಷ್ಟಮೀ |
| ೨೯ | ಶ್ರೀಸುಜ್ಞಾನೇಂದ್ರತೀರ್ಥ | 1836–1861 | ನಂಜನಗೂಡು | ಶ್ರಾವಣ ಕೃಷ್ಣ ಚತುರ್ಥೀ |
| ೩೦ | ಶ್ರೀಸುಧರ್ಮೇಂದ್ರತೀರ್ಥರು | 1861–1872 | ಮಂತ್ರಾಲಯ | ಪುಷ್ಯ ಕೃಷ್ಣ ಪಂಚಮೀ |
| ೩೧ | ಶ್ರೀಸುಗುಣೇಂದ್ರತೀರ್ಥರು | 1872–1884 | ಚಿತ್ತೂರು (ಗಿರಿಯಂಪೇಟೆ) | ಮಾರ್ಗಶೀರ್ಷ ಶುದ್ಧ ಪೂರ್ಣಿಮೆ |
| ೩೨ | ಶ್ರೀಸುಜ್ಞಾನೇಂದ್ರತೀರ್ಥರು | 1984-1903 | ನಂಜನಗೂಡು | ಮಾಘ ಕೃಷ್ಣ ಷಷ್ಠೀ |
| ೩೩ | ಶ್ರೀಸುಕೃತೀಂದ್ರತೀರ್ಥರು | 1903–1912 | ನಂಜನಗೂಡು | ಆಶ್ವಯುಜ ಶುದ್ಧ ದಶಮೀ |
| ೩೪ | ಶ್ರೀಸುಶೀಲೇಂದ್ರತೀರ್ಥರು | 1912–1926 | ಹೊಸರಿತ್ತಿ | ಆಷಾಢ ಶುದ್ಧ ತೃತೀಯ |
| ೩೫ | ಶ್ರೀಸುವ್ರತೀಂದ್ರತೀರ್ಥರು | 1926–1933 | ಮಂತ್ರಾಲಯ | ವೈಶಾಖ ಶುದ್ಧ ದ್ವಾದಶೀ |
| ೩೬ | ಶ್ರೀಮತ್ಸುಯಮೀಂದ್ರ ತೀರ್ಥರು | 1933–1967 | ಮಂತ್ರಾಲಯ | ಪುಷ್ಯ ಶುದ್ಧ ತೃತೀಯ |
| ೩೭ | ಶ್ರೀಮತ್ಸುಜಯೀಂದ್ರತೀರ್ಥರು | 1907–1988 | ಮಂತ್ರಾಲಯ | |

೩೮ ಶ್ರೀಮತ್ಸುಶಮೀಂದ್ರತೀರ್ಥರು. ಈಗ ಸರ್ವಜ್ಞಾಚಾರ್ಯರ ಪೀಠದಲ್ಲಿ ವಿರಾಜಮಾನ ರಾಗಿರುವ ಯತಿವರ್ಯರು.

೮೮

# 1. ಶ್ರೀಸುಯಮೀಂದ್ರತೀರ್ಥರು 1933-1967

[ಪುಣ್ಯದಿನ ಪುಷ್ಯಶುದ್ಧ ಬಿದಿಗೆ ವೃಂದಾವನ ಸ್ಥಳ-ಮಂತ್ರಾಲಯ]
(ಅಭಿನವ ಪ್ರಾಣೇಶವಿಠ್ಠಲಾಂಕಿತ)

**ರಾಗ-ಕಾಂಬೋಧಿ** **ಝಂಪೆತಾಳ**

ಶ್ರೀಸುಯಮೀಂದ್ರರ ಚರಣ ಕಮಲ ಭಜಿಸೋ-
ಗುರುಕರುಣವ ಗಳಿಸೋ ‖ ‖ಪ‖

ಶ್ರೀಸಮೀರಮತ ಶರನಿಧಿ ಗುರುರಾಜಾ-
ಆಶ್ರಿತಸುರಭೂಜಾ ‖ ‖ಅ‖
ಮುನಿ ಮಧ್ವಾರ್ಯರ ಘನತರ ಪೀಠದಲಿ-
ರಾರಾಜಿಪರಿಲ್ಲಿ ।
ಕನಕಾಂಬಕವೈರಿಯ ಸುತೆ ತೀರದಲಿ-
ಇಪ್ಪರು ಮುದದಲ್ಲಿ ।
ಜನಕಜಾತಪತಿ ಮೂಲರಾಮ ಪದವ-
ವಿಭವದಲರ್ಚಿಸುವ ।
ಮುನಿರಾಘವೇಂದ್ರರ ಪದಕಂಜಭೃಂಗ-
ನತಜನ ದಯಾಪಾಂಗ ‖೧‖
ಗುರು ಸುವ್ರತೀಂದ್ರರ ಕರಸರಸಿಜ ಜಾತಾ-
ಜಗದೊಳಗೆ ಪ್ರಖ್ಯಾತಾ
ಪರಮೋದಾರ್ಯದಿ ರವಿಜನ ಮರೆಸಿದನ-
ಧರೆಸುರ ಪಾಲಕನ ।
ಕರಜಾನನ ಮಣಿ ತುಲಸಿ ಸುಸರ ಭೂಷಾ-
ಕಾಷಾಯವಾಸಾ ।

ಹರಿಮತ ಸಿಂಧವ ಪೊರೆಸುತ ಸಂಚಿರಿಪ–
ಜನರುದ್ಧರಿಪ ॥ ॥೨॥
ಪರಿಮಳಾಚಾರ್ಯರ ಪರಿಮಳ ಸೌರಭವ–
ಹರಹಿದ ಜಿತಕಾವ ।
ಶರವತ್ಸರದಿಂ ಧರ್ಮ ಸುಸಾಮ್ರಾಜ್ಯ–
ಪಾಲಿಪ ಧ್ವಜಪೂಜ್ಯ ।
ಶರಣಜನಾಮಯ ತಿಮಿರಕೆ ಮಾರ್ತಾಂಡ–
ಧೃತ ಕಲಶ ಸುದಂಡಾ ।
ಕರಿವರದನಭಿನವ ಪ್ರಾಣೇಶವಿಠ್ಠಲನಾ–
ಸದ್ಭಕ್ತ ವರೇಣ್ಯ ॥ ॥೩॥



೮೯

## 2. ಶ್ರೀಸುವ್ರತೀಂದ್ರತೀರ್ಥರು (ಕ್ರಿ. ಶ. 1926–1933)

**[ಪುಣ್ಯದಿನ:—ವೈಶಾಖ ಶುದ್ಧ ದ್ವಾದಶೀ
ವೃಂದಾವನ ಸ್ಥಳ :– ಮಂತ್ರಾಲಯ]**

**(ಶಾಮಸುಂದರಾಂಕಿತ)**

**ರಾಗ-ಮೋಹನ** **ಅಟ್ಟತಾಳ**

**"(ಗೋಪಾಲದಾಸರಾಯ"-ಎಂಬ ಪದದ ಧಾಟಿಯಲ್ಲಿ)**

ಪೊಂದಿ ಭಜಿಸೋ ನಿರುತಾ- ಮಾನವ ಮಹಿ
ವೃಂದಾರಕವ್ರಾತಾ ॥ ॥ಪ॥

ವಂದಿತ ಶ್ರೀಸುಯಮೀಂದ್ರರ ಹೃದಯಾರ
ವಿಂದ ಭಾಸ್ಕರುಪೇಂದ್ರರ ಪದಯುಗ ॥ ॥೮॥

ಧರೆಯೊಳು ದ್ವಿಜನಿಕರ-ಉದ್ಧರಿಸಲು
ಗುರುವರ ಸುಶೀಲೇಂದ್ರರ
ಕರದಿ ತುರಿಯಾಶ್ರಮ ಧರಿಸುತ ಶ್ರೀಮೂಲ
ತರಣಿಕುಲೇಂದ್ರನ ಚರಣವಪೂಜಿಸಿ ॥

ಮರುತಶಾಸ್ತ್ರವ ಭಕ್ತಿಪೂರ್ವಕ
ನಿರುತ ಪ್ರವಚನಗೈದು ಶಿಷ್ಯರಿ
ಗೊರೆದು ಕರುಣದಿ ಪೊರೆದ ಪಾವನ
ಚರಿತರಡಿದಾವರೆಗಳ್ಹರುಪದಿ ॥ ॥೧॥

ಸಲೆಭಕ್ತಿ ವಿರಕುತಿ-ಸುಶಾಂತ್ಯಾದಿ
ಹಲವು ಸದ್ಗುಣ ಪ್ರತತಿ
ಕಲಿಯೊಳಿಳೆಯೊಳು ಸ್ಥಳವ ಕಾಣದೆ ವಿಧಿ
ಬಳಿಗೆ ಬಿನ್ನೈಸಲು ನಳಿನಜ ಯೋಚಿಸಿ ॥

ಇಳೆಯೊಳಗೆ **ಸುವ್ರತೀಂದ್ರತೀರ್ಥರ**
ಚಲುವ ಹೃದಯಸ್ಥಾನ ತೋರೇ
ಬಳಿಕ ಸುಗುಣಾವಳಿಗಳಿವರೊಳು
ನೆಲಸಿದವು ಇಂಥ ಅಲಘುಮಹಿಮರ ॥ ॥೨॥

ಶಿರಿಯಾಶ್ಕ ವತ್ಸರದಿ- ಸುವೈಶಾಖ
ವರಮಾಸ ಶಿತಪಕ್ಷದಿ
ಹರಿದಿನದಲಿ ದಿವ ಮೂರನೆಯಾಮದಿ
ವರಮಂತ್ರಮಂದಿರ ಪರಮಸುಕ್ಷೇತ್ರದಿ ॥

ಸಿರಿ ಮನೋಹರ ಶಾಮಸುಂದರ
ಸರಸಿಜಾಂಘ್ರಿಯ ಸ್ಮರಿಸುತಲಿ ಶುಭ
ಕರ ಸುಲಯ ಚಿಂತನೆಗೈಯುತ
ಹರಿಪುರಕೆ ಪೊರಮೊಟ್ಟ ಗುರುಪದ ॥ ॥೩॥



## 3. ಶ್ರೀಸುಶೀಲೇಂದ್ರತೀರ್ಥರು (ಕ್ರಿ. ಶ. 1912–1926)

ಪುಣ್ಯದಿನ:–ಆಷಾಢಶುದ್ಧ ತೃತೀಯಾ
ವೃಂದಾವನಸ್ಥಳ :– ಹೊಸರಿತ್ತಿ

(ಶಾಮಸುಂದರಾಂಕಿತ)

೯೦

ಸ್ಮರಿಸು ಮಾನವ ನಿರುತ ಶ್ರೀಸುಶೀಲೇಂದ್ರತೀರ್ಥರಾ
ವರಹಜತಟ ವ್ಯಾಸರಾಯರ ಕರುಣಾ ಪಾತ್ರರಾ ॥ ಪ

ಭಾನುಜ ಸಮಾನ ದಾನಿ ದೀನಪಾಲರಾ
ಮಾನಿತ ಸನ್ಮೌನಿ ವರ್ಯ ಜ್ಞಾನಶೀಲರಾ ॥ ೧

ಪ್ರಾಣಪತಿಯ ಮತಾಬ್ಧಿಗೆ ಪಾರೀಣರೆನಿಪರಾ
ಕ್ಷೋಣಿತಳದಿ ಇವರಿಗೆ ಸರಿಗಾಣೆ ಜಾಣರಾ ॥ ೨

ಶಾಮಸುಂದರವಿಠ್ಠಲನ ನಿಸ್ಸೀಮ ಭಕುತರಾ
ಸ್ವಾಮಿ ಶ್ರೀಸುಕೃತೀಂದ್ರ ಕೋಮಲ ಕರಸಂಜಾತರಾ ॥ ೩



## 4. ಶ್ರೀಬೋಧೇಂದ್ರತೀರ್ಥರು (ಕ್ರಿ. ಶ. 1799-1835)

(ಪುಣ್ಯದಿನ :- ಚೈತ್ರಕೃಷ್ಣ ತೃತೀಯಾ
ವೃಂದಾವನಸ್ಥಳ :- ನಂಜನಗೂಡು)

೯೧

(ಪ್ರಾಣೇಶವಿಠ್ಠಲಾಂಕಿತ)

ರಾಗ-ಪೂರ್ವಿ ಏಕತಾಳ

ಅಭಯವೀಗಲೆ ಬೇಡೆ-ಗುರು
ಸುಬೋಧೇಂದ್ರಾರ್ಯರ ನೋಡೆ ಸಖಿ ॥ ಪ

ಪಾಪಕಳೆವಳಾಕಾಶಗಂಗೆ ಬಹು
ತಾಪ ಕಳೆವ ದ್ವಿಜನಾಥ
ಆಪಾಪದ ದೈನ್ಯಹರೀ ಸುಗುಣವು
ಈ ಪುರುಷರಿಗೊಪ್ಪುವುದಲ್ಲೀ ಸಖಿ ॥ ೧

ಮೀನ ಕೂರ್ಮ ದ್ವಿಜನೋಡಿ ಸ್ಮರಿಸಿ ಮುಟ್ಟಿ
ಸೂನುಗಳನು ಸಲಹುವ ತೆರದಿ
ಸುನೋಟದಿ ನೆನೆದು ಪಾದಸ್ಪರ್ಶವಿ-
ತ್ತಾನತರನು ಪೊರೆವರು ಬಿಡದೆ ॥ ೨

ಈ ಸಂಯಮಿಗಳ ಕೃಪೆಯೊಂದಿರೆ
ಏಸು ಸಾಧನ ಇನ್ನೇತಕೆಲೆ
ನಾಶರಹಿತ ವೈಕುಂಠವೇ ಸರಿ ಪ್ರಾ
ಣೇಶವಿಠ್ಠಲನಿವರಲ್ಲಿಹದಕೆ ॥



## 5. ಶ್ರೀಭುವನೇಂದ್ರತೀರ್ಥರು (ಕ್ರಿ. ಶ. 1785–1799)

(ಪುಣ್ಯದಿನ :– ವೈಶಾಖ ಕೃಷ್ಣ ಸಪ್ತಮೀ,
ವೃಂದಾವನ ಸ್ಥಳ : ರಾಜನಳ್ಳಿ

೯೨

(ಪ್ರಾಣೇಶವಿಠ್ಠಲಾಂಕಿತ)

ರಾಗ–ಭೈರವಿ ಆದಿತಾಳ

ಗುರುಗಳ ನೋಡಿರೈ–ಉತ್ತಮ ವರಗಳ ಬೇಡಿರೈ ॥ ಪ

ದುರುಳ ತಿಮಿರ ದಿನಕರ–ಶರಣರ ಸುರತರು
ವರದೇಂದ್ರರ ಕರ ಪಂಕಜರುಹ ॥ ಅ

ಮಂಗಳ ವಿಗ್ರಹ ಮಧ್ವಮತಾಂಬುಧಿ ಸೋಮ–
ಸದ್ಗುಣ ಧಾಮ ।
ಪಿಂಗಳನಿಭ ಸನ್ಯಾಸ ಕುಲೋತ್ತಮ ನೀತಾ–
ಲೋಕ ವಿಖ್ಯಾತಾ ।
ಸಂಗರಹಿತ ಕೌಪೀನ ಕಮಂಡಲುಧರಾ–
ದೋಷ ವಿದೂರಾ ।
ಮಂಗಳೆ ಪತಿಪದ ಭಜಕ ಅಘೋರ ವೀಂದ್ರ–
ಶ್ರೀಭುವನೇಂದ್ರ ॥ ೧

ಜನ್ಮಾರಭ್ಯವು ಲೌಕಿಕ ಸ್ವಪ್ನದೊಳರಿಯಾ–
ಭೂಸುರ ವರ್ಯಾ ।

ಸುಷ್ಮ್ನೆ ಈಪರಿ ಪದವಿಯು ಜಗದೊಳು ಬಹದು-
ಆರಿಗೆ ಆಹುದು ।
ಬೊಮ್ಮನ ಸಂತತಿಯಿದು ಪುಸಿಯಲ್ಲವು ಸತ್ಯಾ-
ಭಜಿಸಿರಿ ನಿತ್ಯಾ ।
ಎಮ್ಮ ಬಳಿಯೊಳಿಹ ದುಷ್ಟಮತೇಂಧನ ದಾವಾ-
ಸೌಖ್ಯವನೀವಾ ॥ ೨

ಧಾರುಣಿಯೊಳು ವಿಸ್ತರಿಸಿದ ಸ್ವಮತವ ಧೀರಾ-
ಗುಣ ಗಂಭೀರಾ ।
ಆರಿಂದೊಶ ಚರಿತೆಯ ಪೂರ್ತಿಸಿ ಪೇಳ್ದದಕೆ-
ಬಹುಸುಖ ಮನಕೆ ।
ಶ್ರೀರಾಘವೇಂದ್ರರನುಗ್ರಹ ಪಾರಾವಾರಾ-
ದೊಳಗೆ ವಿಹಾರಾ ।
ಘೋರಿಸುತಿಹ ಸಂಸಾರ ಸಮುದ್ರಕೆ ಮುನಿಯೂ-
ಯತಿ ಶಿರೋಮಣಿಯೂ ॥ ೩

ಚಿರಕಾಲ ಸುಕೃತ ದೊರಕಲು ಪದಗುವುದು-
ಸೇವೆ ಯಿವರದು ।
ಮರಳೊಂದ್ಯೋಚಿಸದಲೆ ಶರಣಾಗತರಾಗೀ-
ಚಿಂತೆಯ ನೀಗಿ ॥
ಎರವಿಲ್ಲದೆ ದುಃಖವ ಪರಿಹರಿಪರು ಹತ್ತೇ-
ಕರೆವರು ಮತ್ತೇ ॥
ಸಿರಿ ಪೂರ್ಣಾಯು ಸುತಾದಿ ವಿಷಯಗಳ ಕೊಡುವ-
ದುರಿತವ ತರಿವ ॥ ೪

ತಪಕದೊಳಿವರ ಪದಾಬ್ಜವ ಸೇವಿಪ ಭಕ್ತ-

ಜೀವನ್ಮುಕ್ತಾ ।

ಕುಲವಲಯದೊಳಗೀಗಿವರಿಗೆ ಸರಿಯಾರಿಲ್ಲಾ-

ಕೇಳಿರಿ ಸೊಲ್ಲಾ ।

ಅವನೀಶರು ಎಂಬಾಹ್ವಯ ತಿಳಿಯಲಿಕುಂಟೇ-

ಅಧಿಕರುವುಂಟೇ ।

ಇವರಿಗೆರಗದಿರೆ ಒಲಿಯನು ಶ್ರೀಪ್ರಾಣೇಶಾ-

ವಿಠ್ಠಲನು ಲೇಶಾ ॥ ೫



## 6. ಶ್ರೀಧೀರೇಂದ್ರತೀರ್ಥರು (ಕ್ರಿ. ಶ. 1765-1785)

(ಪುಣ್ಯದಿನ:-ಫಾಲ್ಗುಣ ಶುದ್ಧ ತ್ರಯೋದಶಿ
ವೃಂದಾವನ ಸ್ಥಳ :- ಹೊಸರಿತ್ತಿ)

೯೩

(ವರದವಿಠ್ಠಲಾಂಕಿತ)

ರಾಗ-ಪೂರ್ವಿ ಆದಿತಾಳ

ಧೀರೇಂದ್ರಾ-ಧೀರೇಂದ್ರಾ
ಸಾರಿದ ಭಕುತರ-ನೀರಜ ಚಂದ್ರಾ ॥ ಪ

ವರಹಜ ತಟಸ್ಥಿತ । ಗುರುವರೇಣ್ಯರ
ಹಿರಿಯ ಕರುಣವನು । ಧರಿಸಿ ಮೆರೆಯುವ ॥ ೧

ಗುರು ವರದೇಂದ್ರರ । ಕರಸರಸಿಜನೆ
ವರದಾತೀರದಿ। ಇರುವ ಮುನೀಂದ್ರ ॥ ೨

ಪಂಡಿತನೆಂಬುವ । ಡಂಭವು ತೊಲಗದೆ
ಡಿಂಬದಿ ಬಿಂಬನ । ಕಾಂಬುವದೆಂತೋ ॥

ಭವ ಬಂಧನದಲಿ । ನವೆದೆನೊ ಜೀಯುತ
ತವಪಾದ ಸಾರಿದೆ । ಕವಿಜನಗೇಯ ॥ ೪

ತುರುಕರುವನು ತಾ । ಮರೆವುದುಚಿತವೆ
ವರದವಿಠ್ಠಲನ! ಸ್ಮರಣೆ ನಿರುತ ಕೊಡು ॥ ೫



## 7. ಶ್ರೀವರದೇಂದ್ರತೀರ್ಥರು (ಕ್ರಿ. ಶ. 1761-1785)

(ಆರಾಧನಾದಿನ :-ಆಷಾಢ ಶುದ್ಧ ಷಷ್ಠಿ
ವೃಂದಾವನ ಸ್ಥಳ :- ಪೂನಾನಗರ)

೯೪

(ಜಗನ್ನಾಥವಿಠ್ಠಲಾಂಕಿತ)

ರಾಗ-ತೋಡಿ ಆದಿತಾಳ

ವರದೇಂದ್ರ ಯತಿ ಚಕ್ರವರ್ತಿ-ನಿರಂತರ
ವರ್ಣಿಸುವೆ ನಿಮ್ಮ ಕೀರ್ತಿ ॥

ಪರಮ ಕರುಣಿ ನಿಮ್ಮ । ಚರಣಕಮಲ ಯುಗ್ಮ
ಕ್ಕೆರಗಿ ಬೇಡುವೆ ವರವಾ-ಎಮ್ಮನು ಪೊರೆವಾ ॥ ಪ

ನತಜನ ಬಂಧೂ ನೀನೆಂದೂ-ತಿಳಿದು
ನತಿಸಿದೆ ಗುಣಗಣ ಸಿಂಧೂ ॥
ಪ್ರತಿಗಾಣೆ ನಿಮಗೆ ಸುವ್ರತಿವರ ಪ್ರಣತಕಾ-
ಮಿತ ಕಲ್ಪತರುವೆ ನಿರ್ಜಿತ ಮಾರಮಾರ್ಗಣ ॥

ಕ್ಷಿತಿಪರಿಗೆ ಪ್ರತಿದಿನದಿ ಪರಮಾ-
ದ್ಭುತವೆನಿಸುವುದು ನಿಮ್ಮ ದಾನ
ಪ್ರತತಿ ಸಾಂಪ್ರತ ಮೃದುಮಧುರ ವಚನಾ
ಶಾಸ್ತ್ರ ಪ್ರವಚನಾ ॥ ೧

ಮರುತಮತಾಂಬುಧಿ ಚಂದ್ರಾ-ಚಾಮಿ-
ಕರವರ್ಣ ಸರಸ ಕವೀಂದ್ರ ॥
ಪರವಾದಿತಿಮಿರಭಾಸ್ಕರ ವಸುಧೀಂದ್ರ ಸದ್ಗುರು
ಕರಸಂಜಾತ ನಿರುಪಮ ನಿರ್ಭೀತಾ ॥

ಖರ ಮಥನ ಪದ ಕೋಕನದ ಮಧು
ಕರ ಕೃಪಾಕರ-ಕರವಪಿಡಿದು
ದ್ಧರಿಸುವುದು ಭೂಸುರ ಕುಲೋತ್ತಂಸಾ-ನಮೋ
ಪರಮಹಂಸಾ ॥ ೨

ಕಲಿತ ಸುಂದರ ಮಂದಹಾಸಾ-ಹೇ ವಿ
ಷ್ಕಲುಷ ಸುತತ್ತ್ವ ವಿಲಾಸಾ ॥
ಗಳಿತಾಘಸಂಘ ನಿಶ್ಚಲ ಜಗನ್ನಾಥವಿಠ್ಠಲ
ನೊಲಿಮೆಯ ಪಡೆದಿಳೆಯೊಳು ಚರಿಸುವ

ಭಳಿರೆ ಪ್ರತಿಯೋಗಿಗಳೆನಿಪ ಕರಿ-
ಕಲಭ ಕೇಸರಿ ನಿಮ್ಮ ದಾಸರೊಳೊ
ಲಿದು ಪಾಲಿಪುದನವರತ ಎನ್ನ-ನಂಬಿದೆನೊ ನಿನ್ನ ॥ ೫



೯೫

(ಪ್ರಾಣೇಶವಿಠ್ಠಲಾಂಕಿತ)

(ವೃಂದಗಾನದಲ್ಲಿ)

ರಾಗ-ಪೂರ್ವಿ ಆದಿತಾಳ

ಗುರುರಾಯ ಗುರುರಾಯ
ತರಣಿಪ್ರಕಾಶ ಯತಿಪ ವರದೇಂದ್ರ ಪ

ಬೆಂದೆನೊ ಭವದೊಳು । ತಂದೆ ನೀ ಬಹುತ್ವರೆ
ಯಿಂದ ಕರಪಿಡಿಯೊ । ಮಂದ ದಯಾಳೋ ॥ ೧

ಆರೆನು ಮನುಜರು । ದೂರುವ ಮಾತನು
ಆರಿಗುಸರಲಿ ನಿ । ವಾರಿಸೋ ಸ್ವಾಮಿ ॥ ೨

ನೀನೊಲಿಯಲು ಭಯ । ಕಾಣಿಸಿಕೊಂಬುದೆ
ಹೀನ ಮತಾಟವಿ ಕೃ । ಶಾನು ಮಹಾತ್ಮಾ । ೩

ಮೇದಿನಿಪರು ಬೆರ । ಗಾದರು ದಾವಕೆ
ಮೋದಮುನಿಮತ ಮ । ಹೋದಧಿ ಚಂದ್ರ ॥ ॥೪॥

ಕಾಷಾಯ ವಸದಿ । ದೇಶಿಕವರ ಪ್ರಾ
ಣೇಶವಿಠ್ಠಲನವ । ರಾ ಸಲಹುವದೋ ॥ ೫



## ೮. ಶ್ರೀವಸುಧೀಂದ್ರತೀರ್ಥರು(ಕ್ರಿ.ಶ. 1750–1771)

[ಪುಣ್ಯದಿನ :– ಆಶ್ವಯುಜ ಕೃಷ್ಣ ಸಪ್ತಮಿ
ವೃಂದಾವನಸ್ಥಳ :–ಕೆಂಚನಗುಡ್ಡ (ಶಿರಗುಪ್ಪದ ಹತ್ತಿರ)]

### 96

(ಜಗನ್ನಾಥವಿಠ್ಠಲಾಂಕಿತ)

ರಾಗ-ಕಲ್ಯಾಣಿ ತ್ರಿಪುಟತಾಳ

ಶ್ರೀವಸುಧೀಂದ್ರರಾಯಾ– ಪಾವನಕಾಯಾ
ಕೋವಿದಜನ ಪ್ರೀಯಾ ॥ ಪ

ಭೂವಲಯದೊಳತಿ-ಶೀವಿದ ಅಘವನ
ಪಾವಕ ನತಜನ-ದೇವತರುವೆನಿಪ ॥ ಅ

ಜಿತಕ್ರೋಧಾ ಜಯಶೀಲಾ-ದುರ್ವ್ಯಸನ ಪ-
ರ್ವತ ವಜ್ರ ಹರಿಲೋಲಾ
ರತಿಪತಿಮಾರ್ಗಣ ಮಥನ ಮೌನೀಶ ವಾಂ-
ಛಿತ ಫಲವಿತ್ತು ಸಂ । ತತ ಪಾಲಿಸುವುದೆಮ್ಮ ॥

ಪತಿತಪಾವನ ವಿತತ ಕರುಣಾ-
ಮೃತ ರಸಾಂಚಿತ ಸತತ ಸೇವಾ

ಮತಿ ರತಾನತ ಹಿತಕರಾಗಮ
ತತಿ ಪಯೋಜಾವರ್ಕ ಅತಿ ಮುದಾ ॥ ೧

ಭೂದೇವನುತ ಮಹಿಮಾ । ಶಾತವಾನು ಭೀಮಾ
ವೇದಪೂಜಿತ ರಾಮಾ
ವೇದ ವ್ಯಾಸರ ಪಾದ । ಸಾದರದಲಿ ನಿತ್ಯಾ
ರಾಧಿಸುತಿಹ ಸುವಿನೋದ ಚರಿತ ಗುರು ॥

ಮೋದತೀರ್ಥಮತಾಬ್ಧಿ ಸೋಮ ಕು-
ವಾದಿಮತಮತ್ತೇಭ ಕುಂಭ ಧ-
ರಾಧರಾತಟಿ ವಾಸುಗರೊಳೆ
ನಾದರಿಸುವದಖಿಳ ಗುಣಾಂಬುಧೇ ॥ ೨

ಸರಸ ಭಾಷೋಲ್ಲಾಸಾ ! ವರ್ಜಿತ ದೋಷಾ
ಹರಿ ನಿಭಸಂಕಾಶಾ
ಶರೀರಾ ಸಜ್ಜನಗೇಯಾ । ಗುರು ರಾಘವೇಂದ್ರ ಕರ
ಸರಸೀರುಹ ಸಂಜಾತಾ । ನಿರುಪಮ ನಿರ್ಭೀತಾ ॥

ಸುರಚಿರ ಹಿಮಕಿರಣ ತೇಜ
ಸ್ಫುರಣ ಶ್ರೀಜಗನ್ನಾಥ ವಿಠ್ಠಲನ
ಚರಣ ಪಂಕೇರುಹಯುಗಳ ಮಧು
ಕರ ದುರಿತಘನ ಮಾರುತಾ ॥ ೩



# 9. ವಾದೀಂದ್ರತೀರ್ಥರು (ಕ್ರಿ.ಶ. 1728–1750)

[ಪುಣ್ಯದಿನ :– ಜ್ಯೇಷ್ಠ ಶುದ್ಧ ನವಮೀ
ವೃಂದಾವನ ಸ್ಥಳ :– ಮಂತ್ರಾಲಯ]

೯೭

(ವಿಜಯವಿಠ್ಠಲಾಂಕಿತ)

ರಾಗ–ಭೈರವಿ ಆದಿತಾಳ

ಕಂಡೆ ಕಂಡೆನೊ ಕಂಗಳಲಿ ಭೂ
ಮಂಡಲದೊಳು ಮೆರೆವ ಯತಿಗಳ

ಮಂಡಲಾಬ್ಧಿಗೆ ಸೋಮನೆನಿಪ ಅ
ಖಂಡ ಮಹಿಮಾ ವಾದೀಂದ್ರ ಗುರುಗಳ ॥ ಪ

ವಸುನಗೆಯ ಮೊಗ ಪಸರಿಸಿದ ದ್ವಾ
ದಶನಾಮಗಳು ಶ್ರೀಮುದ್ರೆ ಮುದದಿಂದ ॥

ನೊಸಲಿಗೊಪ್ಪುವ ಗಂಧ ಅಕ್ಷತೆ
ಎಸೆವ ಸಣ್ಣಂಗಾರ ಕಿವಿಯಲಿ ॥
ಹಸನಾದ ಎಳೆತುಳಸಿ ಶೋಭಿಸೆ
ಬೆಸಸುವ ಒಂದೊಂದು ಮಾತಾ
ಲಿಸಿದರದು ವೇದಾರ್ಥ ತುಲ್ಯಾ
ಲಸವಗೈಯಿಸದೆ ಬರುವ ಗುರುಗಳ ॥ ೧

ಮೊಸಳಿಬಾಯ ಪಲ್ಲಕ್ಕಿ ಸುತ್ತು ಬಾ
ರಿಸುವ ನಾನಾ ವಾದ್ಯದಾ ಘೋಷ ॥

ಪುಸಿಕರೆದೆದಲ್ಲಣರು ಎಂಬಾ
ದಶದಿಕ್ಕಿನೊಳು ಕೀರ್ತಿ ತುಂಬಿರೆ ॥
ಶಿಶುವು ಮೊದಲಾದವರು ತಮತಮ
ಬೆಸನ ಪೇಳಲು ಕೇಳಿ ಆವರ
ಬ್ಯಸವ ಕಳೆದಿಷ್ಟಾರ್ಥ ತೋರುವ
ಋಷಿಕುಲೋತ್ತಮರಾದ ಗುರುಗಳ ॥ ೨
ಶ್ವಸನಮತ ವಾರಿಧಿಗೆ ಪೂರ್ಣ
ಶಶಿ ಎಂದೆನಿಸಿಕೊಂಬ ಧೀರುದಾರರೆ ॥
ಅಸಮ ತತ್ವಪ್ರಮೇಯದಲಿ ನಿರ್ಮಿಸಿದನೆ ಲೋ
ಕೇಶ ಇವರನ್ನ ವಸುಧಿ ಅಮರರು
ಪ್ರಸರ ಎಡಬಲ ಎಸದು ತು
ತಿಸಲು ಹಿಗ್ಗಿ ಕರುಣಾ
ರಸಭರಿತರಾಗಿ ನೋಡುತ್ತ ಮಾ
ನಸದಿ ಹರಿಪದ ಭಜಿಪ ಗುರುಗಳ ॥ ೩
ಕುಸುಮಶರನ ಬಾಣವನು ಖಂಡ್ರಿಸಿ
ಬಿಸುಟ ಸಂಪನ್ನ ವಿದ್ಯಾ ॥
ವಸುವಿನಲಿ ಆವಾಗ ತಲೆ ತೂ
ಗಿಸುವರು ಪಂಡಿತರ ಮೆಚ್ಚಿಸಿ ॥
ವಶವೆ ಪೊಗಳಲು ಎನಗೆ ಇವರ ದ
ರುಶನದಿಂದಲಿ ಎತಿಗೆ ಪಥ ನಿ
ಮಿಷದೊಳಗೆ ಇದು ಸಿದ್ಧವೆಂದು ವಂ
ದಿಸಿರೊ ಮರೆಯದೆ ಈ ಗುರುಗಳಾ ॥ ೪
ಮಿಸುಣಿಪ ಮಂಟಪದೊಳಗೆ ರಂ
ಜಿಸುವ ರಾಮನ ಕುಳ್ಳಿರಿಸಿ ಆ ॥
ರ್ಚಿಸುವ ಚಿತ್ತೇಕಾಗ್ರದಲಿ ಪೊ
ಲಿಸುವ ತಂತ್ರಸಾರೋಕ್ತ ಬಗೆಯನು ॥

[illegible]ಲರಾದ ಉಪೇಂದ್ರ ಮುನಿಕರ
[illegible]ಜದಿಂದಲಿ ಜನಿಸಿ ಭಕುತಿಲಿ
[illegible]ರಂಪು ಸಿರಿ ವಿಜಯವಿಠ್ಠಲನ್ನ
ಹೆಸರುಗಳ ಎಣಿಸುವ ಗುರುಗಳ ॥ ೫



## 10. ಶ್ರೀರಾಘವೇಂದ್ರಗುರುಸಾರ್ವಭೌಮರು
(ಕ್ರಿ. ಶ. 1621–1671)

[ಪುಣ್ಯದಿನ:– ಶ್ರಾವಣ ಕೃಷ್ಣ ದ್ವಿತೀಯಾ
ವೃಂದಾವನ ಸ್ಥಳ :– ಮಂತ್ರಾಲಯ ಕ್ಷೇತ್ರ]

ಧ್ಯಾನ ಶ್ಲೋಕ :–

ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯ ಚ ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥

೯೮

(ವಿಯವಿಠ್ಠಲಾಂಕಿತ)

[illegible]ಭೈರವಿ ತ್ರಿಪುಟತಾಳ

ನೋಡಿದೆ–ಗುರುಗಳ ನೋಡಿದೆ ॥ ಪ

ನೋಡಿದೆನು ಗುರು ರಾಘವೇಂದ್ರರ
ಮಾಡಿದೆನು ಭಕುತಿಯಲಿ ವಂದನೆ
ಬೇಡಿದೆನು ಕೊಂಡಾಡಿ ವರಗಳ
ಈಡು ಇಲ್ಲದೆ ಕೊಡುವ ಗುರುಗಳ ॥ ಅ

ಮೊದಲು ಗಾಂಗೇಯಶಯ್ಯಜನು ಈ
ನದಿಯ ತೀರದಲಿಲ್ಲಿ ಯಾಗವ
ಮುದದಿ ರಚಿಸಿ ಪೂರೈಸಿ ಪೋಗಿರ-
ಲದನು ತಮ್ಮೊಳು ತಿಳಿದು ತವಕದಿ ॥

ಹೃದಯ ನಿರ್ಮಲರಾಗಿ ರಾಗದಿ
ಬುಧಜನರ ಸಮ್ಮೇಳದಲಿ ಸಿರಿ
ಸದನಗಪ್ರಿಯ ತಿಳಿದು ನೆನೆವರ
ಉದಿತಭಾಸ್ಕರನಂತೆ ಪೊಳೆವರ ॥ ೪

ಅಲವಬೋಧ ಮಿಕ್ಕಾದ ಮಹಮುನಿ
ಗಳು ಸಾಂಶರು ಒಂದು ರೂಪದಿ
ನೆಲೆಯಾಗಿ ನಿತ್ಯದಲಿ ಇಪ್ಪರು
ಒಲಿಸಿಕೊಳುತಲಿ ಹರಿಯ ಗುಣಗಳ

ತಿಳಿದು ತಿಳಿಸುತ ತಮ್ಮ ತಮಗಿಂ
ದಧಿಕರಿಂದುಪದೇಶ ಮಾರ್ಗದಿ
ಕಲಿಯುಗದೊಳು ಕೇವಲ ಕ-
ತ್ತಲೆಯ ಹರಿಸುವ ಸೊಬಗ ಸಂತತ ॥ ೫

ರಾಮ ನರಹರಿ ಕೃಷ್ಣ ಕೃಷ್ಣರ
ನೇಸುದಿಂದೀ ಮೂರ್ತಿಗಳ ಪದ
ತಾಮರಸ ಭಜನೆಯನು ಮಾಳ್ಪರು
ಕೋಮಲಾಂಗರು ಕರುಣ ಪರವಾದಿ

ಸ್ತೋಮಗಳ ಮಸ್ತಕಾದ್ರಿಗೆ
ಭೂಮಿಯೊಳು ಪವಿಯೆನಿಸಿದ ಯತಿ
ಯಾಮ ಯಾಮಕೆ ಎಲ್ಲರಿಗೆ ಶುಭ
ಕಾಮಿತಾರ್ಥವ ಕರೆವ ಗುರುಗಳ ॥ ೬

[illegible]ರುಪರ್ವತ ವರುಷ ಬಿಡದಲೆ
[illegible]ರುವೃಂದಾವನದಲಿ ವಿ
[illegible]ರ ಆರಾಧನೆಯು ತೊಲಗದ
[illegible]ರವಾರಕ ಆಗುತಿಪ್ಪುದು ॥

ಸಾಕಿ ಕಾರುಣ್ಯದಲಿ ಲಕುಮಿ
ನಾರಾಯಣ ತಾ ಚಕ್ರರೂಪದಿ
ಬಾರಿದವರಘ ಕಳೆದು ಇವರಿಗೆ
ಕೀರುತಿಯ ತಂದಿಪ್ಪ ನನುದಿನದಿ ॥ ೪

[illegible]ವು ಎನದಿರಿ ಇಲ್ಲಿ ದಿನದಿನ
[illegible]ಶಯಾವೆ ಆಗುವುದು ಭೂಸುರ
[illegible] ಭೋಜನ ಕಥಾಶ್ರವಣ ಭಾ–
[illegible] ಪುರಾಣಗಳಿಂದಲೊಪ್ಪುತ ॥

ಕ್ಷಿತಿಯೊಳಗೆ ಮಂಚಾಲೆ ಗ್ರಾಮಕೆ
ಪ್ರತಿಯು ಇಲ್ಲವೆನಿಸಿಕೊಂಬುದು
ಪತಿತಪಾವನ ವಿಜಯವಿಠ್ಠಲನ
ತುತಿಸಿಕೊಳುತ ಮೆರೆವ ಗುರುಗಳ ೫



೯೯

(ಗೋಪಾಲವಿಠ್ಠಲಾಂಕಿತ)

ಸುಳಾದಿ

॥ ಧ್ರುವತಾಳ ॥

ಧರೆಯೊಳಗೆ ನಮ್ಮ ಗುರು ರಾಘವೇಂದ್ರರಿನ್ನು
[illegible]ತಿಪ್ಪ ವಿವರವ ಅರಿತಷ್ಟು ವರ್ಣಿಸುವೆ

ಸ್ಥಿರವಾಗಿ ಮಂತ್ರಾಲಯಪುರ ತುಂಗಾತೀರದಿ
ಹರಿಭಕ್ತ ಪ್ರಹ್ಲಾದ ವರಯಾಗ ಇಲ್ಲಿ ಮಾಡಿ
ಸುರರಿಗಮೃತ ಉಣಿಸಿ ಪರಿಪರಿ ಕ್ರಿಯೆಮಾಡಿ
ಪರಿಶುದ್ಧ ಆದನೆಂದು ಅರಿತು ಈ ಸ್ಥಳದಲ್ಲಿ
ಗುರುರಾಘವೇಂದ್ರರಾಯ ಶರೀರ ಪೋಗಾಡಿಸಿಲ್ಲಿ
ಪರಲೋಕಸಾನ ಪರಿಪೂರ್ತಿ ಮಾಡಿಕೊಂಡು
ಸಿರಿಕೃಷ್ಣ ಚರಣಕ್ಕೆರಗಿ ಸಂತೋಷದಲ್ಲಿ
ಧರೆಯಮೇಲಿದ್ದ ಜನರ ಪೊರೆಯಬೇಕೆಂದನಲು
ಹರಿನೋಡಿದನಿವರ ಪರಮ ದಯಾಳುತನವ
ಗುರುವಂತರ್ಯಾಮಿಯಾಗಿ ವರವ ನೀಡಲು ಜಗಕೆ
ನರಹರಿ ತಾನೆ ನಿಂದು ನಿರುತ ಪೂಜೆಯಗೊಂಡು
ಸಿರಿಯುಳ್ಳ ಕೀರುತಿಯ ಸುರಪಾಲಕ ಚಕ್ರ
ಧರ ನಾರಾಯಣ ತಾನಿವರ ಸನ್ನಿಧಾನನಾಗಿ
ವರಿಗೆ ಫಲ ತಂದೀವ ಇಹಪರದಲ್ಲಿ ಇನ್ನು
ಕರುಣಾಕರ ರಂಗ ಗೋಪಾಲವಿಠ್ಠಲ ತನ್ನ
ಶಣರ ಪೊರೆವಂಥ ಚರಿಯು ಪರಿಪರಿ ಉಂಟು ॥ ೧

॥ ಮಠ್ಯತಾಳ ॥

ನರಹರಿ ರಾಮಕೃಷ್ಣ ಸಿರಿ ವೇದವ್ಯಾಸ
ಎರಡೆರಡೆರು ನಾಲ್ಕು ಹರಿಮೂರುತಿಗಳು
ಪರಿವಾರ ಸಹಿತನಾಗಿ ಸಿರಿಸಹಿತ ನಿಂದು
ಸುರಗುರು ಮಧ್ವಾಚಾರ್ಯರೆ ಮೊದಲಾಗಿ
ತರುವಾಯದಲ್ಲಿನ್ನು ತಾರತಮ್ಯಾನುಸಾರ
ಪರಿಪರಿ ಯತಿಗಳು ಇರುತಿಪ್ಪವರಿಲ್ಲಿ
ಹರುಷದಿಂದಲಿ ವೇದ ಒರೆದು ಶಾಸ್ತ್ರಗಳಿನ್ನು
ಪರಿಪರಿ ಪುರಾಣ ಭಾರತಾಗಮದಲ್ಲಿ

ಸರಿ ಸರಿ ಬಂದಂತೆ ಸರಿಗಮವೆನುತಲಿ
ಭರದಿಂದ ಕುಣಿದು ಭಕುತಿಯಿಂದಲಿ ಇನ್ನು
ಹರಿಯನ್ನು ಪೂಜಿಸುತ ಇರುಳು ಹಗಲು ಬಿಡದೆ
ಪರಿಪರಿ ವಿವರವ ಪರಿಪರಿ ಕೇಳ್ವರು
ಗರುಡವಾಹನ ರಂಗ **ಗೋಪಾಲವಿಠ್ಠಲ** ತನ್ನ
ಶರಣರ ಪಾಲಿಸುತಿರುತಿಪ್ಪನಿಲ್ಲಿ ॥ ೨

॥ **ತ್ರಿಪುಟತಾಳ** ॥

ನರಹರಿರೂಪನಾಗಿ ವಾಸವಾಗಿ ಇಲ್ಲಿ
ದುರಿತ ದುಷ್ಕೃತ ಬ್ರಹ್ಮಹತ್ಯಗಳ ದೂರೋಡಿಸುವ
ಸಿರಿರಾಮನಾಗಿ ವಾಸವಾಗಿ ಇಲ್ಲಿ ಪರಿ
ಪರಿಯಿಂದ ದೇಶಾಂತರ ಅನ್ನ ಕಳಕೊಂಡು
ನರರಿಲ್ಲಿ ಬಂದರೆ ಸ್ಥಿರಪಟ್ಟಗಟ್ಟುವ
ಸಿರಿಕೃಷ್ಣನಾಗಿ ವಾಸವಾಗಿ ಇಲ್ಲಿ
ಪರಿಪರಿಯಲ್ಲಿ ಬಂದ ಪರಮಾತುರರಿಗೆ
ವರವೀವ ಪುತ್ರೋತ್ಸವ ಮದುವೆ ಮುಂಜಿ
ಹರಕೆಗಳೆ ಕೈಗೊಂಡು ಹರುಷ ಬಡಿಸುವ
ವರವೇದವ್ಯಾಸನಾಗಿ ವಾಸವಾಗಿ ಇಲ್ಲಿ
ಭರದಿಂದ ಬಂದ ದುರ್ವಾದಿಗಳನ್ನೆಲ್ಲ
ದೂರ ಓಡಿಸಿ ಮುರಿದು ಅವರ ಕುಶಾಸ್ತ್ರವ
ಹರಿ ಸರ್ವೋತ್ತಮನೆಂದು ಇರುವನಿಲ್ಲಿ ತೋರಿ
ಶರಣಜನಕೆ ಇನ್ನು ವರಜ್ಞಾನ ಸುಧೆಯ
ಕರೆದುಕೊಡುತಲಿ ಇರುತಿಪ್ಪವನಿಲ್ಲಿ
ಸಿರಿವಂದಿತ ಪಾದ **ಗೋಪಾಲವಿಠ್ಠಲ**
ಪರಿಪರಿಯಿಂದ ವಾಲಗ ಕೈಗೊಳುತಿಪ್ಪ ॥

|| ಅಟ್ಟ ತಾಳ ||

ರಾಘವೇಂದ್ರನೆಂಬ ರೂಪತಾನೆಯಾಗಿ
ರಾಘವೇಂದ್ರನೆಂಬ ನಾಮ ಇಡಿಸಿಕೊಂಡು
ರಾಘವೇಂದ್ರರಿನ್ನು ಮಾಡಿದಂಥ ಪುಣ್ಯ
ಭೋಗವನರಿತು ತನ್ನ ಭಾಗವತರ ಕೀರ್ತಿ
ಸಾಗಿಸಿ ಸಲಹಲು ಜಗದೊಳಗೆಲ್ಲ
ಮೇಘಸೂರ್ಯನಂತೆ ಅಮೋಘ ಕೀರುತಿಯನು
ರಾಘವ ಇವರಿಗೆ ರಾಜ್ಯವ ತಂದೀವ
ರಾಘವೇಂದ್ರ ಮೂರುತಿ **ಗೋಪಾಲವಿಠ್ಠಲ**
ಭಾಗವತರಲ್ಲಿ ಬಹುಪೂಜೆಯನುಗೊಂಬ || ೪

|| **ಆದಿತಾಳ** ||

ದಿನ ದಿನಕಿಲ್ಲಿ ನೂತನ ಪೂಜೆಗಳಾಗುವುವು
ದಿನದಿನಕಿಲ್ಲಿ ನೂತನ ಉತ್ಸವವಾಗುವುವು
ದಿನ ದಿನಕಿಲ್ಲಿ ನೂತನ ವಾರ್ತೆಗಳಾವುವು
ಜನರ ಸಂದಣಿ ಪ್ರತಿದಿನ ವಿಪ್ರಭೋಜನ
ಜನರ ಕೈಯಿಂದ ಪ್ರತಿಜನರೀಪ್ಸಿತ ತುಂಬುವರು
ಜನುಮ ಸಫಲ ತಮ್ಮ ಜನನವ ನೀಗುವರು
ದಿನಸಪ್ತ ಶತವರುಷ ದಿನ ಪರಿಯಂತರ
ದಿನಕರ ಶತತೇಜ ಜನನಾಥ ತಾನಿಲ್ಲಿ
ಅನುವಾಗಿ ಪಾಲಿಸುವ ತಾನಿಂದು ಜನರ ಪಾಲಿಪುದ
ಕ್ಕನುಮಾನ ಸಲ್ಲದು ಗುಣಗಣಪರಿ
**ಪೂರ್ಣ ಗೋಪಾಲವಿಠಲ** ಅಣೋ
ರಣೀಯ ಎಂಬುವಗೆ ಎಣೆಯಾರೋ ಜಗದೊಳಗೆ || ೫

॥ ಜೊತೆ ॥

ಮಂತ್ರಸಿದ್ಧಿಯಕ್ಷೇತ್ರ ಇದನೋಡಿ ಕೋವಿದರು
ಮಂತ್ರ ಪ್ರತಿಪಾದ್ಯ ಗೋಪಾಲವಿಠ್ಠಲನಿಂದ ॥



ಶ್ರೀ ಸುಧೀಂದ್ರಾಬ್ಧಿ ಸಂಭೂತಾನ್ ರಾಘವೇಂದ್ರ ಕಲಾನಿಧೀನ್ ।
ಸೇವೇ ಸುಜ್ಞಾನ ಸೌಖ್ಯಾರ್ಥಂ ಸಂತಾಪತ್ರಯ ಶಾಂತಯೇ ॥

೧೦೦

(ಗುರುಗೋಪಾಲವಿಠ್ಠಲಾಂಕಿತ)

(ವೃಂದಗಾನದಲ್ಲಿ)

ಕರುಣೆ ಕಾಯೋ ರಾಘವೇಂದ್ರ ಗುರುವೆ
ನೆರೆನಂಬಿದವರ ಕಾಮಿತ ಕಲ್ಪತರುವೆ ॥ ಪ

ತೀರ್ಥಪಾದನ ಪಾದಪಂಕಜಭೃಂಗ
ಧೂರ್ತವಾದಿ ಅಂಧತಿಮಿರ ಪತಂಗ
ಕಾರ್ತಸ್ವರ ಲೋಷ್ಟ ಸಮಚಿತ್ತ ಸಂಗ
ಆರ್ತಜನರ ಪಾಲ ಅತಿ ದಯಾಪಾಂಗ ॥ ೧

ಚಪಲಚಿತ್ತರು ತಮ್ಮ ಜಪತಪದಿಂದು
ವಿಪರೀತ ಕರ್ಮಪೋಗುವ್ವದು ಹೀಗೆಂದು
ಅಪಹಾಸವಲ್ಲವೆ ಇದು ಏನು ಚಂದು
ಕೃಪಣವತ್ಸಲ ಕಾಯೋ ಅತಿದಯಾಸಿಂಧು ॥ ೨

ಫಲಬೇಡಿ ಸೇವೆ ಮಾಡುವ ದಾಸನಲ್ಲ
ಫಲಕೆ ಸೇವೆಯ ಸ್ವೀಕರಿಸುವ ಸ್ವಾಮಿ ನೀನಲ್ಲ
ಹಲವು ಮಾತೇನು ಈ ವಿವರವನೆಲ್ಲ
ತಿಳಿದ ಸರ್ವಜ್ಞರಿಂ ಮನ್ನಿಸೊ ಸೊಲ್ಲ ॥ ೩

ಸ್ತೋತ್ತಮರನಿಷ್ಟ ಪುಣ್ಯವು ನಿಜದಿ ಬಂದು
ಭೃತ್ಯರಾಸುಖಕೆ ಕಾರಣವಾಹುದೆಂದು
ಕ್ಲಿಪ್ತವಾಗಿದೆ ನಮಗೆ ಒಲಿದು ಭಕುತಿಯನಿಂದು
ಇತ್ತು ಪಾಲಿಸಬೇಕೋ ದೀನಜನಬಂಧೂ ॥ ೪

ಮರುದಂಶ ಮಧ್ವಮತಾಬ್ಧಿ ಚಂದಿರನೆ
ಪರಮ ಕಲ್ಯಾಣಗುಣ ರತ್ನಾಕರನೆ
ದುರಿತ ಜೀಮೂತಕೆ ಚಂಡಮಾರುತನೆ
ಸಿರಿ ಗುರುಗೋಪಾಲವಿಠ್ಠಲನ್ನ ಶರಣನೆ ॥ ೫



**ಮಂತ್ರಾಲಯ ಕೃತಾವಾಸಾನ್ ಪ್ರಹ್ಲಾದಾಂಶೇತಿ ವಿಶ್ರುತಾನ್ ।**
**ನೌಮ್ಯಹಂ ಟಿಪ್ಪಣೀಕಾರಾನ್ ರಾಘವೇಂದ್ರಯತೀನ್ ಗುರೂನ್ ॥**

೧೦೧

**ರಾಗ :– ಪೂರ್ವಿಕಲ್ಯಾಣಿ** **ಆದಿತಾಳ**

ಚಂದ್ರಾ ಗುಣಸಾಂದ್ರಾ – ರಾಘ
ವೇಂದ್ರಗುರು ಸದ್ವೈಷ್ಣವ ಕುಮುದಕೆ ॥ ಪ

ಶ್ರೀ ರಘುರಾಮ ಪದಾಂಬುಜ ಭೃಂಗ
ಮಾರುತಮತ ಶುಭವಾರಿನಿಧಿಗೆ ಪೂರ್ಣ ೧

ಶ್ರೀಕರಹರಿಯು ನಿರಾಕರಿಸುವ ದುಷ್ಟ
ಭೀಕರ ಮಾಯ್ಗಳ ಮುಖಕಮಲಕೆ ಪೂರ್ಣ ॥ ೨

ವರದಗೋಪಾಲವಿಠ್ಠಲನ ವಾರುತೆಗೆ
ಹರುಷ ಬಡುವ ಹರಿಭಕುತ ಚಕೋರಕೆ ಪೂರ್ಣ ॥ ೩



೧೦೨

(ಮೋಹನವಿಠ್ಠಲಾಂಕಿತ)

ರಾಗ–ಬೇಹಾಗ್ ಝಂಪೆತಾಳ

ಕಂಡು ಧನ್ಯನಾದೆ ಗುರುಗಳ—ಕಣ್ಣಾರೆ ನಾ
ಕಂಡು ಧನ್ಯನಾದೆ ಈ ಗುರುಗಳ ॥ ಪ

ತುಂಗಾತಟದಿ ಬಂದು ನಿಂತ
ಪಂಗು ಬಧಿರಾದ್ಯಂಗಹೀನರ
ಅಂಗಗೈಸಿ ಸಲಹುವಾ–ನರ
ಸಿಂಗನಂಘ್ರಿ ಭಜಕರಿವರ ॥ ೧

ಗುರುವರ ಸುಗುಣೇಂದ್ರರಿಂದ
ಪರಿಪರಿಯಲಿ ಸೇವೆಗೊಳುತ
ವರಮಂತ್ರಾಲಯ ಪುರದಿ ಮೆರವ
ಪರಿಮಳಾಖ್ಯ ಗ್ರಂಥಕರ್ತರ ॥ ೨

ಸೋऽಹಂ ಎನ್ನದೆ ಹರಿಯು ದಾ
ಸೋऽಹಂ ಎನ್ನಲು ಒಲಿದು ವಿಜಯ
ಮೋಹನವಿಠ್ಠಲನ್ನ ಪರಮ
ಸ್ನೇಹದಿಂದ ತೋರುವವರ ॥ ೩



ಅಘಂ ದ್ರಾವಯತೇ ಯಸ್ಮಾತ್ ವೇಂಕಾರೋವಾಂಛಿತಪ್ರದಃ ।
ರಾಘವೇಂದ್ರ ಯತಿಸ್ತಸ್ಮಾಲ್ಲೋಕೇ ಖ್ಯಾತೋ ಭವಿಷ್ಯತಿ ॥

## ೧೦೩

### (ವಾಸುದೇವವಿಠ್ಠಲಾಂಕಿತ)

ಶ್ರೀರಾಘವೇಂದ್ರ ತವಚರಣಂ ಭಜಾಮಿ
ಶರಣಾಗತ ಭವತರಣಮ್ ॥ ೧

ಶ್ರೀ ಸುಧೀಂದ್ರ ಕರಕಂಜಸಂಭವಮ್
ಸುಧಾಂಶುಮುಖ ಸಂಸ್ತುತ ಭಾವಿಭವಮ್ ॥ ೨

ಪಾವನ ವರಮಂತ್ರಾಲಯ ಸದನಂ
ಪತಿತ ಪಾವನ ಜಿತಮದನಮ್ ॥ ೩

ವಾಸುದೇವ ಕವಿ ಸನ್ನುತ ಚರಣಂ
ಮೂಲರಾಮ ವರಕರುಣಾಭರಣಮ್ ॥ ೪



## ೧೦೪

## (ಪ್ರಸನ್ನ ವೆಂಕಟ ಅಂಕಿತ)

### ಉದಯರಾಗ

ರಾಗಃ– ಭೂಪಾಳಿ ಝಂಪೆತಾಳ

ಏಳು ಶ್ರೀ ಗುರುರಾಯ ಬೆಳಗಾಯಿತಿಂದು
ಧೂಳಿ ದರುಶನವ ಕೊಡಿರಿ ಈ ವೇಳೆ ಶಿಷ್ಯರಿಗೆ ಪ

ಏಳು ಗುರುರಾಘವೇಂದ್ರ – ಏಳು ದಯಾಗುಣಸಾಂದ್ರ
ಏಳು ವೈಷ್ಣವ ಕುಮುದಕೆ ಚಂದ್ರ–ಶ್ರೀರಾಘವೇಂದ್ರ ॥ ಅ

ಅಶನವಸನಗಳಿಲ್ಲವೆಂಬ ವ್ಯಸನಗಳಿಲ್ಲ
ಮುಸುಕ್ಹಾಕಿ ಮೋಸದಲಿ ಮೋಹಿಸಿದೆವಲ್ಲ
ಅಸುರಾರಿಯ ಸ್ಮರಿಸದೆ ಪಶುವಿವೊಲು ಈ ದೇಹ
ವಸುಮತಿಯೊಳು ಬಹಳ್ಹಸಗೆಟ್ಟಿತಲ್ಲ ॥ ೧

ನಾನು ನನ್ನದು ಎಂದು ಹೀನ ಮನಸಿಗೆ ತಂದು
ಏನು ಮಾಡುವ ಕರ್ಮ ನಾನೇ ಅಹುದೆಂದು
ಸ್ವಾಮಿ ಕರ್ತೃತ್ವವನು ತಿಳಿಯಲಿಲ್ಲ ನಾನೆಂದು
ಏನೇ ಉದ್ಧರಿಸಯ್ಯ ದೀನದಯಾಸಿಂಧೂ ॥ ೨

ಅನ್ಯರಕ್ಕೈಯಲಿ ನಿನ್ನ ವರನಿರಿಸುವುದು
ಅನ್ಯಾಯವಾಯ್ತು ಪಾವನ್ನ ಗುರುರಾಯ
ಎನ್ನ ಮಾತಲ್ಲವಿದು ನಿನ್ನ ಮಾತೇಸರಿ
ಮನ್ನಿಸಿ ಸಲಹು ಪ್ರಸನ್ನ ಗುರುರಾಯ ॥ ೨

ವೇದಶಾಸ್ತ್ರಗಳನು ಓದಿ ಪೇಳ್ದವನಲ್ಲ
ಭೇದಾಭೇದವನು ತಿಳಿಯಲಿಲ್ಲ
ಸಾಧುಸಜ್ಜನರ ಸಹವಾಸ ಮೊದಲಿಲ್ಲ
ಹೀನಾಗಿ ಮಾನ ಮಾರಿಸಿದಿ ಉಳಿಸಲಿಲ್ಲ ॥ ೪

ಆಶೆಗೊಳಗಾದನೊ ಹೇಸಿ ಮನುಜನು ನಾನು
ಕ್ಲೇಶ ಭವಸಾಗರ ದೊಳಗೀಸುತಿಹೆನೂ
ಏಸುಜನ್ಮದಿ ಎನ್ನ ಗಾಸಿ ಮಾಡಿದಿ ಮುನ್ನ
ದಾಸನಾಗುವೆ ತೋರೊ ಪ್ರಸನ್ನವೆಂಕಟನ ॥



**ಮೂಕೋಪಿ ಯತ್ಪ್ರಸಾದೇನ ಮುಕುಂದಶಯನಾಯತೇ ।**
**ರಾಜ ರಾಜಾಯತೇ ರಿಕ್ತೋ ರಾಘವೇಂದ್ರಂ ತಮಾಶ್ರಯೇ ॥**

## ೧೦೫

## (ಜಗನ್ನಾಥವಿಠಲಾಂಕಿತ)

**ರಾಗ :– ಆರಭಿ** **ಆದಿತಾಳ**

ರಾಘವೇಂದ್ರ–ರಾಜಿತ ಗುಣಸಾಂದ್ರ ॥ ಪ

ರಾಘವೇಂದ್ರ ಗುರುರಾಯ ಘೋರಪಾ
ಪೌಘಗಳೆಣಿಸದೆ ಪಾಲಿಸು ಬಿಡದೆ ॥ ಅ

ಪ್ರಕಟಿಸಿ ತೋರಿದಿ ಮುಕುತಿಯ ಬೇಡಿದ
ಭಕುತನ ಯೋಗ್ಯತೆ ನಿಖಿಳಜನರಿಗೆ ॥ ೧

ಭೃತ್ಯಗೆ ಬಂದಪಮೃತ್ಯು ಕಳೆದ ಸುಖ
ವಿತ್ತು ಪೊರೆದ ಪುರುಷೋತ್ತಮ ದಾಸ ॥ ೨

ಹುತವಹ ಗುಣಿಸಿದ ರತುನಮಾಲಿಕೆಯು
ಕ್ಷಿತಿಪಗೆ ತಂದಿತ್ತತುಳಮಹಿಮನೆ ॥ ೩

ಕನಲಿದ ಜನಪನ ಅಸುನಯದಲಿ ನಿ
ನ್ನಣುಗನ ಮಾಡಿದ ಘನತರಚರಿತ ॥ ೪

ಚೂತಫಲರಸದಿ ಪೋತ ಮುಳುಗೆ ಮೃತ್ಯು
ಭೀತಿಬಿಡಿಸಿದ ಅನಾಥರಕ್ಷಕ ॥ ೫

ಕ್ಷಿಪ್ರದಿ ತೋರಿದಿ ವಿಪ್ರರ ಮಹಿಮೆಯ
ಆ ಪೃಥಿವೀಶಗೆ ಅಪ್ರತಿ ಗುರುವೇ ॥ ೬

ಪತಿತನ ನಿಜಯೋಗ್ಯತೆಯನರಿತು ಸ
ದ್ಗತಿಯ ಪಾಲಿಸಿದೆ ಯತಿಕುಲವರ್ಯ ॥ ೭

ಮಳಲ ಮಾರ್ಗದೊಳು ಲಲನೆ ಪ್ರಸೂತಿಸೆ
ಪುಲಿನ ಕಮಂಡಲದೊಳು ಜಲತೋರ್ದೆ ॥ ೮

ಬಿಸಿಲಿಂದಳುವಾ ಶಿಶುವಿಗೆ ಚೈಲಾ
ಗಸದಲಿ ನಿಲಿಸಿದ್ಯೋ ಅಸಮಮಹಿಮನೆ ॥ ೯

ದ್ವಾದಶವರ್ಷ ಅನ್ನೋದಕ ಸಲಿಸಿದೆ
ಮೇದಿನಿಪತಿಗೆ ಮಹಾ ದಯವಂತ ॥ ೧೦

ಸಾದರದಲಿ ಹಸ್ತೋದಕ ಕೊಡಲು ನಿ
ಷೇಧಗೈಯದೆ ನಿವೇದಿಪೆ ಹರಿಗೆ ॥ ೧೧

ಪಾದೋದಕವ ದಿನೇ ದಿನೇ ಸೇವಿಪ
ಸಾಧುಗಳ್ವ್ಯಾಧಿಗಳಿರದೆ ನೀನಳಿವೆ ॥ ೧೨

ಯತಿವರ ದೂರದಿ ಮೃತಗೈಯಲಾಗಸ
ಪಥದಲಿ ಕಂಡು ನುತಿಸಿದ ಮಹಿಮ ॥ ॥೧೩॥

ವಿಪಿನದಿ ಚಂಡಾತಪದಿ ಬೆಂದ ಕಾ
ಶ್ಯಪಿಸುತನನುಳುಹಿದ ಕೃಪಣಜನಾತ್ಮ ॥ ॥೧೪॥

ಅನಿವೇದಿತ ಭೋಜನ ವಸ್ತುಗಳಿಂ
ದನುಭವ ಮಾಡಿಸಿದನುಪಮ ಚರಿತ ॥ ॥೧೫॥

ಭಾಷಾತ್ರಯಯುತ ವ್ಯಾಸೋಕ್ತಿಗಳ ಪ್ರ
ಕಾಶವಗೈಸಿದ ಭೂಸುರವಿನುತ ॥ ॥೧೬॥

ದಾತಗುರು ಜಗನ್ನಾಥವಿಠ್ಠಲನ ॥೧೭॥
ದೂತನೆ ಮಂತ್ರನಿಕೇತನನಿಲಯ



## ೧೦೬

## (ಪ್ರಾಣೇಶ ವಿಠ್ಠಲಾಂಕಿತ)

**ರಾಗ-ವರಾಳಿ** **ಆಟತಾಳ**

ರಾಘವೇಂದ್ರ ನಿನ್ನ ಪಾದಸರಸಿಜಕೆ
ಬಾಗುವೆ ಮನ್ಮನದ್ದುರಿಕೆ ಪೂರೈಸೋ-ರಾಘವೇಂದ್ರ ॥ ॥ಪ॥

ವಾಸುದೇವಾರ್ಚಕ ಭೂಸುರವಂದಿತ
ದೋಷವ ಕಳೆವದು ದೇಶಿಕವರ್ಯ ॥ ॥೧॥

ವಿಷಯಂಗಳಿಲ್ಲಿ ದಹಿಸಿ ಯೋಗಮಾರ್ಗದಿಂ
ವಸುದೇವ ಪುತ್ರ ನೊಲಿಸಿಕೊಂಡ ಶಕ್ತ॥ ॥೨॥

ಭೂತಪ್ರೇತಗಳ ಬಲಾತುರದಲಿ ಕಳೆ
ವಾತಾಂಗಮಹಿಮನೆ ಭೂತಲದೊಳಗೆ ॥ ॥೩॥

ಅಂಗಜಶರ ದೂರ ಮಂಗಳ ವಿಗ್ರಹ
ತುಂಗಾತೀರವಾಸ ಪಿಂಗಳ ತೇಜ ॥ ॥೪॥

ದಂಡ ಕಾಷಾಯ ಕಮಂಡಲಧರ ಪ್ರ
ಚಂಡ ಮಹಾತ್ಮ ಸುಪಂಡಿತರೊಡೆಯ॥ ॥೫॥

ಸಾರುವ ಶರಣರ ಘೋರಿಸುತಿಪ್ಪ ಸಂ
ಸಾರ ಕಡಲಿಗೆ ಶರೀರ ಸಂಭವನೆ॥ ॥೬॥

ಮೊರೆಹೊಕ್ಕ ದಾಸರ ಮರೆಯಾದೆ ಸಲಹಯ್ಯ
ಪರಮತ ಉರಗಕ್ಕೆ ಗರುಡನೆನಿಪ॥ ॥೭॥

ತಂದೆ ಪಾಲಿಸೊ ದಯಾಸಿಂಧು ಜಗದ್ಗುರು
ಮಂದಮತಿಗಳೆಂಬ ಇಂಧನಕ್ಕನಲ॥ ॥೮॥

ಪಟುವಪ್ಪ ಪ್ರಾಣೇಶವಿಠಲನ ನಿಜ ದಾಸ
ಸಟೆಯಲ್ಲ ಸಂಸಾರ ಕಟಕಟಿ ಬಿಡಿಸೋ॥ ॥೯॥



ಶ್ರೀಮದ್ರಾಮಪದಾರವಿಂದ ಮಧುಪಃ ಶ್ರೀಮಧ್ವವಂಶಾಧಿಪಃ ।
ಸಚ್ಛಿಷ್ಯೋಡುಗಣೋಡುಪಃ ಶ್ರಿತಜಗದ್ಗೀರ್ವಾಣ ಸತ್ಪಾದಪಃ ॥
ಅತ್ಯರ್ಥಂ ಮನಸಾಕೃತಾಚ್ಯುತ ಜಪಃ ಪಾಪಾಂಧಕಾರಾತಪಃ ।
ಶ್ರೀ ಮತ್ಸದ್ಗುರು ರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂ
ಮಂಗಳವಮ್ ॥

(ಮಂಗಳಾಷ್ಟಕದಿಂದ)

## ೧೦೭

(ಶ್ರೀವಿಠಲಾಂಕಿತ)

ರಾಗ-ಯದುಕುಲಾಂಬೋಧಿ ಆದಿತಾಳ

ರಾಘವೇಂದ್ರ ಗುರುರಾಯರ ಸೇವಿಸಿರೋ
ಸೌಖ್ಯದಿ ಜೀವಿಸಿರೋ॥ ॥ಪ॥

ತುಂಗಾ ತೀರದಿ ರಘುರಾಮನ ಪೂಜಿಪರೋ
ನರಸಿಂಗನ ಭಜಕರೋ॥ ॥ಅ॥

ಶ್ರೀ ಸುಧೀಂದ್ರ ಕರ ಸರೋಜ ಸಂಜಾತಾ–ಧರೆಯೊಳಗೆ ಪ್ರಖ್ಯಾತ
ದಾಶರಥಿಯ ದಾಸತ್ವವ ತಾ ವಹಿಸೀ -ದುರ್ಮತಗಳ ಜಯಿಸೀ
ಶ್ರೀಸಮೀರ ಮತ ಸಂಸ್ಥಾಪಕರಾಗಿ- ನಿಂದಕರನು ನೀಗಿ
ಭೂಸುರರಿಗೆ ಸಂಸೇವ್ಯ ಸದಾಚರಣೆ- ಕಂಗೊಳಿಸುವ ಕರುಣೇ ॥೧॥

ಕುಂದದೆ ವರಮಂತ್ರಾಲಯದಲ್ಲಿವ- ಕರೆದಲ್ಲಿಗೆ ಬರುವ
ಸಂದರುಶನ ಮಾತ್ರದಲಿ ಮಹತ್ಪಾಪ- ಪರಿದೋಡಿಸಲಾಪ

ವೃಂದಾವನಗತ ಮೃತ್ತಿಕೆ ಜಲಪಾನ- ಮುಕ್ತಿಗೆ ಸೋಪಾನ
ಮಂದಭಾಗ್ಯರಿಗೆ ದೊರೆಯದಿವರ ಸೇವಾ- ಶರಣರ ಸಂಜೀವ॥ ॥೩॥

ಶ್ರೀದವಿಠ್ಠಲನ ಸನ್ನಿಧಾನ ಪಾತ್ರ -ಸಂಸ್ತುಸಿದ ಪಾತ್ರ
ಮೋದ ಪಡಿಸುತಿಹ ತಾಪಸಿವರರಲ್ಲಿ- ಈತಗೆ ಸರಿಯಿಲ್ಲಿ
ಮೇದಿನಿಯೊಳಗಿನ್ನರಸಲು ನಾ ಕಾಣೆ- ಪುಸಿಯಲ್ಲೆನ್ನಾಣೆ
ಪಾದಸ್ಮರಣೆಯ ಮಾಡದವನೇ ಪಾಪಿ- ನಾ ಪೇಳುವೆ ಸ್ಥಾಪಿ ॥೪॥



## ೧೦೮

(ಅಭಿನವ ಜನಾರ್ದನವಿಠ್ಠಲಾಂಕಿತ)

ರಾಗ—ಮಾಂಡ್ ಆದಿತಾಳ

ತುಂಗಾ ತೀರದಿ ರಾಜಿಪ ಯತಿಯಾ
ನೀರೆ ನೋಡೋಣ ಬಾ ॥ಪ॥

ವೃಂದಾವನದೊಳಗಿರುವಾತ
ವೃಂದಾರಕರನು ಪೊರೆವ
ವೃಂದಗುಣಗಳಿಂ ಮೆರೆವ
ವೃಂದಾರಕತರು ಎನಿಸಿದ ಸುಜನಕೆ ॥೧॥

ಮಾರುತ ಮತಾಂಬುಧಿ ಚಂದ್ರ-ದಿನ
ಕರ ಅಘತಮಕೆ ರವೀಂದ್ರ
ದುರುಳ ಮತಾಹಿಖಗೇಂದ್ರ
ಗುರು ಕರುಣಾಕರ ಶ್ರೀರಾಘವೇಂದ್ರ ॥೨॥

ರವಿ ಶಶಿ ಕುಜ ಬುಧ ಗುರುವೆ
ಕವಿ ರಾಹು ಧ್ವಜ ಬಲವೇ
ಇವರ ದರುಶನಕೆ ಫಲವೇ ಆಭಿ
ನವ ಜನಾರ್ದನ ವಿಠಲನ ದಯವೇ ||೩||



೧೦೯

(ಜನಾರ್ದನ ವಿಠ್ಠಲಾಂಕಿತ)

ರಾಗ-ಕಾಂಬೋಧಿ ಝಂಪೆತಾಳ

ಪಾದವನು ಕಂಡು ಪಾವನನಾದೆನೋ
ವೇದಾರ್ಥ ತಿಳಿದ ಗುರುರಾಘವೇಂದ್ರರ ||ಪ||

ಮನೋ ಭಾವವನು ಕೊಡುವ ಘನಭಕುತರಿಗೆ ಇಂದು
ದನುಜ ದಲ್ಲಣಂಘ್ರಿ ಮನದಿ ಭಜಿಸಿ
ಕನಸಿನಲಿ ಕನಕರಿಸಿ ವನಜನಾಭನ ಪದವ
ವಿನಯದಿಂದಲಿ ತೋರಿ ಮನ ಮೋದಪಡಿಸುವವರ ||೧||

ಸೀತಾರಾಮರ ಪೂಜೆ ಆತುರದಲಿ ಮಾಡಿ
ನೀತ ಮಾರ್ಗದಿ ಜಾತರಹಿತನಾದ
ಆತುರವ ಪರಿಹರಿಸಿ ಶಾತ ಕುಂಭನಂತೆ
ಆತುಮನ ಮಾಡುವ ಅನಿಮಿತ್ತ ಬಂಧುವಿನ ||೨||

ಗುರು ಸುಧೀಂದ್ರರ ವರಕುಮಾರರಿವರು
ಪರಲೋಕ ಸುಖಕೊಡುವ ಪರಮ ಕರುಣಿ

ಧರೆಯೊಳಗೆ ಸರಿಗಾಣೆ ಜನಾರ್ದನ ವಿಠ್ಠಲನ್ನ
ಸ್ಥಿರವಾಗಿ ಭಜಿಸುವ ಗುರುಶಿಷ್ಯಪಾಣಿಯ ಪಾದದ್ವಯವ ೩



## ೧೧೦

### (ವೆಂಕಟೇಶ್ವರ ವಿಠ್ಠಲಾಂಕಿತ)

**ರಾಗ–ಮಧ್ಯಮಾವತಿ** **ಅಟತಾಳ**

ವಸುಧೆಯೊಳಗೆಣೆಗಾಣೆನೋ ಈ ಗುರುಗಳಿಗೆ
ಅಸುಪತಿ ಸಮದಿಂದ್ಧೈಸುವ ಕುಶಲರಿಗೆ ॥ಪ॥

ಶ್ರೀರಮಣನ ಪಾದಸಾರಸ ಮಧುಪ
ಸೂರಿಜ ವಿನುತ ಶ್ರೀ ರಾಘವೇಂದ್ರರಿಗೆ॥ ॥೧॥

ಬಂದ ಜನರಿಗಾನಂದಗರೆವ
ಕುಂದುರಹಿತ ಕಾಮನಂದಿಗಳೊಡೆಯರಿಗೆ ॥೨॥

ದಿಟ್ಟ ವೆಂಕಟೇಶ ವಿಠ್ಠಲನ ಪಾದವ
ಮುಟ್ಟಿ ಭಜಪರೊಳು ಶ್ರೇಷ್ಠರೆನಿಸುವರಿಗೆ ॥೩॥



**ಕರ್ಮಂದೀಂದ್ರ ಸುಧೀಂದ್ರ ಸದ್ಗುರು ಕರಾಂಭೋಜೋದ್ಭವಃ ಸಂತತಮ್।**
**ಪ್ರಾಜ್ಯ ಧ್ಯಾನವಶೀಕೃತಾಖಿಲ ಜಗದ್ವಾಸ್ತವ್ಯ ಲಕ್ಷ್ಮೀಧವಃ ॥**

ಸಚ್ಛಾಸ್ತ್ರಾರ್ಥಿ ವಿದೂಷಕಾಖಿಲ ಮೃಷಾವಾದೀಭ ಕಂಠೀರವಃ ।
ಶ್ರೀಮತ್ಸದ್ಗುರು ರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂ
ಮಂಗಲಮ್ ॥೨॥
(ಮಂಗಳಾಷ್ಟಕದಿಂದ-ಶ್ಲೋಕ ೨)

೧೧೧

(ರಮಾಪತಿವಿಠ್ಠಲಾಂಕಿತ)

ರಾಗ–ಕಾಪಿ ಆದಿತಾಳ

ಗುರುರಾಯ–ಗುರುರಾಯ ॥ಪ॥

ದುರಿತರಾಶಿಯ ಕಳೆಯೊ ದಯಾಸಾಂದ್ರ–
ರಾಘವೇಂದ್ರ ॥ಅ॥

ನಮಿಸುವೆ ನಿನ್ನಡಿಗಮಿತವಿಧದಿ
ಮಮಶ್ರಮಗಳ ಕಳಯೊ ಹೇ ಸುವಿಮಲತೇಜ ॥೧॥

ಆರ್ತಜನರ ಇಷ್ಟಾರ್ಥಗಳನ್ನೆಲ್ಲ
ಪೂರ್ತಿಗೊಳಿಸಿ ಕೃತಾರ್ಥರ ಮಾಡುವಿ ॥೨॥

ಪವನರ ವರಮತ ಪ್ರವಿರನೆನಿಸಿ
ಶ್ರೀವರನರ್ಚಿಸುತಿಹ ಯತಿಕುಲತಿಲಕ ॥೩॥

ಸರ್ವತ್ರದಿ ಹರಿ ಇರುವುದ ನೋಡಿ
ಪೂರ್ವ ದೇವತೆಗಳ ಗರ್ವಹರನೆ ಮದ್ಗುರುರಾಯ ॥೪॥

ನೀನೆ ಗತಿಯೋ ಹೇ ದೀನವತ್ಸಲನೆ
ಜ್ಞಾನವನು ಕೊಡು ನಾನೆಂಬುದ ಕಳೆ ॥೫॥

ಪತಿತನು ನಾ ನಿಮ್ಮ ತಿರುವುಗುಣಗಳ
ತುತಿಸಬಲ್ಲೆನೆ ಯತಿಕುಲವರ್ಯ ||೬||

ಪಾರುತಿವರದ ರಮಾಪತಿವಿಠ್ಠಲನ
ತಾರತಮ್ಯ ತಿಳಿಸ್ಯಾರಾಧನೆ ಕೊಡು ||೭||



## ೧೧೨

### ಸುಳಾದಿ

(ಗುರುವಿಜಯವಿಠ್ಠಲಾಂಕಿತ)

||ಧ್ರುವತಾಳ||

ಘನದಯಾನಿಧಿಯಾದ ಗುರು ರಾಘವೇಂದ್ರ ನಿಮ್ಮ
ವನಜಪಾದಯುಗಕೆ ನಮೋ ನಮೋ
ಜನುಮಾರಭ್ಯವಾಗಿ ಅಭಿನಮಿಸದಲಿಪ್ಪ
ಮನುಜನ ಅಪರಾಧವೆಣಿಸದಲೆ
ವನಧಿ ಪೋಲುವ ಕರುಣಿ ಗೋವತ್ಸನ್ಯಾಯದಿಂದ
ನಿನಗೆ ನೀನೇ ಬಂದು ಸ್ವಪ್ನದಲ್ಲಿ
ಸನಕಾದಿ ಮುನಿಗಳ ಮನನಕೆ ಸಿಲುಕದ
ಇನಕೋಟಿಭಾಸ ವೇದೇಶ ಪ್ರಮೋದತೀರ್ಥ
ಮುನಿಗಳಿಂದ ಕೂಡಿ ಸಂದರುಶನವಿತ್ತು
ವಿನಯೋಕ್ತಿಗಳ ನುಡಿದ ಕೃತ್ಯದಿಂದ
ಆನಂದವಾಯಿತು ಅಘದೂರನಾದೆನೆಂದು
ದನುಜಾರಿ ಭಕುತಿರಮಣಿಯೆ ಗುಣಿಯೆ

ಎನಗಾಗೆ ನಿಮ್ಮ ಕರುಣಕಟಾಕ್ಷ ವೀಕ್ಷಣಕ್ಕೆ
ಅನುಪಮಮಹಿಮಾನೆ ಅನಲಪ್ರಿಯ
ಗುಣಗಣಪೂರ್ಣ ಗುರುವಿಜಯವಿಠ್ಠಲ ನಿಮ್ಮ
ಘನವಾದಿ ಬಲದಿ ಎನಗೆ ಸೂಚಿದನೆಂದು ||೮||

||ಮಟ್ಟತಾಳ||

ಸುಖತೀರ್ಥರ ಮತವೆಂದೆಂಬ ಧ್ವಜವನ್ನು
ವಿಖನಸಾಂಡವ ಮಧ್ಯಪ್ರತಿಯಿಲ್ಲದೆ ಮೆರೆಯೆ
ಪಖರಹಿತವಾದ ಪಕ್ಷಿಯು ತನ್ನಯ
ಪಖಚಿನ್ಹ್ಯ ಜನಿತ ವ್ಯಾಹಿತನಿಂದಲಿ ಧ್ವಜವ
ಪ್ರಕಟದಿ ಜರಿಸುವ ಯತ್ನದಿಂದ ದುರುಳ
ಸಕುಟಿಲರಾದ ಆ ವಿದ್ಯಾರಣ್ಯ
ಮುಖರೆಲ್ಲ ಬರಲು ಆಮಸ್ಥಿತ ನಿಶ್ಚಯದಿ
ಮುಖಶತ್ರ ನಿಜನೆನಿಪ ಜಯರಾಯಾಚಾರ್ಯ
ಪ್ರಕಟ ಗ್ರಂಥಗಳೆಂಬ ಪಾಶಗಳಿಂದಲ್ಲಿ
ಯುಕುತಿಯಿಂದಲಿ ಬಿಗಿದು ವೀರಧ್ವನಿಯುಗೈಯೆ
ಉಕುತಿಗೆ ನಿಲ್ಲದಲೆ ಮೊಲದಂತೆ ಜರಿದು
ದಿಕ್ಕು ದಿಕ್ಕಿನಲಿ ಪಲಾಯನರಾಗೆ
ತ್ಯಕುತ ಲಜ್ಜೆಯಿಂದಲಿ ಹತವಾಶೀಷ್ಯನಾ
ಗ ಕುಂಠಿತವಾದ ಬಲವೀರ್ಯನು ಮೇರು
ಶಿಖರ ಎತ್ತುವೆನೆಂಬ ಸಾಹಸದಿಂದಲಿ
ನಿಕಟಮತಿಯುಕ್ತ ದುರುಳರು ರೋಷದಲಿ ಕು
ಯುಕುತಿಗಳಿಂದಲಿ ಸಂಚರಿಸುತ ಬರಲು
ಲಕುಮಿಪತಿಯ ನೇಮ ತಿಳಿದ ಘೌತ್ರ ನೀನು
ಈ ಖಂಡದಿ ಬಂದು ದ್ವಿಜಜನ್ಮವ ಧರಿಸಿ
ಪ್ರಖ್ಯಾತವಾದ ನ್ಯಾಯಾಮೃತವನ್ನು

ತರ್ಕಶಾಸ್ತ್ರವ ಪಂಡಿತ್ಯಕೆ ಪರಿಪಾಕ ಸೋಪಲಾದ
ಮಿಥ್ಯಾ ಗ್ರಂಥಸಂಕುಲ ನಿರ್ಮಿತ ದು
ನಾಕುತಿಗಳೆಂಬ ಗಿರಿಗಳ ಛೇದಿಸಿ
ಈ ಕುಂಭಿನಿ ಮಧ್ಯ ಪ್ರತಿಬಿಟ್ಟಿದೆ ಸೇರಿದೆ
ಭಕುತರಾಗ್ರೇಸರನೆ ಭಾವಿ ಬುಧಕ ಶ್ರೀಜಾ
ಸಖಿಶಿಖಿಪರಿಪೂರ್ಣ ಗುರುವಿಜಯವಿಠ್ಠಲ ನಿನ್ನ
ಭಕುತಿಗೆ ವಶನಾಗಿ ಇತ್ತಿಹ ಕೀರ್ತಿಯನು ||೩||

## ||ತ್ರಿವಿಡಿ ತಾಳ||

ಕಲಿಯುಗದಿ ಜನರು ಕಲಿಕಲ್ಮಷದಿಂದ
ಬಲವಂತವಾದ ತ್ರಿವಿಧತಾಪಗಳನು
ವಿಲಯಗೈಸುವ ಉಪಾಯವನರಿಯದೆ
ಮಲಿಯುಕ್ತವಾದ ಭವಶರಧಿಯಲ್ಲಿ
ನೆಲೆಯಾಗಿ ಮಗ್ನರಾಗಿ ನಿಪ್ಪತ್ರಿವರ್ತ್ಮಾವನ್ನು
ತಿಳಿಯದೆ ದುಃಖಪಡುವ ಸುಜನಾ
ವಳಿಗೆ ತಾರಕನಾಗಿ ಈ ನದಿಯ ತೀರದಲ್ಲಿ
ನಿಲಯಾವಲ್ಲದೆ ನಿನಗೆ ಅನ್ಯಕೃತ್ಯಗಳಿಲ್ಲ
ನಳಿನಸಂಭವಜನಕ ಗುರುವಿಜಯವಿಠ್ಠಲ ನಿನಗೆ
ಒಲಿದಿಪ್ಪಾಧಿಕಾಧಿಕವಾಗಿ ಬಿಡದೆ ||೪||

## ||ಅಟ್ಟ ತಾಳ||

ಸೂಚನೆ ಮಾಡಿದ ಸೊಬಗಿನ ತೆರದಂತೆ
ಯೋಚನೆಯಾತಕ್ಕೆನ್ನನು ಉದ್ಧರಿಪ್ಪುದಕೆ
ಉಚ್ಚ ಜ್ಞಾನಾನಂದ ಬಲವೀರ್ಯನು ನೀನು
ನೀಚವಾದ ದೇಹಧಾರಣೆಯನು ಮಾಡಿ ಆ

ಸೂಚಿತವಾಗಿದ್ದ ಕಾಮಕ್ರೋಧಂಗಳು
ಆಚರಣೆಯ ಮಾಳ್ಪ ಅಧಮನಾದವ ನಾನು
ಸೋಚರಿತ್ರವಾದ ಯಾಚಿಸುವದ ಮನುಜಂಗೆ
ನೀಚ ಅನುಚಿತವಾದ ನರನು ಅಧಿಕನೆಂದು
ಭೂಚಕ್ರದಲಿ ಅವರ ದೇಹತೆತ್ತವನಾಗಿ
ಆಚರಿಸದೆ ಬಲು ಹೀನ ಕೃತ್ಯಂಗಳು
ಸೂಚನೆ ಮಾಡಿದ್ದು ಸೊಬಗು ನೋಟದಲಿ
ಮೋಚನೆ ಮಾಡಿದ್ದು ಸ್ವಾರ್ಥಕ ಮಾಳ್ಪದು
ಯೋಚನೆ ಮಾಡುವುದು ಭವಬಂಧನದಲಿಂದ
ಶ್ರೀಚಕ್ರಪಾಣಿ ಗುರುವಿಜವಿಠ್ಠಲರೇಯನೆ
ಯೋಚನೆ ಮಾಡುವ ಯೋಗವ ಬೋಧಿಸು ॥ ॥೪॥

॥ಆದಿತಾಳ॥

ಪರಿಶುದ್ಧವಾದ ನಿನ್ನ ಭಕುತಿಗೆ ವಶನಾಗಿ
ಹರಿ ತನ್ನ ಪರಿವಾರ ಸಮೇತನಾಗಿ ನಿಂದು
ಮೊರೆಹೊಕ್ಕ ಜನರಿಗೆ ಪರಿಪೂರ್ಣ ಸುಖವಿತ್ತು
ಪರಿಪರಿಕೀರ್ತಿಗಳು ತಂದೀವ ನಿಮಗೆಂದು
ಪರಮಾಪ್ತನಾಗಿ ತವಪಾದ ಸಾರಿದನು
ದೂರನೋಡದಲೆ ಕರುಣವ ಮಾಡಿ ವೇಗ
ಸುರರಿತ್ತ ಶಾಪದಿಂದ ಕಡಿಗೆ ಮಾಡಿ ಎನ್ನ ಹೃ
ತ್ಸರಸಿಜದಲ್ಲಿ ಹರಿಪೊಳೆವಂತೆ ಮಾಡುವುದು
ಪರಿಪೂರ್ಣ ಕೃಪಾನಿಧೆ ಗುರುವಿಜಯವಿಠ್ಠಲನ್ನ
ಶರಣರ ಅಭಿಮಾನಿ ಔದಾರ್ಯ ಗುಣಮಣಿ ॥೫॥

||ಜತೆ||

ಸುರತಿಲಕನೆ ಗುರುರಾಘವೇಂದ್ರಪ್ರಭು
ಸುರಕಲ್ಪತರು ಗುರುವಿಜಯವಿಠಲಪ್ರಿಯ ||

❋

೧೧೩

(ವೆಂಕಟವಿಠ್ಠಲಾಂಕಿತ)

ರಾಗ-ಕಲ್ಯಾಣಿ ಆದಿತಾಳ

ವೃಂದಾವನ ನೋಡಿರೋ- ಗುರುಗಳ
ವೃಂದಾವನ ಪಾಡಿರೋ || ||ಪ||

ವೃಂದಾವನ ನೋಡಿ- ಆನಂದ ಮುದವೇರಿ
ಚೆಂದದಿ ದ್ವಾದಶ ಪೌಂಡ್ರಾಂಕಿತಗೊಂಬ || ||ಅ||

ತುಂಗಭದ್ರಾನದಿಯ- ತೀರದಿ ಇದ್ದ
ತುಂಗಮಂಟಪ ಮಧ್ಯದಿ
ಶೃಂಗಾರ ತುಲಸಿ ಪದ್ಮಾಕ್ಷಸರಗಳಿಂದ
ಮಂಗಳಕರ ಮಹಾಮಹಿಮೆಯಿಂದೊಪ್ಪುವ || ||೧||

ದೇಶ ದೇಶದಿ ಮೆಚ್ಚುತ-ಇಲ್ಲಿಗೆ ಬಂದು
ವಾಸವಾಗಿ ಸೇವಿಪ
ಭಾಷೆ ಕೊಟ್ಟಂದದಿ ಬಹುವಿಧವರಗಳ
ಸೂಸುವ ಕರಮಹಾಮಹಿಮೆಯಿಂದೊಪ್ಪುವ|| ||೨||

ನಿತ್ಯ ಸನ್ನಿಧಿ ಸೇವಿಪ-ಭಕ್ತರಿಗೆಲ್ಲ
ಮತ್ತಭೀಷ್ಟವ ಕೊಡುತ

ಸತ್ವಾಧಿಗುಣಸಿಂಧು ವೆಂಕಟವಿಠ್ಠಲನ
ನಿತ್ಯಸನ್ನಿಧಿಯಿಂದ ನಿರುತ ಪೂಜಿಸುಗೊಂಬ ॥ ॥೩॥



## ೧೧೪

(ಕಮಲೇಶವಿಠ್ಠಲಾಂಕಿತ)

**ರಾಗ-ಬೇಹಾಗ್** **ಆದಿತಾಳ**

ಶರಣರ ಸುರಭೂಜ-ಗುರುರಾಜ । ॥ಪ॥

ವರಮಂತ್ರಾಲಯಪುರಮಂದಿರ ಸುಂ
ದರ ಮುನೀಂದ್ರ ಭಾಸ್ಕರಸಮತೇಜ ॥೧॥

ಕಾಮಿತಾರ್ಥಗಳ ಕಾಮಧೇನುವಿನ
ಸೀಮ ಮೀರಿ ಕೊಡುವ ಮಹರಾಜ ॥೨॥

ಭೇಶಕೋಟಿಸಂಕಾಶನಾದ ಕಮ
ಲೇಶವಿಠ್ಠಲನ ದಾಸನೆ ಸಹಜ ॥೩॥



## ೧೧೫

(ಗುರುಶ್ರೀಶವಿಠ್ಠಲಾಂಕಿತ]

**ರಾಗ–ಮೋಹನ** **ಝಂಪೆತಾಳ**

ನೋಡೆಲೆ ಮನವೆ–ಕೊಂಡಾಡು ಗುರುಗಳ ಪಾದ
ಈಡು ಇಲ್ಲವೊ ಪುಣ್ಯಕೆ । ॥ಪ॥

ನಾಡೊಳಗೆ ಗುರುರಾಘವೇಂದ್ರರಾಯರ ಸೇವೆ
ಮಾಡಿದವ ಪರಮಧನ್ಯ–ಮಾನ್ಯ ||೬||

ನಿಷ್ಠೆಯಿಂದಲಿಸ್ಮರಿಸೆ–ಕಷ್ಟಗಳು ದೂರ–ಮಾಡೋ
ಇಷ್ಟಗಳ ಪೂರೈಪರೋ
ಅಷ್ಟಸೌಭಾಗ್ಯವನೆ ಕೊಟ್ಟು–ಸುಜನರಿಗೆ ಶ್ರೀ
ವಿಷ್ಣುದಾಸ್ಯವ ತೋರ್ಪರೋ
ದೃಷ್ಟಿಯಿಂದಲಿ ನೋಡಲನೇಕ ಜನ್ಮದ ಪಾಪ
ಬಿಟ್ಟು ಪೋಪುದು ಕ್ಷಣದಲಿ
ಎಷ್ಟು ಹೇಳಲಿ ಇವರ ನಿಷ್ಠ ಮಹಾತ್ಮ್ಯೆಯನು
ದುಷ್ಟರಿಗೆ ದೊರೆಯದಿವರ ಸೇವಾ ||೭||

ಹಲವು ಕ್ಷೇತ್ರಗಳೇಕೆ ಹಲವು ತೀರ್ಥಗಳೇಕೆ
ಫಲ ಸುಲಭದಲ್ಲಿರಲು
ಬಲವು ಇದ್ದದ್ದರೊಳು ಪ್ರದಕ್ಷಿಣೆ ಸುಪದಜಲ
ತಲೆಯಲ್ಲಿ ಧರಿಸಿ ನಿತ್ಯ
ಮಲರಹಿತನು ಆಗಿ ದಂಡ ಪ್ರಣಾಮವ ಮಾಡೆ
ಒಲಿವರು ಕರುಣದಲಿ ಬೇಗ
ಜಲಜನಾಭನು ನಾಲ್ಕು ರೂಪದಿಂದಿವರಲ್ಲಿ
ಸಿಲುಕಿ ಪೂಜೆಗೊಂಬನು ಸತತ– ಮೋಕ್ಷದಾತಾ॥ ||೮||

ಹರಿದಾಸರಿದ್ದ ಸ್ಥಳ ವರ ಕಾಶಿಮೊದಲಾದ
ಕುರುಕ್ಷೇತ್ರಕಿಂತಧಿಕವೋ
ಸುರಯತಿ ಮುನಿಗಳು ಇಲ್ಲಿಹರು ವೈಕುಂಠ
ಸರಿಮಿಗಿಲು ಎಂದೆನಿಪುದೋ
ಪರಮ ಸುಜ್ಞಾನಿಗಳಿಗೀ ಫಲವು ದೊರಕುವುದು
ತರತಮದಿ ಇತರ ಜನಕೆ

ಗುರುಶ್ರೀಶವಿಠ್ಠಲನು ಇವರ ರೂಪ ನಾಮದಲಿ
ಪರಿಪರಿಯ ವರವಗರೆವಾ- ಪೊರೆವಾ॥ ॥೩॥



ಸಾಲಂಕಾರಕ ಕಾವ್ಯ ನಾಟಕ ಕಲಾ ಕಾಣಾದ ಪಾತಂಜಲ।
ತ್ರ್ಯಯರ್ಥಸ್ಮೃತಿ ಜೈಮಿನೀಯ ಕವಿತಾ ಸಂಗೀತ ಪಾರಂಗತಃ॥
ವಿಪ್ರಕ್ಷತ್ರ ವಿಡಂಘ್ರಿಜಾತ ಮುಖರಾನೇಕ ಪ್ರಜಾ ಸೇವಿತಃ।
ಶ್ರೀಮತ್ಸದ್ಗುರು ರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂ
ಮಂಗಲಮ್ ॥೩॥

(ಮಂಗಳಾಷ್ಟಕ)

೧೧೭

(ತಂದೆ ಶ್ರೀಪತಿ ವಿಠ್ಠಲಾಂಕಿತ)

**ರಾಗ-ಮೋಹನ** **ಅಟ್ಟತಾಳ**

ವೃಂದಾವನದಲಿ ರಾಜಿಪ ಯತಿವರನ್ಯಾರೇ- ಪೇಳಮ್ಮಯ್ಯ॥ ॥ಪ॥

ಇಂದಿರೆಯರಸನ ಚಂದದಿ ಭಜಿಸುವ
ಕುಂದುರಹಿತ **ರಾಘವೇಂದ್ರ**-ಕಾಣಮ್ಮ ॥ಅ॥

ಮಂತ್ರಾಲಯಕೃತ ಮಂದಿರರೆನಿಸುವನ್ಯಾರೇ- ಪೇಳಮ್ಮಯ್ಯ
ತಂತ್ರದೀಪಿಕಾ ಗ್ರಂಥ ಕರ್ತ ನ್ಯಾರೇ- ಪೇಳಮ್ಮಯ್ಯ
ಕುಂತಿಪಿತನ ಸತ್ಪಂಥದಿ ಭಜಿಸುವನ್ಯಾರೇ- ಪೇಳಮ್ಮಯ್ಯ
ಚಿಂತಿತಫಲದ ದುರಂತಶಕ್ತ ಜಯವಂತ ನೀತ ಅಘಶಾಂತ-ಕಾಣಮ್ಮ ॥೧॥

ಶ್ರೀ ಸುಧೀಂದ್ರ ಕರಕಮಲಜನೆನಿಸುವನ್ಯಾರೇ–ಪೇಳಮ್ಮ ಮ್ಮ ಯ್ಯ
ತಾ ಸ್ವಪ್ನ ದಿ ಮಂತ್ರಾಕ್ಷತೆ ಕೊಡುತಿಹನ್ಯಾರೇ-ಪೇಳಮ್ಮಯ್ಯ
ಆಶುಗಮನಮತ ಸ್ಥಾಪಕನೆನಿಸುವನ್ಯಾರೇ–ಪೇಳಮ್ಮಯ್ಯ
ಭಾಸುರ ಜ್ಞಾನ ವಿಶೇಷವಾಗಿ ಹರಿದಾಸ್ಯವ ಪಡೆದ ಯತೀಶ
ಕಾಣಮ್ಮ ॥೨॥

ಧಾರುಣೀಪತಿಸುತೆ ತೀರದಿ ನೆಲೆಸಿಹನ್ಯಾರೇ-ಪೇಳಮ್ಮಯ್ಯ
ಸಾರಿದ ಭಜಕರ ಬಾರಿಗೆ ಪೊರೆಯುವನ್ಯಾರೇ-ಪೇಳಮ್ಮಯ್ಯ
ಕಾರುಣ್ಯನಿಧಿ ಅಪಾರ ಮಹಿಮನಿವನ್ಯಾರೇ–ಪೇಳಮ್ಮಯ್ಯ
ನಾರಾಯಣ ತಂದೆಶ್ರೀಪತಿವಿಠಲನ ಆರಾಧಿಪ ರಾಘವೇಂದ್ರ
ಕಾಣಮ್ಮ ॥೩॥

## ೧೧೭

### (ಶ್ರೀಶಕೇಶವವಿಠಲಾಂಕಿತ)

**ರಾಗ–ನಾಯಕಿ** **ಅಟ್ಟತಾಳ**

(ವೃಂದಗಾನದಲ್ಲಿ)

ನೆರೆನಂಬಿ ಪಡೆಯಿರೋ–ಸ್ಥಿರವಾವ ಕರುಣವ
ಗುರುರಾಘವೇಂದ್ರ ರಾಯರ ಚಾರುಚರಣವ॥ ॥ಪ॥

ವರಹದಂಷ್ಟ್ರ ಜಲ ಸುತ್ತರಿತ ತೀರದಿ ನಿಂದ
ಶರಣರ ದುರಿತವ ತರಿದು ಕಾಯ್ವನೆಂದು॥ ॥೧॥

ಕರವ ಮುಗಿದು ಬಂದ ಪರಮಪಾಮರಾ
ಪೊರೆವ ಕರುಣ ಕೃಪಾಕರ ಯತಿವರ॥ ॥೨॥

ಶ್ರೀಶಕೇಶವ ವಿಠ್ಠಲೇಶನ ದೂತ
ರಾಸೆ ಪೂರೈಸುವ ಗುಣನಿಧಿ ಸತತ॥ ||೩||

❁❁

೧೧೮

(ಅನಂತಾದ್ರೀಶ)

ರಾಗ–ಸುರಟಿ ಆದಿತಾಳ

ಭೋ ಯತಿವರದೇಂದ್ರ- ಸದ್ಗುರು
ರಾಯ ರಾಘವೇಂದ್ರ। ||ಪ||

ಕಾಯೋ ಎನ್ನ–ಶುಭಕಾಯ ಭಜಿಸುವೆ
ಕಾಯೋ ಮಾಯಮತಕೆ ಚಂದ್ರಾ ||ಅ||

ಕಂಡ ಕಂಡಕಡೆಗೆ-ತಿರುಗಿ
ಬೆಂಡಾದನೋ ಕೊನೆಗೆ।
ಕಂಡ ಕಂಡವರನು ಕೊಂಡಾಡುತ ನಿಮ್ಮ
ಕಂಡೆ ಕಟ್ಟಕಡೆಗೇ ||೧||

ನೇಮವು ಎನಗೆಲ್ಲೀ-ಇರುವುದು
ಕಾಮಾಧಮನಲ್ಲಿ
ಭೋ ಮಹಾಮಹಿಮನೆ ಪಾಮರನಾ
ನಿಮ್ಮ ನಾಮ ವೊಂದೇ ಬಲ್ಲೆ ||೨||

ಮಂತ್ರವನಾನರಿಯೇ– ಶ್ರೀಮನ್
ಮಂತ್ರಾಲಯ ಧೊರೆಯೇ

ಅಂತರಂಗದೊಳು ನಿಂತು ಪ್ರೇರಿಸುವ ಅ
ನಂತಾದ್ರೀಶ ನಾಸರಿಯೇ ॥೩॥



೧೧೯

(ಮಧ್ವೇಶವಿಠ್ಠಲಾಂಕಿತ)

ರಾಗ-ಕಮಾಚ್ ಅಟತಾಳ

ಬಾರೋ ನಮ್ಮ ಮನೆಗೆ- ಶ್ರೀ ರಾಘವೇಂದ್ರ ॥ಪ॥

ಬಾರೋ ದುಃಖಾಪಹಾರ- ಬಾರೋ ದುರಿತ ದೂರ
ಬಾರೈಯ್ಯ ಸನ್ಮಾರ್ಗ ದಾರಿ ತೋರುವ ಗುರುವೆ ॥ಅ॥

ಬಾಲಪ್ರಹ್ಲಾದನಾಗಿ- ಖೂಳ ಕಶ್ಯಪುವಿಗೆ
ಲೋಲ ಶ್ರೀ ನರಹರಿ ಕಾಲ ರೂಪವ ತೋರ್ದ ॥೧॥

ವ್ಯಾಸ ನಿರ್ಮಿತ ಗ್ರಂಥ- ಮಧ್ವಕೃತ ಭಾಷ್ಯವ
ಬೇಸರದೆ ಓಡಿ ಮೆರೆವ ವ್ಯಾಸಮುನಿಯೆ ॥೨॥

ಮಂತ್ರ ಗೃಹದಲಿ- ನಿಂತ ಸು ಯತಿವರ್ಯ
ಅಂತ ತಿಳಿಯದೂ ನೀ ಅಂತರದೊಳು ॥೩॥

ಭೂತ ಪ್ರೇತಗಳನು- ಘಾತಿಸಿ ಬಿಡುವಂಥ
ಖ್ಯಾತಿಯುತ ಯತಿನಾಥನೆ ತುತಿಸುವೆ ॥೪॥

ಕುಷ್ಠರೋಗಾದಿಗಳ- ನಷ್ಟ ಮಾಡುವಂಥ
ಅಷ್ಟ ಮಹಿಮೆಯುತ ಶ್ರೇಷ್ಠ ಮುನಿಯೆ ॥೫॥

ಕರೆದರೆ ಬರುವಿಯೆಂಬೋ-ಕೀರುತಿ ಕೇಳಿ ನಾ
ಕರೆದೆನೊ ಕರುಣದಿ ಕರಪಿಡಿಯೋ ॥೭॥

ಭಕ್ತವತ್ಸಲನೆಂಬ - ಬಿರುದಿನಿಂದಾದರಾ
ಸಕ್ತನ ಮೊರೆ ಕೇಳಿ- ಮಧ್ವೇಶವಿಠ್ಠಲ ದಾಸ ॥೮॥



ರಂಗೋತ್ತುಂಗ ತರಂಗ ಮಂಗಲಕರ ಶ್ರೀ ತುಂಗಭದ್ರಾತಟೆ ।
ಪ್ರತ್ಯಸ್ಥ ದ್ವಿಜಪುಂಗವಾಲಯ ಲಸನ್ಮಂತ್ರಾಲಯಾಖ್ಯೇ ಪುರೇ ॥
ನವ್ಯೇಂದ್ರೋಪಲನೀಲ ಭವ್ಯಕರ ಸದ್ವೃಂದಾವನಾಂತರ್ಗತಃ ।
ಶ್ರೀಮತ್ಸದ್ಗುರು ರಾಘವೇಂದ್ರಯತಿರಾಟ್ ಕುರ್ಯಾದ್ಧ್ರುವಂ
ಮಂಗಲಮ್ ॥

[ಮಂಗಳಾಷ್ಟಕ]

೧೨೦

[ಗುರುಜಗನ್ನಾಥವಿಠ್ಠಲಾಂಕಿತ]

ಉದಯರಾಗ

ರಾಗ – ಭೂಪಾಳಿ ಝಂಪೆತಾಳ

ಏಳಯ್ಯ ಗುರುವೆ ಬೆಳಗಾಯಿತು ॥ಪ॥

ಏಳಯ್ಯ ಗುರುರಾಯ-ಏಳಯ್ಯ ಶುಭದಾಯ
ಏಳು ಮಹಾರಾಯ-ಏಳು ಎನ್ನಜೀಯಾ ॥ಅ॥

ಉದಯಾದ್ರಿ ಶೃಂಗದಲಿ ಉದಿಸಿದನು ಭಾಸ್ಕರನು
ಸದಮಲ ಬುಧರೆಲ್ಲ ಮುದದಿಂದಲೆದ್ದು
ನದಿಯ ಸ್ನಾನವಮಾಡಿ ಉದಕ ಪುಷ್ಪಗಳಿಂದ
ಸದನಕ್ಕೆ ತಾವ್ ಬಂದು ಪದುಮನಾಭನ ಭಜಿಸಿ ಪಾ
ದೋದಕವನೆ ಧರಿಸಿ ಸದಯ ನಿನ್ನ
ಪಾದಸಂದರುಶನಕೆ ಬಂದಿಹರೊ ॥೧॥

ನಿತ್ಯ ಭಜಿಸುವ ಜನರೆಲ್ಲ ಹೊತ್ತು ಮೀರಿತು ಎಂದು
ಚಿತ್ತಶುದ್ಧಿಯಲಿಂದ ಉತ್ತಮಾರ್ಜಣಗಳು ತಮ್ಮ
ನೆತ್ತಿಯಿಂದ ಪೊತ್ತು ಸುತ್ತು ಸಂದಣಿಯಿಂದ
ಜತನಾಗಿ ನಿಂತಿಹರು ಉತ್ತಮಾ ನಿನ್ನ ನಿದ್ರೆಯ
ಹೊತ್ತು ಮೀರಾಯ್ತು ತೊತ್ತಿಗರೆಲ್ಲರು ಪಾದ
ಒತ್ತಿ ಬೋಧಿಸುವರು ಚಿತ್ತಕ್ಕೆ ತಂದು ತ್ವರಿತದಿ ಏಳು ॥೨॥

ಏಮತಾದ್ರಿ ಕುಲಿಶನೆ ವಿಮಲಗಾತ್ರನೆ ಏಳು
ನಮಿತ ಜನರಾರ್ಥ ದಿವಿಜದ್ರುಮನೆ
ಪ್ರೇಮವಾರಿಧಿ ಏಳು ತಾಮರಸಾಂಬಕನೆ ಏಳು ಶ್ರೀ
ರಾಮಪಾದ ಭೃಂಗನೆ ಏಳು ಯಾಮ ಮೀರಿತು ವಿಶ್ವನಿಯಾಮಕನದೂತನೇ
ಸಾಮಗಾಯನಲೋಲ ರಮಾವಲ್ಲಭನ ಪ್ರಿಯ ಗುರುರಾಜವರ್ಯ ॥೩॥

ಮೌನಿಕುಲರನ್ನ ಮಾನನಿಧಿಯೇ ಎನ್ನ
ಬಿನ್ನಪವ ಕೇಳಯ್ಯ ಜಿಯ್ಯಾ-ನಿನ್ನ ಬೋಧಿಪ
ಕನ್ಯಜನರುಂಟೆ ನಿನ್ನಿಂದ ನೀನು ಚೆನ್ನಾಗಿ ಏಳು
ಮುನ್ನ ಮಹಾಕಾರ್ಯಂಗಳು ಘನ್ನವಾಗಿರುತಿಹವು
ಎನ್ನ ನುಡಿ ಈಗ ಚನ್ನಾಗಿ ಮನದಿ ತಂದು
ಮನ್ನಿಸಿ ಪೊರೆಯೋ ಧೊರೆಯೇ ॥೪॥

ದಾತ ಈ ಜನಜಾತಿ ಸಾಕಲಾರದೆ
ಸೋತು ಮಲಗಿದೆಯಾ ಪಾತಕಾಂಬುಧಿ ಪೋತನೆ
ಮಾತರೀಶ್ವರನ ತಾತ ಸೀತಾನಾಥನ ಪಾದ
ಪಾಥಭವ ಯುಗ್ಮದಲಿ ಸಂಜಾತವಾಗಿಹ ಸುಧಾ
ಶೀತಕಾರಣ ಮದಸಂಭೂತದಿಂ ಮಲಗಿದೆಯೋ
ಪೂತನಾಥನೆ ಗುರುಜಗನ್ನಾಥವಿಠ್ಠಲನ
ದೂತನಾನೆಂಬ ಗರುವಿನಿಂದ ಮಲಗಿದೆಯಾ ॥೫॥



## ೧೨೧

[ವರದೇಶವಿಠ್ಠಲಾಂಕಿತ]

ರಾಗ-ಧನಶ್ರೀ ಆಟತಾಳ

ವಿನಯದಿಂದಲಿ ನಮಿಸುವೆನಾ-ವೃಂದಾ
ವನದಿ ರಾಜಿಪ ರಾಘವೇಂದ್ರಗುರುವರನ ॥ ॥ಪ॥

ದುರಿತವಾರಣ ಪಂಚಾನನ-ನರ
ಹರಿರೂಪ ಸ್ತಂಭದಿ ಪ್ರಕಟಗೈಸಿದನ
ಹರಿಭಕ್ತಾಗ್ರಣಿ ಎಂದೆನಿಪ-ನಾರ
ದರ ಉಪದೇಶ ಗರ್ಭದಿ ಕೈಕೊಂಡಿಹನ ॥೧॥

ಸಿರಿ ವ್ಯಾಸತೀರ್ಥರೆನಿಪನ-ಪುರಂ
ದರ ದಾಸಾರ್ಯರಿಗುಪದೇಶ ಗೈದರನ
ವರ ಚಂದ್ರಿಕಾ ರಚಿಸಿದನ-ದುಷ್ಟ
ಪರಮತಾದ್ರಿಗಳಿಗೆ ಕುಲಿಶನೆನಿಪನ ॥ ॥೨॥

ಶ್ರೀಸುಧೀಂದ್ರಕರಾಬ್ಜ ಜನ-ದಿವ್ಯ
ಭಾಸುರ ಪರಿಮಳ ಗ್ರಂಥಕರ್ತರನ
ಮೀಸಲಮನದಿ ಭಜಿಪರನ-ದೋಷ
ನಾಶನಗೈಸಿ ಪೋಷಿಸುವಶಕ್ತರನ ॥ ॥೩॥

ವರಮಂತ್ರಸದ್ಮನಿಲಯ-ಶ್ರೀ
ಗುರು ಮಧ್ವಮತ ದುರಂಧರನೆನಿಸುವ
ಹರಿಪ್ರೀತಿ ಪೂರ್ಣಪಾತ್ರರನ-ಈ
ಧರೆಯೊಳು ಬಹು ಪರಿಮೆರೆವ ಮುನಿಪನ ॥ ॥೪॥

ತುಂಗಭದ್ರತೀರವಾಸನ-ಶುಭ
ಮಂಗಳಚರಿತ ಕಮಂಡಲಧರನ
ರಂಗ ವರದೇಶವಿಠ್ಠಲನ-ಪದ
ಭೃಂಗ ಯತಿಕುಲ ಕುಜಾರ್ಕ ಸನ್ನಿಭನ ॥ ॥೫॥



೧೨೨

(ಇಂದಿರೇಶಾಂಕಿತ)

ವೃಂದಗಾನದಲ್ಲಿ

ರಾಘವೇಂದ್ರ ಗುರು ನಮೋ ನಮೋ
ಯೋಗಿ ಜನೇಡಿತ ನಮೋ ನಮೋ ॥ ॥ಪ॥

ವಾದಿಜಯ ಪ್ರದನಮೋ । ಸಾಧುಜಪಾವನ ನಮೋ
ಶ್ರೀಧರ ಬೋಧಕ ನಮೋ । ಅಗಾಧತವ ಮಹಿಮ ನಮೋ ॥೧॥

ಎಷ್ಟು ದಿನವಾಯಿತು ನಮೋ । ಶ್ರೀಕೃಷ್ಣನ ಕಾಣದೆ ನಮೋ
ಭೆಟ್ಟಿಯ ಮಾಡಿಸು ನಮೋ । ವಿಷ್ಣು ದಾಸ್‌ರೇಣ್ಯನೆ ನಮೋ ॥೨॥

ತುಷ್ಟ ಮುಖಾಯ ನಮೋ । ಶಿಷ್ಯರು ಸೇವಿಸೆ ನಮೋ
ದೃಷ್ಟಿಲಿ ಕಳೆಯುವಿ ನಮೋ । ಸರ್ವೇಷ್ಟವರ ಪ್ರದ ನಮೋ ॥೩॥

ಚೂತರಸದಿ ಹರಿ ನಮೋ । ಪೋತನು ಬೀಳಲು ನಮೋ
ಆ ತನು ತ್ಯಜಿಸಿದ ನಮೋ । ಜೀವಾತು ನೀನಾದೆ ನಮೋ ॥ ॥೪॥

ವರಜಯತೀರ್ಥರ ನಮೋ । ಸುರಸ ಸುಗ್ರಂಥಕೆ ನಮೋ
ಪರಿಮಳ ಟೀಕೆಯನು ನಮೋ । ವಿರಚಿಸಿ ರಾಜಿಪೆ ನಮೋ ॥ ॥೫॥

ರತುನಮಾಲಿಯ ನಮೋ। ಹುತವಹಗಿತ್ತೆಯೋ ನಮೋ
ಅತಿಶಯ ಪ್ರಾರ್ಥಿಸೆ ನಮೋ । ಪ್ರಥಮ ತೆಗೆದುಕೊಟ್ಟೆ ನಮೋ ॥ ॥೬॥

ನಾರದ ಶಿಷ್ಯನೆ ನಮೋ । ನಾರಸಿಂಹಾರ್ಚಕ ನಮೋ
ಸೇರಿ ಭಜಿಸಿ ನಿಮ್ಮ ನಮೋ । ಎನ್ನ ಬಾರುದೃಷ್ಟಿಲಿ ನೋಡು ನಮೋ ॥೭॥

ವಾಕವತಾರನೆ ನಮೋ । ಲೋಕನಾಥಾಶ್ರಯ ನಮೋ
ಕಾಕು ದುರ್ಮತ ಹರ ನಮೋ । ಶ್ರೀಕರ ಸೇವಕ ನಮೋ ॥೮॥

ವೃಂದಾವನದಲಿ ನಮೋ ನಮೋ । ಭಕ್ತ ವೃಂದರೆ ಲಿಂದು ನೀನಮೋ
ಬಂದು ಮಾತಾಡುವಿ ನಮೋ । ಇಂದಿರೇಶನ ಪ್ರಿಯ ನಮೋ
ನಮೋ ॥೯॥



## ೧೨೩

(ಗುರು ಇಂದಿರೇಶಾಂಕಿತ)

ರಾಗ–ಮೋಹನ ಆದಿತಾಳ

ಸುಂದರ ಗುರು ರಾಘವೇಂದ್ರರೆಂತೆಬೋ ಕ-
ರ್ಮಂದಿಗಳರಸೆ ವಂದಿಸುವೆ ॥ ॥ಪ॥

ಬಂದ ಭಕುತರಘ – ವೃಂದಕಳೆವ – ಗುಣ
ಸಾಂದ್ರ ಸನ್ನುತ ಮಹಿಮ – ರೆಂದು ನಾ ನಂಬಿದೆ ॥ ॥ಅ॥

ಪರಮ ಕರುಣಿ – ನಿಜ ಚರಣ ಭಜಕರನು
ದ್ಧರಿಸುತಲನುದಿನ – ಪೊರೆವೆ ಎಂದು
ಕರವ ಮುಗಿದು ತ್ವರ - ಪರಿಪರಿಯಲಿ ನಿನ್ನಾ
ಲ್ಪರಿಯುವೇ – ದೈನ್ಯದಿ ಬಾಯ್ತೆರೆಯುವೆ–
ಕರಪಿಡಿ ಎಂದು ಕರೆಯುವೆ - ನಿನ್ನ
ಸರಿ ಪೊರೆವಂಥ ಧೊರೆಗಳ ಕಾಣೆ ಮುದ್ಗುರುವೆ – ಎನ್ನಂಥ ಪಾ
ಮರ ನರರ ಕಾಯ್ವುದು ನಿನಗೆ ಅಚ್ಚರವೆ? ವರಯೋಗಿವರ್ಯನೆ

ನಿರುತ ವೃಂದಾವನದಿ ರಾಜಿಸಿ
ಮೆರೆವ ಮಂಗಳ ಭರಿತ ತವಪದ
ಸ್ಮರಣೆ ಸಂತತ ನೀಡು ಮರೆಯದೆ
ಹರುಷದಲಿ ನಿರ್ಜರರ ತರುವೆ ॥ ॥೧॥

ಘೋರದುರಿತವೆಂಬೊ – ವಾರಿಧಿಯೊಳಗೀಸ
ಲಾರೆನೆನಿತು ದಯ ಬಾರದೆನೋ
ಪೋರನೆನುತಲಿ ತಾತ್ಸಾರಮಾಡದೆ ದಡ
ಸೇರಿಸೋ – ಬಿನ್ನಪವ ವಿಚಾರಿಸೋ - ಮುನ್ನಿಸಿವಮಾರ್ಗ ತೋರಿಸೋ

ಮೀರಿರುವ ಕಡು ಕಾಮಾದಿ ಖಳರ - ಬೇರುಗಳನಳಿಸೊ - ನಿನ್ನೊಳು
ನಿರಂತರ ಸೂರಿಪ್ರಕುತರ ದಾರಿಯೊಳು ನಿಲಿಸೋ
ಉರು ಪಾಪಸಂಚಯ ಕ್ರೂರಕುಜನ ಕು -
ಠಾರ ಹಿಂದುಳಿಸೋ - ಮನ್ಮದಭೀಷ್ಟೆಯ
ಭೂರಿನಮಿಸುವೆ ಚಾರುಕಿಟಿಜಾ
ತೀರ ನಿಲಯನೆ ಸಾರಿದವರನು
ಪಾರುಗಾಣಿಪೆನೆಂದು ಡಂಗುರ
ಸಾರುತಿದ ಯತಿವೀರ ಸಲಿಸೋ || ||೨||

ವಿಸೇಸು ಜನುಮದಿ-ಕ್ಲೇಶಗಳನುಭವಿಸಿ
ಗಾಸಿಗೊಳಿಸಿ-ಮನ ಬೇಸರಾದೆ - ಹೇಸಿ ವಿಷಯಂಗಳ
ಲೇಸು ತಿಳಿಯದೆ ಮರೆಮೋಸದಿ - ದುಷ್ಟರ ಸಹ
ವಾಸದಿ-ಚರಿಸಿದೆ ಮಂದಹಾಸದಿ-ಸಂ
ತೈಸು ರವಿ ಸಂಕಾಶ ಜನವಿದ್ವಾಂಸ ಸಾದರದಿ-ಕಾಷಾಯ
ವಸನ ವಿಭೂಷಿತಾಂಗನೆ ವ್ಯಾಸಮುನಿ ಭರದಿ-ಗಜರಾಮಪುರಾ
ಧೀಶ ಮುಖರಿಗೆ ತೋಷ ನೀ ಚಿರದೀ-ಈ ಸಮಯ ನುತಿಸುವೆ
ಆ ಸಮೀರಮತಾಬ್ಧಿ ಚಂದಿರ
ಶ್ರೀಶ ಗುರು ಇಂದಿರೇಶನನಂಘ್ರಿಯ
ದಾಸ ಭವಭಯರಾಶಿ ತರಿದು
ದಾಶಿಸದೆ ನೀ ಪರಿಪೋಷಿಸೆಮ್ಮನು ||೩||



೧೨೪

(ಭೀಮೇಶ ವಿಠ್ಠಲಾಂಕಿತ)

**ರಾಗ–ಬೇಗಡೆ** **ಏಕತಾಳ**

ಬಂದೆ ಗುರುರಾಯ ನಿನ್ನ ಸಂದರುಶನವ ಬಯಸಿ ||ಪ||

ಬಂದೆನೊ ಭವದೊಳು ನೊಂದು ನಿನ್ನ ಪಾದಾರ–
ವಿಂದವ ನೋಡ್ಯಾನಂದ ಪಡೆಯಲಿ ದಿನದಿನ ||ಅ||

ಪರಿಪರಿಯಿಂದಲಿ ಪರಮನುಜರನನು
ಸರಿಸಿದ ದೋಷ ಹರಿಪದೆಂದು ಬೇಡಿ ನಮಿಸುತಲಿ ||೧||

ಸತತ ಸತಿಸುತರ ತತಿಗೆ ಮೋಹಿಸದೆ ಕ್ಷಿತಿ–
ಪತಿಯ ಸ್ಮರಿಪ ಮತಿಯ ಬೇಡಿ ನಮಿಸುತಲಿ ||೨||

ಕರುಣದಿ ಭೀಮೇಶವಿಠ್ಠಲನೆ ನಿಮ್ಮ ನುಡಿ
ತೃಟಿಮೀರದೆ ತಾ ದಿಟನೆ ಮಾಡುವದರಿತು- ಬಂದೆ ಗುರುರಾಯ ||೩||



ವಿದ್ವದ್ರಾಜಶಿರಃ ಕಿರೀಟ ಖಚಿತಾನ ರ್ಘ್ಯೋರು ರತ್ನಪ್ರಭಾ|
ರಾಗಾಘ್ಯೌಘಹ ಪಾದುಕದ್ವಯಚರಃ ಪದ್ಮಾಕ್ಷ ಮಾಲಾಧರಃ||
ಭಾಸ್ವದ್ದಂಡ ಕಮಂಡಲೂಜ್ವಲಕರೋ ರಕ್ತಾಂಬರಾಡಂಬರಃ
ಶ್ರೀಮತ್ಸದ್ಗುರು ರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂ
ಮಂಗಳಮ್ ||೫||

(ಮಂಗಳಾಷ್ಟಕ)

## ೧೨೫

## (ಭೀಮೇಶಕೃಷ್ಣ-ಅಂಕಿತ)

ನೋಡಿರಿ ರಾಘವೇಂದ್ರರ–ಮಾಡಿರಿ ನಮಸ್ಕಾರ
ಬೇಡಿದ ಇಷ್ಟಾ ವರ–ನೀಡುವರು ನಮ್ಮ ಯತಿವರ॥ ॥ಪ॥

ಮಂತ್ರಾಲಯದಿ ನಿಂತಿಹ – ಚಿಂತೆಗಳ ಪರಿಹರಿಸುವ
ಕಂತುಪಿತನಂತಗುಣ ತನ್ನಂತರಂಗದಿ ಸ್ತುತಿಸುವ
ಇಂಥಾ ಯತಿಗಳ ಕಾಣೆ – ಹರಿಯೇಕಾಂತ ಭಕ್ತರೆನಿಕೊಂಬುವ
ಮಂತ್ರಾಕ್ಷತೆ ಫಲ ನೀಡಿ – ಸಂತಾನ ಸಂಪತ್ತು ಕೊಡುವರ॥ ॥೧॥

ಭೂತಪ್ರೇತ ಭಯಗಳ–ವಾತಪಿತ್ತ ವ್ಯಾಧಿಗಳ
ಸೇತು ಕುಷ್ಟರೋಗಗಳ ಪಾತಕಿಯುವ ಪಾಪಗಳ
ಪ್ರೀತಿಲಿಂದ ಕಳೆವರೊ–ಪ್ರಖ್ಯಾತರಾಗಿ ಬೆಳೆವರೊ
ಭೂತಳದಿ ಸನ್ನಿಹಿತರಾದ ಸೀತಾಪತಿ ನಿಜಮಾತರೆನಿಸೋರೊ॥ ॥೨॥

ಭಜಿಸಿ ಭಕ್ತರ ನೋಡುವ–ಸದನಕೆ ಬಂದು ಕೂಡುವ
ಒದಗಿದಾಪತ್ತು ದೂಡುವ – ಮುದದಿ ತಾ ದಯಮಾಡುವ
ಅಜನನಯ್ಯನ ಕೊಂಡಾಡುತ – ತುಂಗಾನದಿಯ ತೀರದಿ ವಾಸವಾಗಿ
ಹೃದಯದೊಳು ಭೀಮೇಶಕೃಷ್ಣನ- ಪದವ ಭಜಿಸಿ ಪಡೆವರಾನಂದ ॥೩॥



## ೧೨೭

### (ತಂದೆ ಪುರಂದರ ವಿಠ್ಠಲಾಂಕಿತ)

ರಾಗ-ಕಾಂಬೋದಿ ಝಂಪೆತಾಳ

ಏನ ಬೇಡಲಿ ನಿನ್ನ ಬಳಿಗೆ ನಾ ಬಂದು
ಮಾನದಿಂ ಸಲಹಯ್ಯ ಗುರುರಾಘವೇಂದ್ರ || ||ಪ||

ಮನ ಪೊಲೆಗಲಿಸಿತು ಮನವು ಮೈಲಿಗೆಯಾಯ್ತು
ನೆನೆದು ಬಾರದದು ಎಲ್ಲಿ ಬಯಸುವುದು ಕೇಳೋ
ಅನುಭವಿಸಲಾರೆನೊ ಅದರ ಕಾಟಗಳನ್ನು
ಎನ್ನ ಉಬ್ಬಸವನು ಯಾರಲಿ ಪೇಳುವೆನೊ || ||೧||

ಮನವೆಂಬ ಹೊಲೆಬಟ್ಟೆ ನೀರಲಿ ನೆನೆಯದು
ಉರಿವ ಬೆಂಕಿಯಲಿ ಉರಿಯಲೊಲ್ಲದು
ಪರಿಪರಿ ಬಗೆಯಲಿ ಕರುಣಿಸುವುದು ಎನ್ನನು
ಪರಮಪುರುಷ ನಿನ್ನ ಮೊರೆಹೊಕ್ಕೆ ನಾನೀಗ || ||೨||

ಒಂದು ಕ್ಷಣವಾದರೂ ಹರಿಯ ನೆನೆವೆನೆನಲು
ಒಂದಲ್ಲ ಎರಡಲ್ಲ ಹಲವು ತಾಪತ್ರಯವು
ತಂದೆಪುರಂದರವಿಠ್ಠಲಗತಿ ಪ್ರೀತಿವಂತನೆ
ಒಂದುಪಾಯವಾದರೂ ಪೇಳಬಾರದೆ ಗುರುವೇ || ||೩||



೧೨೭

(ಅಂಕಿತ–ಮುದ್ದು ಶ್ರೀ ವೆಂಕಟೇಶ)

ರಾಗ–ನವರೋಜು ಅಟತಾಳ

ವೃಂದಾವನ ನೋಡಿದೇ – ರಾಘ
ವೇಂದ್ರ ಗುರುಗಳ ಸಾ ಕೊಂಡಾಡಿದೇ–ನಿಂತು
ವಂದನೆ ಮಾಡಿದೆ–ವರಗಳನ್ನೆಲ್ಲವ ಬೇಡಿದೆ ॥ ||ಪ||

ಬಂದಿತು ಶ್ರಾವಣ ಬಹುಳ ಪಾಡ್ಯ ಬಿದಿಗೆ ತದಿಗೆಯಲ್ಲಿ
ಚಂದವುಳ್ಳ ತುಂಗಾತೀರ ಚೆಲುವ ಮಂತ್ರಾಲಯದಿ ||ಅ||

ಪಚ್ಚ ನೀಲದಂತೆ ಹೊಳೆವೊ ವೃಂದಾವನ–
ಪರಿಪರಿದ್ವಾದಶನಾಮಗಳು
ಹಚ್ಚಿದ ಶ್ರೀ ಮುದ್ರಿ ಗಂಧ ಅಕ್ಷತೆಗಳು–
ಹೊಳೆವೋ ಗೀರು ಅಂಗಾರಗಳು

ಕುಚ್ಚು ಶೆರಗು ಶಾಟಿ ದಂಡಕಮಂಡಲು ಕಾಂತಿಯುಳ್ಳ
ಉಪಕಾರಣೆಯು
ಹೆಚ್ಚಿದ ಹೇಮ ಬೆಳ್ಳಿ ಆಭರಣಗಳು–
ಹಾರ ತುಳಸೀ ವನಮಾಲೆಗಳು
ಮೃತ್ತಿಕೆ ಅಂಗಾರ ಮಂತ್ರಮಾಲಿಕೆ ಪಾದೋದಕದಿಂದ
ಒತ್ತಿದ ಗ್ರಹಗಳೆಲ್ಲ ಸುತ್ತುಗಟ್ಟಿ ಓಡುವುವು ||೧||

ಸುತ್ತು ಗಚ್ಚಿನ ಗೋಡೆಸಾಲು ನಂದಾದೀಪ–
ಸಕಾಲದಲ್ಲಿ ಆರಾಧನೆಯು
ಕುಷ್ಠ ರೋಗದವರು ಕುರುಡ ಕಿವುಡರಿಗೆ–
ಸ್ವಪ್ನಗಳಾಗೋದು ಅತಿಶಯವು

ಒತ್ತಿ ಓದುವ ವೇದ ಬಡಿವ ಜಾಂಗಟೆಗಳು ಒಂ
ಛತ್ರ ಜೋಡಿ ಭಜಂತ್ರಿಗಳು-ಶಕ್ತಿ ಪ್ರದಕ್ಷಿಣೆ ದಂಡನಮಸ್ಕಾರ
ಪ್ರಾಣಾಚಾರ ಬಿಟ್ಟ ಪುರಜನರು - ಹತ್ತು ಕಟವಾಂಜನದ ಚೆಲ್ವಿಕೆಕಂಭ
ಹನ್ನೆರಡು ಮಂಟಪ ಮತ್ತೆ-ವೈಷ್ಣವಸಂದಣಿ ಆಚಾರ್ಯರ ಪೂಜೆ
॥೨॥

ಹಿಂಡು ಹಿಂಡು ಎಲ್ಲ ಹರಕೆ ಒಪ್ಪಿಸುವರು
ಹೊನ್ನು ಮುಡುಪುಗಳ್ಹಾಕುವರು
ಚೆಂಡಿಕೆ ಇಡಿಸೋರು ಜಾವಳ ಬಿಡಿಸೋರು-
ಪರಿಪರಿ ನೈವೇದ್ಯ ಮಾಡೋರು ಭೂ
ಮಂಡಲದೊಳು ಮಾನ್ಯ ಶ್ರೀಮುದ್ದುವೆಂಕಟೇಶ
ಥಂಡ ಥಂಡದಲ್ಲಿ ಕುಳಿತು ಬಾಹೋನು ತೇರಿನಂತೆ ॥ ॥೩॥



೧೨೮

(ಶ್ರೀರಾಮವಿಠ್ಠಲಾಂಕಿತ)

ರಾಗ-ಮೋಹನ ಆದಿತಾಳ

ತುಂಗಭದ್ರಾತೀರದಿ ಶೋಭಿಪ
ಮಂಗಳ ಮಹಿಮರಿವರ್ಯಾರೇ ಪೇಳಮ್ಮ ॥ಪ॥

ಭಂಗಾರದ ಕಣ್ಣ ನಣ್ಣನಿದಿರೊಳು
ರಂಗನ ಕರೆದ ರಾಘವೇಂದ್ರರಿವರಮ್ಮ ॥ ॥ಅ॥

ಶ್ರೀಪಾದರಾಜರಿಂದು ಪದೇಶವ ಕೊಂಡ
ಕಾಷಾಯಧರರ್ಯಾರೇ ಪೇಳಮ್ಮಯ್ಯ
ಶ್ರೀಪತಿ ವೇಣುಗೋಪಾಲನ ತುತಿಸಿದ
ಗುರು ವ್ಯಾಸವರ್ಯರಿವರಮ್ಮ ॥ ॥೧॥

ವರ ತುಂಗಾತೀರದಿ ಪರಮಯತಿಗಳಾಗಿ
ಪರಿಪರಿ ಶೋಭಿಸುತಿಹರ್ಯಾರಮ್ಮ
ಪರಿಮಳ ಗ್ರಂಥದಿ ಪರಮತಗದ್ದ ಗೆಳ
ಗುರು ರಾಘವೇಂದ್ರರಿವರಮ್ಮ ॥ ॥೨॥

ಗುರುಮಧ್ವಪೀಠದಿ ಸೀತಾರಾಮರ
ಪಾದ ಪೂಜಿಸುವರ್ಯಾರಮ್ಮ
ಶ್ರೀರಾಮವಿಠ್ಠಲನ ಕರುಣಾ ಪಾತ್ರರಾದ
ಗುರು ಸತ್ಯಸಂಧರಿವರಮ್ಮ ॥೩॥



## ೧೨೯

(ಗುರುರಾಮ ವಿಠ್ಠಲಾಂಕಿತ)

ರಾಗ-ದರ್ಬಾರು ಆದಿತಾಳ

ಗುರುವೇ – ರಾಘವೇಂದ್ರ ಗುರುವೇ । ॥ಪ॥

ಗುರುವೇ ಆಶ್ರಿತಸುರತರುವೆನುತಲಿ ನಿನ್ನ
ಚರಣ ನಂಬಿದವರಿಗೆ ಪರಮಾನುಗ್ರಹ ಮಾಳ್ಪ ॥ ॥ಅ॥

ಮಂತ್ರಾಲಯದಲಿ ನೀ ನಿಂತು ನಿರಂತರ
ಸಂತರಿತಾಪ್ಪಾರ್ಥವ ಸಲಿಸುತಲಿರುವೇ – ಸದ್ಗುರುವೇ ॥ ॥೧॥

ಜಡಮೂಕಬಧಿರಾಂಧರು ನಿನ್ನ ಭಜಿಸಲು
ದೃಢಮಾಡಿ ಯಾಡಿಯುವರ ಆದರಿಸುವೇ – ಸತತ ಸದ್ಗುರುವೇ ॥೨॥

ಸ್ಮರಣೆ ಮಾಳ್ಪರ ಭವದುರಿತಗಳ ತರಿವ
ಗುರುರಾಮವಿಠ್ಠಲನ ಶರಣಾಗ್ರಣಿಯೆ – ಸದ್ಗುರುವೇ ॥ ॥೩॥



ಯದ್ವೃಂದಾವನ ಸಪ್ರದಕ್ಷಿಣ ನಮಸ್ಕಾರಾಭಿಷೇಕ ಸ್ತುತಿಃ ।
ಧ್ಯಾನಾರಾಧನ ಮೃದ್ವಿಲೇಪನ ಮುಖಾನೇಕೋಪಚಾರಾನ್ ಸದಾ ॥
ಕಾರಂಕಾರಭಿ ಪ್ರಯಾಂತಿ ಚತುರೋಲೋಕಾಃ ಪುಮರ್ಥಾನ್ಸದಾ
ಶ್ರೀಮತ್ಸದ್ಗುರು ರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂ
ಮಂಗಲಮ್॥ ॥ ೭ ॥

(ಮಂಗಲಾಷ್ಟಕ)

## ೧೩೦

### (ಅಂಕಿತ– ಐಹೊಳೆ ವೆಂಕಟೆ)

ರಾಗ–ಮೋಹನ ಆದಿತಾಳ

ದಿನಕರನುದಿಸಿದನು – ಧರೆಯೊಳಗೆ
ದಿನಕರನುದಿಸಿದನು
ದಾನವ ಕುಲದಲ್ಲಿ ಕ್ಷೋಣಿಯೊಳಗೆ ॥ ॥ಪ॥

ಪ್ರಥಮ ಪ್ರಹ್ಲಾದನಾಗಿ - ಅವತಾರ ಮಾಡಿ
ಸತತ ಹರಿಯ ನುತಿಸಿ
ಮತಿಹೀನನಾದ ತಂದೆಗೆ ನರಹರಿರೂಪ
ರತಿಯಿಂದ ತೋರಿದ ಪ್ರಹ್ಲಾದ ರಾಯರೆಂಬ ॥ ॥೧॥

ವ್ಯಾಸಮುನಿಯು ಎನಿಸಿ - ಸೋಸಿಲಿಂದ
ವಾಸವಸುತನ ಭಜಿಸಿ
ದಾಸನೆಂದು ಮೆರೆದಿ - ನವವೃಂದಾವನದಿ
ಸೋಸಿಲಿ ಕರೆದರೆ ವಾಸಮಾಡುವುದಕ್ಕೆ ॥ ॥೨॥

ತುಂಗಭದ್ರೆಯ ತೀರದಿ - ಮಂಗಳ
ಮರ ಮಂತ್ರಾಲಯ ಸ್ಥಳದಿ
ಅಂಗಜಪಿತ ನಮ್ಮ ಐಹೊಳೆವೆಂಕಟನ
ಕಂಗಳಿಂದ ಕಂಡೆ ಗುರು ರಾಘವೇಂದ್ರನೆಂಬ ॥ ॥೩॥



## ೧೩೧

### (ರಾಮಚಂದ್ರ ವಿಠಲಾಂಕಿತ)

ರಾಗ–ಮೋಹನ ಆದಿತಾಳ

ಕರೆದು ಕೈಪಿಡಿಯೋ ಎನ್ನಾ - ಶ್ರೀ ರಾಘವೇಂದ್ರ
ಗುರುವೇ ಕರುಣಾ ಸಂಪನ್ನ ॥ ॥ಪ॥

ಗುರುವೇ ನಿಮ್ಮಯ ಚರಣಕಮಲಕೆ
ಶರಣು ಹೊಕ್ಕೆನೊ ಆರೆಮರೆರಿಲ್ಲವೆ
ಸುರತರುವೆ ನಿರುತವಲಿ ಎನ್ನನು
ಪೊರೆಯೊ ಬಾರಿಂದರೆವ್ರ ಮಾಡದೆ || ||೮||

ಘೋರ ಸಂಸಾರವೆಂಬೊ – ವಾರಿಧಿಯೊಳು
ಮೇರೆಗಾಣದಲಿಹೆನೋ
ಆರುವರ್ಗಗಳೆಂಬ ವಾಂಚೆರಮಕ್ಕ
ಮಾರಿಬಾಧೆಗೆ ಎದೆ ಆರೀ ಬಿದ್ದೆನಿಂದು ||
ದಾರಿನೋಡುವರಿಲ್ಲವೋ – ಈ ಸಮಯದಿ
ದೂರ ನೋಡುವುದಲ್ಲವೋ – ನಿನ್ಹೊರತು ಆ-
ಧಾರ ಒಬ್ಬರ ಕಾಣೆವೋ – ನಿನೇ ದೀನೋ
ದ್ಧಾರ ನೆಂಬುದ ಬಲ್ಲೆವೋ ||

ಧೀರಯತಿ ಪರೋದ್ಧಾರ ಭಯಹರ
ಸಾರಿದವರಿಗಪಾರ ಸುಖಕರ
ಸೇರಿದೆನೊ ಪರಿಚಾರಿಗನು
ಸಾರಿ ಎನ್ನನು ಬಾರಿಬಾರಿಗೆ || ||೯||

ಕಂಡಕಂಡವರ ಬಳಿಗೆ – ಥಂಡಥಂಡದಿ ಹೋಗಿ
ದಿಂಡುತಿರುಗೀತೀ ದೇಹಾ
ಸಂಡಿಗ್ಹಾಯಿತೋ ಬೇಡಿಕೊಂಡೆ ಕೋಡಗನಂತೆ
ದಂಡವಾಯಿತೋ ಮಾನ ಅಂಡಲೆವೆನೊ ಈಗ
ಭಂಡುಮಾಡುವುದುಚಿತವೇ – ದಾಸನ ದೋಷ
ಖಂಡ್ರಿಸದಿರುವುದು ಥರವೇ – ಹೀನನಲಜ್ಜಾ
ಕಂಡು ಬಿಡುವುದದುಚಿತವೇ – ನಾನೊಬ್ಬ ಭೂ-
ಮಂಡಲದೊಳಗಿರುವೆ

ಮಂಡಲಾಧಿಪ ಪಂಡಿತೋತ್ತಮ
ಚಂಡ ಖಳಕೃತ ಷಂಡಮತ ಮಾ-
ರ್ತಾಂಡನೆ ಮುನಿವರೋದ್ದಂಡ ಸಜ್ಜನ
ಮಂಡಿತನೆ ನಾನುದ್ದಂಡ ನಮಿಸುವೆ ॥೨॥

ಬಂದು ನಿನ್ನಯ ಪಾದವಾ – ಹರುಷದಿಂದ
ವಂದಿಸೂವಾ – ಜನರ
ಮಂದಾರತರುವಂತೆ ಛಂದಛಂದದಿ ಮನ
ಬಂದಾವರನೆಲ್ಲಾ ಸಂದೇಹವಿಲ್ಲದೆ
ತಂದುಕೊಡುವೆ ಬಿಡದೇ – ಅವರ ದೋಷ
ಒಂದನೂ ನೀ ನೋಡದೆ – ಅವರಂತೆ ನೋ
ಡಿಂದೆನ್ನನು ಬಿಡದೇ – ಎನ್ನ ತಾಯಿ
ತಂದೆಗಧಿಕ ನೋಡಿದೇ ॥

ಇಂದಿರಾಮನಮಂದಿರಾ – ಶ್ರೀಶ
ಸುಂದರಾ ರಾಮಚಂದ್ರ ವಿಠ್ಠ
ಲೇಂದಿವರ ಪದ ಬೃಂದ ಸೇವಾ
ನಂದಪೂರಿತ ಬಂದು ಮುಂದಕೆ ॥ ॥೩॥



## ೧೩೨

### (ಪ್ರಸನ್ನ ಶ್ರೀನಿವಾಸ)

ರಾಗ-ಮಧ್ಯಮಾವತಿ ಆದಿತಾಳ

ಶರಣಂ ಶರಣಂ ಪಾಲಯಮಾಂ
ಶ್ರೀ ಗುರುರಾಘವೇಂದ್ರ ಕೃಪಾಂಬುಧೇ ಪಾಲಯಮಾಂ ॥ಪ॥

ಸುಧೀಂದ್ರ ಯತಿವರ ಕರಕಮಲಜ ವರ
ಯೋಗೀಂದ್ರಹಸ್ತಸರೋರುಹ ಪೂಜಿತ ಪಾಲಯಮಾಂ ॥೧॥

ತಾರಕಸುಖದ ಸುಮಧ್ವಮತಾರ್ಣವ
ದುಗ್ಧತರಂಗ ಪ್ರವರ್ಧಕ ಚಂದ್ರ ಪಾಲಯಮಾಂ ॥೨॥

ಸುಂದರ ಸ್ತಂಭಜ ರಾಮ ದೇವಕೀಸುತ
ಸೈಂಧವಮುಖ ದ್ವೈಪಾಯನಾರಾಧಕ ಪಾಲಯಮಾಂ ॥೩॥

ಪರಿಮಳ ವಿವೃತಿ ಮುಕ್ತಾವಲಿ ಬಹು
ತಾರಕ ಗ್ರಂಥ ಸುಕರ್ತೃ ಸುಮೇಧ ಭೋ ಪಾಲಯಮಾಂ ॥೪॥

ಮಂದಜಭವಪಿತ ಪ್ರಸನ್ನ ಶ್ರೀನಿವಾಸ
ಸಿಂಧುಜಾಪತಿ ಸಿಂಧೂರವರದ ಪ್ರಿಯ ಪಾಲಯಮಾಂ ॥೫॥



## ೧೩೩

### (ನಾಮಗಿರೀಶ ನಾರಸಿಂಹ)

ರಾಗ–ರೀತಿಗೌಳ ಆದಿತಾಳ

ರಾಘವೇಂದ್ರ–ಸಲಹೋ–ಗುಣಸಾಂದ್ರ ॥ಪ॥

ಭಗವದ್ಗೀತಾವಿವರಣ ತಂತ್ರದೀಪ
ನಿಗಮತತಿಗೆ ಖಂಡಾರ್ಥವ ರಚಿಸಿ
ಖಗಾರ್ಥಗಳನು ಅತಿಸ್ಫುಟವಾಗಿ ವಿವರಿಸಿ
ಖಗವಾಹನನ ತೋಷಪಡಿಸಿದ ಧೀರ ॥೧॥

ಧರಣಿ ವಿಬುಧರಿಗೆ ವರಗಳ ಕೊಡುವಂಥ
ಸುರತರುವೇ ನಿನಗೆ ಕರಗಳ ಮುಗಿದು
ಪರಮಪುರುಷ ಹರಿಚರಣಕಮಲದಲಿ
ಸ್ಥಿರವಾದ ಭಕುತಿಯು ಬೇಡುವೆ ಧೀರ ||[illegible]||

ಚಂಡಕುಮತಗಳ ಖಂಡಿಸಿ ಬುಧಜನ
ಮಂಡಲದೊಳಗೆ ಪ್ರಚಂಡನೆಂದೆನಿಸಿ
ಕುಂಡಲಿಶಯನ ಪಾದ ಮಂಡಿತ ಹೃದಯ ಭೂ-
ಮಂಡಲದೊಳಗೆ ಅಖಂಡಲನಾದ ||[illegible]||

ಶ್ರದ್ಧೆಯಿಂದಲಿ ಪರಮಧ್ವಾಚಾರ್ಯರಮತ
ಪದ್ಧತಿ ಬಿಡದಂತೆ ಬುದ್ಧಿಯನಿತ್ತು
ಉದ್ಧರಿಸಯ್ಯ ಕೃಪಾಬ್ಧಿಯೇ ಬುಧಜನಾ
ರಾಧ್ಯಚರಣ ಪರಿಶುದ್ಧ ಚರಿತ್ರ ||[illegible]||

ಕಾಮಜನಕನಾದ ನಾಮಗಿರೀಶ್ವರ
ಸ್ವಾಮಿ ನೃಹರಿ ಪಾದ ತಾಮರಸಂಗಳ
ಪ್ರೇಮದಿ ಪೂಜಿಸೆಂಬೋ ಕಾಮಿತವರನೀಡೊ
ಶ್ರೀಮತ್ಸುಧೀಂದ್ರಕರತಾಮರಸಭವನೇ ||[illegible]||



## ೧೩೪

### (ಅಂಕಿತ ಪ್ರಸನ್ನ)

ರಾಗ–ಮೋಹನ ಆದಿತಾಳ

ಗುರುವರ್ಯರನು ಭಜಿಸೋ–ರಾಘವೇಂದ್ರ
ಗುರುವರ್ಯರನು ಭಜಿಸೋ || ||ಪ||

ಧರೆತಲದಲವತರಿಸಿ ಸುಜನರನು
ಪರಿಪರಿವಿಧದಲಿ ಪೊರೆಯುತಲಿರುವ ಸದ್ಗುರುವರರ ॥ ॥೮॥

ನಳಿನನಾಭ ಶ್ರೀರಾಮರ ರುಚಿರ ಪದ
ಗಳ ಸಂತಸದಿ ಭಜಿಸಿ
ಖಳರ ದುರ್ಮತಗಳನಳಿಸಿದ ದಶಪ್ರಮತಿ
ಗಳ ದಿವ್ಯಶಾಸ್ತ್ರಾರ್ಥಗಳನು ಸುಲಭದಲಿ
ಇಳೆಯೊಳು ಸುಜನಕೆ ತಿಳಿಯುವ ತೆರದಲಿ
ಬೆಳಗುತಿರುವ ಪರಿಮಳಮುಖವರಗ್ರಂಥ
ಗಳನು ರಚಿಸುತ ಉಳಿಸಿ ಸುಮತಿಯನು
ಇಳೆಯೊಳು ವರಮಂತ್ರನಿಲಯದಿ ನೆಲೆಸಿದ ॥ ॥೯॥

ಮಂಗಳಕರಗಳೆಂದು ಚರಿತೆಯುಳ್ಳ
ತುಂಗಾತೀರದಿ ನೆಲೆಸಿ
ಕಂಗೊಳಿಸುತ ಚರಣಂಗಳ ಭಜಿಪರ
ಸಂಘಕ್ಕೆ ತಮ್ಮ ಅಪಾಂಗ ವೀಕ್ಷಣದಿಂದ
ಮಂಗಳ ತತಿಗಳ ನೀಡಿ ಅವರಘ
ಭಂಗವಗೈಯುತ ಅನುದಿನದಲಿ ದ್ವಿಜ
ಪುಂಗವನಿಕರದಿ ಪೂಜೆಯಗೊಂಬ ಉ
ತ್ತುಂಗ ಚರಿತ್ರ ರಥಾಂಗಧರ ಪ್ರಿಯ ॥ ॥೨॥

ಮುನ್ನ ಪ್ರಹ್ಲಾದನೆನಿಸಿ ಶ್ರೀ ನರಹರಿ
ಯನ್ನು ಸತತ ಭಜಿಸಿ
ಇನ್ನೊಂದು ಜನುಮದಿ ಮಾನ್ಯ ಶ್ರೀ ವ್ಯಾಸಮುನಿ
ಯೆನಿಸಿ ಖಳಮತವನ್ನು ಖಂಡಿಸುತಲಿ
ಚೆನ್ನ ಶ್ರೀಕೃಷ್ಣನ ಉನ್ನತಮಹಿಮೆಗ
ಳನ್ನು ಬೋಧಿಸುತ ತನ್ನ ಭಕುತಜನ

ರನ್ನ ಹರುಷದಲಿ ಧನ್ಯರೆನಿಸಿದ ಪ್ರ
ಸನ್ನ ಶ್ರೀರಾಮರ ಭಕುತ ಶಿರೋಮಣಿ ॥ ॥೩॥



## ೧೩೫

### (ಉರಗಾದ್ರಿವಾಸವಿಠ್ಠಲಾಂಕಿತ)

ರಾಗ–ಧನ್ಯಾಸಿ ಆದಿತಾಳ

ತ್ರಾಹಿ ತ್ರಾಹಿ ಮಂತ್ರಾಲಯನಿಲಯ ॥ ॥ಪ॥

ತ್ರಾಹಿ ತ್ರಾಹಿ ಮಂತ್ರಾಲಯ ಗುರುವೇ
ಸೂತ್ರನಪಿತ ಕೃಪಾಪಾತ್ರ ನೀನಹುದೋ ॥ ॥ಅ॥

ಧ್ಯಾನ ಮೌನ ಸುಜ್ಞಾನವಿಲ್ಲದಿಹ
ದೀನಜನರುದ್ಧಾರ– ಗಂಭೀರಾ ॥ ॥೧॥

ವಸುಧೆಯೊಳಗೆ ದಶಪ್ರಮತಿ ಸುಶಾಸ್ತ್ರವ
ಪ್ರಸರಿಸಿ ತೋರಿದ ಅಸಮಮಹಿಮನೇ ॥ ॥೨॥

ಮೂಕ ಬಧಿರ ಅಂಧಾದಿಗಳ ಕುಂದುಗಳ್
ವ್ಯಾಕುಲ ಹರಿಪ ಕೃಪಾಕರ ಮೂರುತೇ ॥ ॥೩॥

ಕರುಣಶರಧಿ ಸಿರಿರಮಣನ ಭಕುತಾಗ್ರಣಿ
ಸುಗುಣಾಗಣಾಭರಣಕೆ ಗಣಿಯೇ ॥ ॥೪॥

ಬೇಡಿದಭೀಷ್ಟವ ನೀಡಿ ಕಾಪಾಡುವೆ
ಈಡುಗಾಣೆ ನಿನಗೀ ನಾಡೊಳು ಇನ್ನು ॥ ॥೫॥

ಇಂದೂ ಮುಂದೂ ಎನ್ನ ಕುಂದುಗಳೆಣಿಸದೆ
ಕಂದನೆಂದು ಎನ್ನ ಮುಂದಕೆ ಕರೆಯೋ ॥ ॥೬॥

ಕ್ಷೋಣಿಯೊಳಗೆ ನಿನಗಾರೆಣೆಗಾಣೆನೋ
ವೀಣೆವೆಂಕಟ ನೀ ಸಂಕಟ ಹರಿಸೋ ॥ ॥೭॥

ಪಾಲಿಸಯ್ಯ ಪ್ರಹ್ಲಾದ ವ್ಯಾಸ ಭೂ
ನಲ್ಲ ನೀನಹುದೋ ಬಾಹ್ಲೀಕಪ್ರಭುವೇ ॥ ೮॥

ಬಗೆಬಗೆ ಪಾಪೌಘಗಳನು ಕಳೆಯುವ
ರಘುಪತಿ ಕಿಂಕರ ಶ್ರೀರಾಘವೇಂದ್ರ ॥ ॥೯॥

ಪವನಾಂತರ್ಗತ ಶ್ರೀ ವೆಂಕಟೇಶನ ಪದ
ಕುವಲಯಕೆ ನೀ ಕುಮುದಬಾಂಧವ ॥ ॥೧೦॥

ಶಂಕುಕರ್ಣ ಲಂಕೇಶನನುಜ ಶ್ರೀರಾಮ
ಕಿಂಕರನೆ ಅಕಳಂಕ ಮೂರುತೇ ॥ ॥೧೧॥

ಮರುತಮತಾಬ್ಧಿಯ ಸಾರಸುಧೆಯನಿತ್ತ
ಉರಗಾದ್ರಿವಾಸವಿಠ್ಠಲನ ನಿಜದೂತ ॥ ॥೧೨॥



೧೩೬

(ತಂದೆವೆಂಕಟೇಶವಿಠ್ಠಲಾಂಕಿತ)

ಉದಯರಾಗ ವಾರ್ಧಿಕಷಟ್ಪದಿ

ಶ್ರೀ ರಾಘವೇಂದ್ರಾ ನಮೋ ॥ ॥ಪ॥

ಶ್ರೀರಾಘವೇಂದ್ರ ಮಧ್ವಾಗಮಾಂಬುಧಿ ಚಂದ್ರ
ಶ್ರೀರಾಘವೇಂದ್ರ ಹೃದ್ರೋಗಹರ ಭಿಷಗೇಂದ್ರ
ಶ್ರೀರಾಘವೇಂದ್ರ ಮಂತ್ರಾಗರಾದ್ಭುತಚರಿತ
ಯೋಗೀಂದ್ರ ಕುಮುದಚಂದ್ರ ॥ ॥ಅ॥

ಆದಿಯಲಿ ಪ್ರಹ್ಲಾದನಾದಶಾಶ್ಯಾವರಜ
ಯೋಧ ಪ್ರತೀಪಭವ ಭೂದೇವ ವ್ಯಾಸಮುನಿ
ಯಾದಿ ವಿವಿಧತ್ವದಲಿ ಶ್ರೀಧವಾರ್ಚನೆಗೈದು ಮೋದಾಭಿವೃದ್ಧಿಗಾಗಿ
ವೇದವಿದ್ಯಾವಿಭವನಾದ ಬ್ರಹ್ಮೋಪಾಸ
ನಾದಿ ಸತ್ಕರ್ಮ ಪರವಾದಿನಿಗ್ರಹ ಪೂರ್ಣ
ಬೋಧಸಮಯ ಸಮಗ್ರ ಸಾಧಿಸಿದ ಸದ್ವೈಷ್ಣವೋದರದಿ ಜನಿಸಬಯಸೀ ॥
॥೧॥

ಕುಂಭಕೋಣದಿ ಶೋತ್ರಿಯಾಂಬರ ದಿನೇಶನಹ
ತಿಂಭಟ್ಟನಾತನ ನಿತಂಬಿನಿಯ ಗರ್ಭಾಮ್ಬು
ತಾಂಬುನಿಧಿಯಲಿ ಶಶಿಬಿಂಬದಂತಖಿಳಗುಣಸಂಭಾವಿತನು ವೇಂಕಟ
ನೆಂಬ ನಾಮದಿ ಜನಿಸಿ ಶಂಭುವೊಲು ವೇದಾಂತ
ಗುಂಭಪ್ರಕರಣಗಳ ಗಂಭೀರಭಾವವನು
ತುಂಬುಸಭೆ ವಿದುಷನಿಕರುಂಬ ಸಲೆಮೆಚ್ಚುವವೊಲಿಂಬಾಗಿ ಅಭ್ಯಸಿಸಿದ
॥೨॥

ಗುರುಸುಧೀಂದ್ರರ ಪರಮಕರುಣಾಕಟಾಕ್ಷಕ್ಕೆ
ಸರುವವಿಧದಲಿ ಪಾತ್ರತರನಾಗಿ ಮಠರಾಜ್ಯ
ಸರಸತೀಪೀಠವಾರುಧಿರ ಫಾಲ್ಗುಣ ಶುದ್ಧವೆರಡನೇದಿನವೇರಿದ
ಮರುತಮತಸಮಯ ಸುಸಾರ ವರ ವಿಹಾಯಸದಲ್ಲಿ
ಸ್ಫುರದ ಚೌಷಷ್ಠಿ ಕಲೆ ಪರಿಪೂರ್ಣಚಂದ್ರಮನ
ಪರಮಸುಕೃತೋದಯವು ಆರರೆ ನೋಳ್ಪರ ಪುಣ್ಯ ಕರತಲಾಮಲಕ ಪರವು
॥೩॥

ಅನೇಕ ಟೀಕಾರ ಶಾಸ್ತ್ರ ಕಾಂತನಿಹ
ಶಾಸ್ತ್ರಕೀತಯನ ಮಹಿಮಾಕ್ರಮ ಸ್ಥಾನವಂ
ಬಾ ಸಮಸ್ತ ಕ್ಷೇತ್ರಯಾತ್ರಾಗೈದುರಾಂತ ಸಾಗರಾಧಿಕಾಪ್ತ್ಯೈಪಿಕ
ಅಸುರೀಪ್ರಕ್ರಿಯೋಪಾಸಕರ  ನಿಗ್ರಹಿಸಿ
ಶ್ವಾಸಪತಿ ಸನ್ಮತೋಪಾಸನೆಯ ಕರುಣಿಸಿ ಪ್ರ
ಕಾಶಿಸಿದ ಪರಿಮಳಾಚಾರ್ಯ ಮುಕ್ತಾವಳೀ ಭಟ್ಟ ಭಾಷಾಚಾರ್ಯನೆನಿಸಿ ॥
॥೪॥

ಹುಡುಗನಿಗೆ ಅಸುವಿತ್ತು ಹಡೆವಳಿಗೆ ಜಲವಿತ್ತು
ಹಿಡಿಮಾತ್ರ ಮಣ್ಣಿನಲಿ ಬಡವನಿಗೆ ನಿಧಿತೋರಿ
ಕಡುಗರ್ವಿಯವಘಡಿಸಿ ಕೆಡಕಿ ನರಪನೊಲಿಸಿ ಪೊಡವಿಪನ ಮಾನ ಉಳಿಸಿ
ತೊಡವು ಸುಡದಲೆ ತೆಗಿಸಿ ಕೊಡುವುದನು ಸ್ವೀಕರಿಸಿ
ಅಡಿಭಜಿಪರಘ ಹರಿಸಿ ನುಡಿಸತ್ಯವನು ಮೆರೆಸಿ
ದೃಢಭಕ್ತಿಯನು ಒಲಿಸಿ ಕಡುಜ್ಞಾನನಿಧಿಯೆನಿಸಿ ಪೊಡವಿಯಲಿ ರಾಜಿಸಿದನು ॥
॥೫॥

ಹಿಂದೆ ಕೃತೆಯಲಿ ಕ್ರತುವನೊಂದಿ ಮಾಡಿದ ಕೋಲ
ನಂದನೆಯ ತೀರದಿಹ ಸುಂದರ ಮಂತ್ರಾಲಯದಿ
ನಂದ ಸುವಿರೋಧಿ ಪರಶ್ರಾವಣ ದ್ವಿತೀಯ ಭೃಗುಜಾಖ್ಯ ಶುಭವಾರದಿ
ತಂದೆ ಗುರು ಏನು ಗತಿ ಎಂದೆನುತ ದೈನ್ಯದಲಿ
ಹೊಂದಿ ಸ್ತುತಿಸುವ ಧರಣಿಬೃಂದಾಕರ ಸ್ವಪರ
ಸಂದೋಹಕಭಯ ನಲವಿಂದೋರಿ ಸಶರೀರ ಬೃಂದಾವನಸ್ಥನಾದ ॥ ॥೬॥

ಶತಸಪ್ತವರ್ಷವಾಹುತರಾಗಿ ಇಪ್ಪರಿ
ಕ್ಷಿತಿಶಯುಗಳಾಗುವುವು ಗತಿದೋರಿ ಸರ್ವರಿಗೆ
ಪ್ರಥಿತನಾಗುವ ಸತ್ಯವತಿಪುತ್ರ ನರಸಿಂಹ ಕ್ಷಿತಿಜೆಧವ ಶ್ರೀಕೃಷ್ಣರು

ಪ್ರತಿಯುಕ್ತಿವಂತೆ ಸನ್ನಿತರಾಗಿ ಬಂದವರ
ಮತ್ತಿಗ್ಗರುಪವಿತ್ತಿವರ ವಿತತಯುತ ಮಾಡುವರು
ಖ್ಯಾತಿಯುಳ್ಳ ಪುರುಷಾರ್ಥಪ್ರತತಿಗಾಕರ ಸ್ವರ್ಗಕೆಶಿಶಯವ್ವ ಮಂತ್ರಾಲಯ॥
॥೭॥

ಸಾಧಕರ ಹೆದ್ದೀಯು ಸಾಧುಸಂಕುಲಗೇಯು
ಬೋಧಕರಿಗಮರಗುರು ಪಾದಶ್ರಿತಕಲ್ಪತರು
ವಾದಿಗಳ ಹೃಚ್ಛೂಲ ವೇದಾಂತಕುಲಕಪಿಲ ಮಾಧವಾರಾಧನಪ್ರಶೀಲ
ವೇದಕಲ್ಮಶರಹಿತನಾದ ವಿದ್ಯಾಭರಿತ
ಬಾದರಾಯಣ ಪೂರ್ಣಬೋಧಮತ ವಿಸ್ತರಣ
ಘೋರ ಪಾಪಾಂಬುಧೆ ಸಾಧ್ಯವಾದಪುದೆ ಬಣ್ಣಿಸಲಗಾಧವೈಸಲೆ ಮಹಿಮೆಯ ॥
॥೮॥

ಅರುಣೋದಯದೊಳೆದ್ದು ಕರಣಶುದ್ಧಿಗಳಿಂದ
ಸ್ಮರಣಕೀರ್ತನ ಪುನಶ್ಚರಣ ಮಾಡಿದರಾಗೆ
ಕರುಣಾಳು ತಂದೆವೆಂಕಟೇಶವಿಠ್ಠಲಸ್ವಾಮಿ ಭರಣಮಾಡವ ಸೌಖ್ಯದಿ
ಮರಣಭಯ ತಪ್ಪುವುದು ಕರುಣಾಳು ಪ್ರತ್ಯಕ್ಷ
ಕರಣಗೋಚರನಾಗಿ ಸ್ಫುರಣಮಾಡುವ ಜ್ಞಾನ
ತರಣವಾಗುವುದು ವೈತರಣಿವಾಹಿನಿಯಿಂದ ನೆರೆನಂಬಿದವನ ಮುಕ್ತಾ ॥೯॥



## ೧೩೭

(ಶ್ಯಾಮಸುಂದರಾಂಕಿತ)

**ರಾಗ–ಮೋಹನ** **ಆದಿತಾಳ**

ಇಂಥಾ ಗುರುಗಳ ಕಾಣೆನಾ–ಭೂತಳದೊಳ
ಗಿಂಥಾ ಯತಿಗಳ ಕಾಣೆನಾ ॥ ॥ಪ॥

ಇಂಥಾ ಗುರುಗಳ ಕಾಣೆ–ಮಂತ್ರಮಂದಿರದಲ್ಲಿ
ನಿಂತು ಭಜಕರಿಗೆ–ಚಿಂತೆ ಕಳೆವ ಕರುಣಿ ॥ ॥೫॥

ದೇವ ಸ್ವಭಾವನೀತನು-ಸತತ ಪವನ
ದೇವನಾವೇಶಯುಕ್ತನು–ಆವ ಸಂಶಯ ವ್ಯಾಕೆ
ದೇವಾಧಿದೇವ ನರಮೃಗ-ದೇವ ನೀತನಭಕ್ತಿಗೆ
ಧಾವಿಸಿ ಬಂದ ಸ್ಥಂಭದಿ

ಭಾವಭಕ್ತಿಲಿ ಸೇವಿಪರಿಗೆ ಭವ
ನೋವು ಕಳೆದು ಸುರಗೋವಿನ ತೆರ ವರ
ವೀವನು ಕರುಣದಿ ಕಾವನು–ಪರಮ
ಪಾವನಚರಿತನು-ಕೋವಿದರೊಡೆಯನು ॥ ॥೬॥

ವರಹಜತಟದಲ್ಲಿರುವ–ಭಕ್ತರು ಕೂಗಿ
ಕರೆದಲ್ಲಿಗೋಡಿಬರುವ-ಮರುತಶಾಸ್ತ್ರದ ಮರ್ಮ
ಭರಿತವಾದಂಥ ದಿವ್ಯ–ಪರಿಮಳ ಗ್ರಂಥವ ವಿರಚಿಸಿ ಬುಧರಿಗೆ

ಗರೆದನು ಕರುಣದಿ-ಪೊರೆದನು
ಪರಮತ ಮುರಿದನು–ಜಗದೊಳ್
ಮೆರೆದನು ಹೊಸಹೊಸ ಪರಿಸುಮಹೋತ್ಸವ
ಹರುಷದಿ ಪ್ರತಿದಿನ ಗುರು ಸುಯಮೀಂದ್ರರ ಕರದಿಂ ಗೊಂಬರು ॥
॥೭॥

ಮಂದಜಾಸನ ಜನಕ–ಶ್ರೀವರ ಶ್ಯಾಮ
ಸುಂದರನಂಘ್ರಿಸೇತಕ–ಕಂದರ್ಪಶರ ಕರಿ
ವೃಂದ ಕೇಸರಿ ಎನಿಸಿ-ಗಂಧವಾಹನ ಮತಸಿಂಧುವಿಗೆ ಶಶಿ

ಯಂದದಿ ರಾಜಿಸಿ-ವೃಂದಾವನವನು
ಒಂದೆ ಮನದಲಿ-ವಂದಿಸಿ ಸ್ತವಿಸುವ

ಪುಷ್ಯಾಂಧಕರಿಗೆ-ಕಂಪರಕ್ಷಿಗಳ
ಕುಂಜವೆ ಕೊಡುವ-ಕರ್ಣಾದಿಕುಲಾಗ್ರಣಿ ॥ ॥೩॥



## ೧೩೮

### (ವಿಠ್ಠಲೇಶಾಂಕಿತ)

**ರಾಗ-ದುರ್ಗಾ** **ಆದಿತಾಳ**

ಎಂದು ಕಾಂಬೆ ಗುರುವೇ-ಧೊರೆಯೇ ॥ ॥ಪ॥

ಎಂದು ಕಾಂಬೆ ನಿನ್ನ ಚಂದಿರ ಮುಖಸಿರಿ
ತಂದೆ ಶ್ರೀ ರಾಘವೇಂದ್ರ ಇಂದು ದಯವ ತೋರೋ ॥ಅ॥

ಘೋರಸಂಸಾರದಲ್ಲಿ ಜಾರಿಹೋಯಿತು ಕಾಲ
ಸಾರಿ ಕೇಳುವೆ ಸುಕುಮಾರ ಪ್ರಹ್ಲಾದ ನಿನ್ನ-ಎಂದು ॥ ॥೧॥

ನಾನಾ ರೋಗಗಳಲ್ಲಿ ಕ್ಷೀಣವಾಯಿತು ದೇಹ
ಏನು ಸ್ಥಿರವೋ ತನು ಮೌನಿವ್ಯಾಸನೆ ನಿನ್ನ-ಎಂದು ॥ ॥೨॥

ಕ್ಲೇಶ ಕಷ್ಟಗಳಲ್ಲಿ ಮಾಸಿ ಹೋಯಿತು ಬುದ್ಧಿ
ದೈಶಿಕವರ ವಿಠ್ಠಲೇಶ ದಾಸನೆ ನಿನ್ನ-ಎಂದು ॥ ॥೩॥



೧೩೯

(ಗುರುಗೋವಿಂದವಿಠ್ಠಲಾಂಕಿತ)

(ವೃಂದಗಾನದಲ್ಲಿ)

ರಾಗ–ಆರಭಿ ಆದಿತಾಳ

ಸ್ಮರಿಸಿ ಬದುಕಿರೋ - ಗುರುರಾಘವೇಂದ್ರ ರಾ
ಚರಣಕಮಲವಾ - ದುರಿತ ತರಿಯುವಾ ॥ ॥ಪ॥

ಯಂತ್ರೋದ್ಧಾರರಾ - ಅಂತರಂಗರಾ
ಮಂತ್ರಮಂದಿರಾ - ಕಾಂತಿಭೂತರಾ ॥ ॥೧॥

ಕುಂತಿಜಾತರಾ ಏ - ಕಾಂತ ಭಕ್ತರಾ
ಸಂತ ಗುರುಗಳಾ ನೀ - ವಿಂತುನಂಬಿರೋ ॥ ॥೨॥

ಪಂಕಜಾಕ್ಷನಾ - ಅಂಕ ಧರಿಸಿಹಾ
ಬಿಂಕ ಗುರುಗಳಾ – ಲಂಕೇಶನನುಜರಾ ॥ ॥೩॥

ಖಂ ಪಾತಾಳ ಭೂ - ವ್ಯಾಪಿಸಿರುವರಾ
ಅಪಾರ ಮಹಿಮರಾ - ಕೋಪರಹಿತರಾ ॥ ॥೪॥

ಮೂಕಬಧಿರರಾ - ನೇಕ ರೋಗಿಯರಾ
ನೂಕಿ ತಾಪವ - ದುಃಖಕಳೆಯುವಾ ॥ ॥೫॥

ಮಾಯಿಮತಗಳಾ - ಸಾಯಬಡೆದರಾ
ಆರ್ಯಮಧ್ವರಾ - ಪ್ರೀಯ ಶಿಷ್ಯರಾ ॥ ॥೬॥

ಗುರುಗೋವಿಂದವಿಠ್ಠಲನಾ – ಚರಣ ಸರಸಿಜಾ
ನಿರುತ ಸ್ಮರಿಪರಾ - ವರವ ಕೊಡುವರಾ || ||೭||



## ೧೪೦

### (ಕೃಷ್ಣವಿಠ್ಠಲಾಂಕಿತ)

**ರಾಗ–ಕಾಂಬೋಡಿ** **ಝಂಪೆತಾಳ**

ಆವ ಗುರುಗಳಿಗುಂಟು ಈ ವೈಭವವು
ಪವನನೊಡೆಯನ ಭಕ್ತ ರಾಘವೇಂದ್ರರಿಗಲ್ಲದೆಲೆ || ||ಪ||

ವರ ತುಂಗಾತೀರದಲಿ ಮೆರೆವ ಮಂತ್ರಾಲಯದಿ
ತರಣಿಯಂದದಿ ಮೆರೆದು ಭಕ್ತರನು ಪೋಷಿಸುವ
ಶರಣರಕ್ಷಕನೆಂಬ ಬಿರುದಿನಿಂದ ತಾ ಮೆರೆವ
ವರಮಧ್ವ ಕುಲಚಂದ್ರ ಗುರುರಾಜಗಲ್ಲದೇ || ||೧||

ಸಂತರೆಲ್ಲರು ಬಂದು ಶಾಂತಿಯಲಿ ನಿಂದು
ಕಂತುಪಿತನ ಭಕ್ತ ಚಿಂತೆಯನ್ನು ಹರಿಸೆಂದು
ಸಂತತವು ಬೇಡುತಿಹ ಶಾಂತರಾಗಿಹಜನರ
ಸಂತೋಷದಲಿ ಕಾಯ್ವ ಗುರುರಾಜಗಲ್ಲದೇ || ||೨||

ಕಾವಿವಸ್ತ್ರವ ಧರಿಸಿ ಕವಿದಭ್ರಮೆಯ ಬಿಡಿಸಿ
ಭೂವಿಜೆರಮಣನ ಭಜಿಪ ಕವಿಕುಲೋತ್ತಮ ನಮ್ಮ
ಸೇವಕರ ಸುರಧೇನು ಪಾವನಾತ್ಮನು ಆದ
ಕೃಷ್ಣವಿಠ್ಠಲನ ಭಕ್ತ ಗುರುರಾಜಗಲ್ಲದೇ || ||೩||

—●—

॥ ಶ್ರೀಃ ಹರಿಃ ಓಂ ॥

ಯತಿಪೀಳಿಗೆ

ಭಾಗ - ೩

# ಶ್ರೀ ವಾದಿರಾಜ ಗುರುಸಾರ್ವಭೌಮರ ಪರವಾದ ಕೀರ್ತನೆಗಳು

॥ ಶ್ರೀಃ ಹರಿಃ ಓಂ ॥

# ಯತಿಪೀಳಿಗೆ

## ಭಾಗ - ೩

# ಶ್ರೀ ವಾದಿರಾಜ ಗುರುಸಾರ್ವಭೌಮರ ಪರವಾದ ಕೀರ್ತನೆಗಳು

# ಶ್ರೀ ವಾದಿರಾಜರು (ಕ್ರಿ. ಶ. 1480—1600)

ಧ್ಯಾನಶ್ಲೋಕಗಳು—

ತಪೋ ವಿದ್ಯಾವಿರಕ್ತ್ಯಾದಿ ಸದ್ಗುಣೌಘಾಕರಾನಹಮ್ ।
ವಾದಿರಾಜ ಗುರೂನ್ವಂದೇ ಹಯಗ್ರೀವದಯಾಶ್ರಯಾನ್ ॥೧॥

ಕಾಮಧೇನುರ್ಯಥಾ ಪೂರ್ವಂ ಸರ್ವಾಭೀಷ್ಟಫಲಪ್ರದಾ ।
ತಥಾ ಕಲೌ ವಾದಿರಾಜ ಶ್ರೀಪಾದೋಽಭೀಷ್ಟದಃ ಸತಾಮ್ ॥೨

ಮಾಯೀಭವೈರಿಣೇ ಮಾಧ್ವರಾದ್ಧಾಂತವನಚಾರಿಣೇ ।
ವಚೋನಖರಿಣೇ ವಾದಿರಾಜಕೇಸರಿಣೇ ನಮಃ ॥೩॥

ವಾಜಿವಕ್ತ್ರ ಪದದ್ವಂದ್ವಂ ಸದಾ ಸಂಸೇವ್ಯ ರಾಜತೇ ।
ವಾದಿರಾಜೇಂದುರಾಜೋ ಮೇ ಭೂಯಾತ್ಸಂತಾಪಹಾರಕಃ ॥೪॥

ಕೋಲವ್ಯಾಸ ಹಯಗ್ರೀವ ಪದಾಬ್ಜ ಪರಿಸೇವಕಃ ।
ಭಾವಿವಾಯುರ್ವಾದಿರಾಜಃ ಕಲ್ಪದ್ರುಃ ಕಾಮದೋಽಸ್ತು ನಃ ॥೫॥

## ಶ್ರೀ ಸೋದೇಮಠದಯತಿಪರಂಪರಾ

೧. ಶ್ರೀ ಮದಾನಂದತೀರ್ಥಭಗವತ್ಪಾದರು
೨. ಶ್ರೀ ವಿಷ್ಣುತೀರ್ಥರು
೩. ಶ್ರೀ ವ್ಯಾಸತೀರ್ಥರು
೪. ಶ್ರೀ ವೇದ್ಯತೀರ್ಥರು
೫. ಶ್ರೀ ವೇದಗರ್ಭತೀರ್ಥರು
೬. ಶ್ರೀ ವರೇಶತೀರ್ಥರು

೭. ಶ್ರೀ ವಾಮನತೀರ್ಥರು
೮. ಶ್ರೀ ವಾಸುದೇವತೀರ್ಥರು
೯. ಶ್ರೀ ವೇದವ್ಯಾಸತೀರ್ಥರು
೧೦. ಶ್ರೀ ವರಾಹತೀರ್ಥರು
೧೧. ಶ್ರೀ ವೇದಾತ್ಮತೀರ್ಥರು
೧೨. ಶ್ರೀ ವಿಶ್ವವಂದ್ಯತೀರ್ಥರು
೧೩. ಶ್ರೀ ವೇದಾಂಗತೀರ್ಥರು
೧೪. ಶ್ರೀ ವಿದ್ಯಾಪತಿತೀರ್ಥರು
೧೫. ಶ್ರೀ ವಿಶ್ವವಂದ್ಯತೀರ್ಥರು
೧೬. ಶ್ರೀ ವಿಶ್ವತೀರ್ಥರು
೧೭. ಶ್ರೀ ವಿಠ್ಠಲತೀರ್ಥರು
೧೮. ಶ್ರೀ ವರದರಾಜತೀರ್ಥರು
೧೯. ಶ್ರೀ ವಾಗೀಶತೀರ್ಥರು
೨೦. **ಶ್ರೀ ವಾದಿರಾಜಯತಿವರ್ಯರು**
೨೧. ಶ್ರೀ ವೇದವೇದ್ಯತೀರ್ಥರು
೨೨. ಶ್ರೀ ವೇದನಿಧಿತೀರ್ಥರು
೨೩. ಶ್ರೀ ವರದರಾಜತೀರ್ಥರು
೨೪. ಶ್ರೀ ವಿಶ್ವಾದಿರಾಜತೀರ್ಥರು
೨೫. ಶ್ರೀ ವಾದಿವಂದ್ಯತೀರ್ಥರು
೨೬. ಶ್ರೀ ವಿಶ್ವವೇದತೀರ್ಥರು
೨೭. ಶ್ರೀ ವಿಬುಧವರ್ಯತೀರ್ಥರು
೨೮. ಶ್ರೀ ವಿಶ್ವನಿಧಿತೀರ್ಥರು
೨೯. ಶ್ರೀ ವಿಶ್ವಾಧೀಶತೀರ್ಥರು
೩೦. ಶ್ರೀ ವಿಶ್ವೇಶತೀರ್ಥರು
೩೧. ಶ್ರೀ ವಿಶ್ವಪ್ರಿಯತೀರ್ಥರು

೩೨. ಶ್ರೀ ವಿಶ್ವೇಂದ್ರತೀರ್ಥರು

೩೩. ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು

(ಈಗ ಸೋದೇಮಠದ ಪೀಠಾಧಿಪತಿಗಳಾಗಿರುವವರು)



೧೪೧

## ಶ್ರೀ ವಾದಿರಾಜರ ಪರವಾದ ಕೀರ್ತನೆಗಳು

(ಪುರಂದರವಿಠಲಾಂಕಿತ)

ರಾಗ–ಭೀಮಪಲಾಸ್ ಅಟತಾಳ

ಕಂಡೆ ಕಂಡೇ ರಾಜರ ಕಂಡೆ ಕಂಡೇ ||ಪ||

ಕಂಡೆ ಕಂಡೆನು ಕರುಣನಿಧಿಯನು
ಕರಗಳಂಜಲಿ ಮಾಡಿ ಮುಗಿವೆನು
ಲಂಡೆ ಮಾಯ್ಗಳ ಗುಂಡಿಯೊಡೆಯಲು
ದ್ವಂಡ ಮಾರುತಿ ಪದಕೆ ಬರುವರ || ||ಅ||

ಪಂಚವೃಂದಾವನದಿ ಮೆರೆಯುವ
ಪಂಚಬಾಣನ ಪಿತನ ಸ್ಮರಿಸುವ
ಪಂಚನಂದನ ಮುಂದೆ ಆಗುತ
ಮಿಂಚಿನಂದದಿ ಪೊಳೆವ ಮಹಿಮರ ||೧||

ಪಂಕ ಪಾತಕ ಕಳೆವ ದೇವನ
ಪಂಕಜಾರಿನಿಭೇಂದು ವಕ್ತ್ರನಾ

ತಂಕವಿಲ್ಲದೆ ಭಜಿಪ ಸುಜನರ
ಶಂಕೆ ಬಿಡಿಸುವ ಶಂಕರೇಶನ ॥ ||೨||

ಭಜಿಸುವರಿಗೆ ಭಾಗ್ಯಕೊಡುವರ
ಋಜುಗಣೇಶಮರೇಂದ್ರವಂದಿತ
ನಿಜ ಪುರಂದರವಿಠ್ಠಲೇಶನೆ
ಭಜನೆ ಮಾಡುವ ಭಾವಿಮರುತರ ॥ ||೩||



## ೧೪೨

### (ವಿಜಯವಿಠ್ಠಲಾಂಕಿತ)

ರಾಗ–ಶಂಕರಾಭರಣ ಆದಿತಾಳ

ಗುರುವಾದಿರಾಜ ರವಿಕೋಟಿತೇಜಾ
ಶರಣೆಂಬೆನಯ್ಯ ಸತತಗೇಯಾ ॥ ॥ಪ॥

ನಂಬಿದೆನು ನಿನ್ನ ದಯಾಸಂಪನ್ನ
ಸಂಭ್ರಮದಲೆನ್ನ ಪೊರೆಯೊ ಪ್ರಸನ್ನ ॥ ॥೧॥

ಮಾಯಿಗಳ ಗೆದ್ದ ಮಮತಾ ಬದ್ಧಾ
ಗಾಯನಪ್ರಸಿದ್ಧ ಗುಣದಲಿ ಇದ್ದಾ ॥ ॥೨॥

ಸಂತತವಿರಕ್ತ ಜೀವನ್ಮುಕ್ತಾ
ಸಂತಾದಿ ಸುಶಕ್ತ ಹರಿನಾಮ ಭೋಕ್ತಾ ॥ ॥೩॥

ಸ್ವಾದಿಪುರವಾಸಾ ಸಾಧುಗುಣಭಾಸಾ
ಸದ್ಭಕ್ತ ಪೋಷ ಮಧ್ವಮತ ಸಂತೋಷ ॥ ॥೪॥

ವಿಜಯವಿಠ್ಠಲನ್ನ ನೆನೆಸುವ ಘನ್ನ
ತ್ರಿಜಗ ಹಯವದನನೆ ಪರನೆಂಬೊ ಪೂರ್ಣ ॥ ॥೫॥

●

## ೧೪೩

### (ಗೋಪಾಲವಿಠ್ಠಲಾಂಕಿತ)

ರಾಗ–ಸುರುಟಿ ಆದಿತಾಳ

ವಾದಿರಾಜ ಮುನಿಪಾ–ಹಯಮುಖ
ಪಾದಕಮಲ ಮಧುಪಾ ॥ ॥ಪ॥

ಆದರವನು ತವಪಾದಕಮಲದಲಿ
ನೀದಯದಲಿ ಕೊಟ್ಟಾದರಿಸೆನ್ನನು ॥ ॥ಅ॥

ಮೂಷಕ ಬಿಲದಿಂದಾ–ಉದರದ
ಆಸೆಗೆ ಬರಲೊಂದಾ
ವಾಸುಕಿ ಭಯದಿ ನಿವ್ಹಾಸದಿ ಬರೆ
ಕ್ಲೇಶ ಕಳೆದು ಸಂತೋಷಗೈಸಿದೆ ॥ ॥೧॥

ಮುಂದೆ ಭೂತವರನಾ–ಪ್ರೇರಿಸಿ
ಹಿಂದೆ ಓಬ್ಬರನ್ನಾ
ನಂದದಿಂದ ಜನವೃಂದ ಮುದದೊಳ್
ಕುಂಭಕೋಣಪುರದಂದಣ ನಡೆಸಿದೆ ॥ ॥೨॥

ಕ್ಷಿತಿಯೊಳು ಸತಿ ತನ್ನಾ–ವಲ್ಲಭ
ಮೃತಿಯೈದಿರೆ ಮುನ್ನಾ

ಅತಿಶೋಕದಿ ಬಂದು ನುತಿಸಲು ಆ
ಪತಿಯನು ಬದುಕಿಸಿ ಹಿತದಿ ರಕ್ಷಿಸಿದೆ ॥ ॥೩॥

ನರಪತಿವ್ಯಾಧಿಯಲಿ-ಬಳಲ್ವದ
ತ್ವರಿತದಿ ನೀ ಕೇಳಿ
ಹರುಷದಿ ವ್ಯಾಧಿಯ ಪರಿಹರಿಸ್ಯವನಿಗೆ
ಹರುಷದಿಂದಲಭಯವ ತೋರಿದೆ ॥ ॥೪॥

ಶಾಸ್ತ್ರ ಪ್ರಸಂಗದಲಿ-ನಾರಾಯಣ
ಭೂತರ ಗೆಲಿದಲ್ಲಿ
ಆತುರದಿಂದಲಿ ಮಾತನಾಡಿದ ಶ್ರೀ-
ನಾಥನ ಮೂರ್ತಿಯ ಪ್ರೀತಿಲಿ ತರಿಸಿದೆ ॥ ॥೫॥

ತುರಗವದನ ಪಾದಾ-
ಧರಿಸಿಕೊಂಡ ಮೋದಾ
ಭರಿತರಾಗಿ ಹಯಗೊರಳಮಡ್ಡಿ ತವ
ಕರದಿಂದುಣಿಸಿದ ಗುರುವರ ಸುಖಕರ ॥ ॥೬॥

ಆ ಮಹಾ ಗೋಪಾಲವಿಠ್ಠಲನ್ನ-ಪದಯುಗ
ತಾಮರಸಗಳನ್ನಾ
ಪ್ರೇಮದಿ ಭಜಿಸುವ ಧೀಮಂತರಿಗೆ ಸು-
ಕಾಮಿತವನು ಕೊಟ್ಟಾ ಮುನಿಪಗೆ ॥ ॥೭॥



## ೧೪೪

## (ವೇಣುಗೋಪಾಲವಿಠ್ಠಲಾಂಕಿತ)

ರಾಗ-ಮೋಹನ ಆದಿತಾಳ

ವಾದಿರಾಜರೆ ನಿಮ್ಮ ಪಾದಕ್ಕೆರಗಿ ನಾ
ಮೋದದಿಂ ಬೇಡುವೆ ಮಾಧವನ ತೋ ರೋ ॥ ॥ಪ॥

ಸಕಲವೇದ ಪುರಾಣಶಾಸ್ತ್ರಗಳೆಲ್ಲಾ
ಪ್ರಕಟಿಸಿದೆ ಕನ್ನಡದಿ ಪ್ರೇಮದಿಂದ
ನಿಖಿಳ ಜನರು ತಾವಾನಕದುಂದುಭಿಸುತನ
ಭಕುತಿಯ ಪಡೆದು ಮೇಣ್ಮುಕುತಿಯ್ಯೆದಲಿ ಎಂದು ॥ ॥೧॥

ಗಣನೆ ಇಲ್ಲದೆ ಕೀರ್ತನೆ ಸುಳಾದಿಗಳನ್ನು
ಮನವೊಲಿದು ಮಾಡಿದ್ದು ಜನರು ಪಠಿಸಿ
ವನಜನಾಭನ ಕರುಣವನು ಪಡೆದು ತಾ
ವನುಭವಿಸಲಾನಂದವನೆನುತಲಿ ॥ ॥೨॥

ನಿನ್ನ ನೆನೆಯೆ ಧನ್ಯ ನಿನ್ನ ಪಾಡಲು ಮಾನ್ಯ
ನಿನ್ನ ಕೊಂಡಾಡಲು ಪಾಪಶೂನ್ಯ
ನಿನ್ನವನೆನೆ ವೇಣುಗೋಪಾಲವಿಠ್ಠಲ
ಮನ್ನಿಸಿ ಸದ್ಗತಿ ಪಾಲಿಪ ಮುದದಿ ॥ ॥೩॥



## ೧೪೫

## (ಜಗನ್ನಾಥವಿಠ್ಠಲಾಂಕಿತ)

ರಾಗ–ಆರಭಿ ಆದಿತಾಳ

ವಾದಿರಾಜ ಶರಣರ ಸುರಭೂಜ–ವಾದಿರಾಜ ॥ ॥ಪ॥

ವಾದಿರಾಜ ಪ್ರತಿವಾದಿಗಜೇಂದ್ರ ಮೃ-
ಗಾಧಿರಾಜ ವಿಭುಧೋದಧಿಚಂದ್ರ ॥ ॥ಅ॥

ಭಾಗೀರಥಿಯಂತ್ಯೋಗಿವರ ಶ್ರೀ
ವಾಗೀಶ ಕರಾಂಬುಜ ಸಂಭವನೇ ॥ ॥೧॥

ಪಾವಮಾನಿ ಸುಮತಾವಲಂಬಿಗಳ
ಪಾವನವೆಂದೀವುದು ವರವ ॥ ॥೨॥

ಎಲರುಣಿ ಭಯಕಂಜಿಲಿ ನಿಮ್ಮಾಸನ
ಕೆಳಗಿರೆ ಕಂಡದನುಳುಹಿದೆ ಕರುಣಿ ॥ ॥೩॥

ಗರಮಿಶ್ರಿತ ನರಹರಿ ನೈವೇದ್ಯವ
ಅರಿತುಂಡು ಅದನರಗಿಸಿಕೊಂಡೆ ॥ ॥೪॥

ಹಯವದನನ ಪದದ್ವಯ ಭಜಕಾಗ್ರಣಿ
ದಯದಿ ನೀ ವಿಪ್ರಗೆ ನಯನವನಿತ್ತೇ ॥ ॥೫॥

ಅರ್ಥಿಗಳಿಗೆ ಪರಮಾರ್ಥವ ತೋರಿಸಿ
ತೀರ್ಥಪ್ರಬಂಧವ ಕೀರ್ತನೆಗೈದೆ ॥ ॥೬॥

ಅದ್ವೈತಸಮಾಧಿ ಮಧ್ವಸುಸಿದ್ಧಾಂತ
ಇಧ್ಮಜಂಹದಿ ಪ್ರಧ್ವಂಸಿಸಿದೆ ॥ ॥೭॥

ನಮಿಪೆ ತ್ವತ್ಪದ ಕಮಲಗಳಿಗೆ ಮ-
ಧ್ವಮತಸರೋರುಹ ದ್ಯುಮಣಿಯೆ ನಿರುತ ॥ ॥ ೮ ॥

ಯಮಿವರನೆ ತ್ರಿವಿಕ್ರಮನ ರಥೋತ್ಸವ
ಸಮಯವಿದೆಂದುತ್ಕ್ರಮಣವ ತೋರೆದೆ ॥ ॥೯॥

ಬಂದು ಕರೆಯೆ ಪುರಂದರನಾಳ್ಗಳು
ಹಿಂದಟ್ಟಿದ ಕರ್ಮಂದಿಗಳರಸನೇ ॥ ॥೧೦॥

ಪೂತಾತ್ಮ ಜಗನ್ನಾಥವಿಠ್ಠಲನ
ಖ್ಯಾತಿಯ ನುತಿಸುವನಾಥ ಜನಾಪ್ತ ॥ ॥೧೧॥



## ೧೪೬

### (ಶ್ರೀದವಿಠ್ಠಲಾಂಕಿತ)

ರಾಗ–ಪೂರ್ವಿ ಆದಿತಾಳ

ರಾಜರ ಭಾಗ್ಯವಿದು–ಸೋದೇ
ರಾಜರ ಭಾಗ್ಯವಿದು ॥ ॥ಪ॥

ಸೋಜಿಗವೆನಿಸಿ ವಿರಾಜಿಸುತಿದಕೋ ॥ ॥ಅ॥

ಬುಧಜನಕೊಪ್ಪುವ ಪದ ಸುಳಾದಿ ಖಳ
ರೆದೆಗಿಚ್ಚೆನಿಸುವ ಚತುರತೆಯು
ಸದಮಲ ನಾನಾವಿಧ ಗ್ರಂಥದಿ ಹಯ
ವದನನ ಪೂಜೆಯು ಯಜಿಸುವುದೆಲ್ಲಾ ॥ ॥೧॥

ತಮ್ಮಯ ಸೇವವು ಒಮ್ಮೆಗು ಬಿಡದು
ತುಮ್ಮಯ ಬಿಡದಲೆ ಸಮ್ಮೊಗದಾ
ಆಮ್ಮಹ ಶಾಸಕ ಬೊಮ್ಮಭೂತವನು
ಘಮ್ಮನೆ ನಿರ್ಮಿಸಿ ರಮ್ಮಿಪ್ರದೆಲ್ಲಾ ॥ ॥೨॥

ಮೇದಿನಿಯೊಳಗೆ ಶುಭೋದಯಕಾರಕ
ಸ್ವಾದಿ ಸ್ಥಳವು ಸರ್ವಾಧಿಕವೈ
ಸಾದದ್ವಯದಗಾಧಮಹಿಮನೇ ಈ
ಶ್ರೀದವಿಠ್ಠಲನಾರಾಧಿಪ್ರುದೆಲ್ಲ ॥ ॥೩॥



## ೧೪೭

### (ರಘುಪತಿವಿಠ್ಠಲಾಂಕಿತ)

**ರಾಗ–ಸುರುಟಿ** **ಆದಿತಾಳ**

ವಾದಿರಾಜ ಮದ್ಗುರುರಾಯ ॥ ॥ಪ॥

ಮಾಧವನಂಘ್ರಿ ಆರಾಧಿಸುವ ಧೀರ ॥ ॥ಅ॥

ಭೇದಾರ್ಥಸಿದ್ಧಾಂತವ ವಾದಿಗಳಿಗಿದಿರಾಗಿ
ಸಾಧಿಸುತ ಜನರ ಮೋದ ಪಡಿಸುವಂಥ ॥ ॥೧॥

ಮಂಗಳಾಂಗನಂತರಂಗದಿ ನೋಡುತ
ಸಂಗೀತದಲಿ ಪಾಡೆ ಭಂಗ ಓಡಿಸುವಂಥ ॥ ॥೨॥

ನಂದಿವಾಹನ ಅಮರೇಂದ್ರವಂದ್ಯ ನಮ್ಮ
ಇಂದಿರಾಪತಿಯೆಂದು ಮಂದರಿಗರುಪುವ ॥ ॥೩॥

ಬುಧರ ಮಧ್ಯದಿ ಸುಹೃದಯರೆನಿಸುವಂಥ
ಸದಾ ಸುಖನಿಧಿ ಹಯವದನನ ನಿಜದಾಸ ॥ ॥೪॥

ಯತಿಶಿರೋಮಣಿ ಸುಖವುಳ್ಳ ವಿಜ್ಞಾನಿ
ಪತಿತರುದ್ಧರಿಸುವ ಮತಿಮಹಖಿತಿ ದೂರ ॥ ॥೫॥

ನರರಂತೆ ನೀನಲ್ಲ ಸುರರಂತೆ ಹರಿಯಲ್ಲ
ಮರಗಳಂತೆ ಕಲ್ಪತರುವಲ್ಲ ಕೇಳಯ್ಯ ॥ ॥೬॥

ರಘುಪತಿವಿಠ್ಠಲ ಸಮ್ಯೋಗನಾಗಿ ನಿಮಗಿಪ್ಪ
ಅಗಣಿತ ಗುಣಧಾಮನ್ನಗಲದ ಮನವುಳ್ಳ ॥ ॥೭॥



## ೧೪೮

### (ಅಭಿನವಜನಾರ್ದನವಿಠ್ಠಲಾಂಕಿತ)

**ರಾಗ–ಮಧ್ಯಮಾವತಿ** **ಆದಿತಾಳ**

ಜಯ ಜಯ ಶ್ರೀ ವಾದಿರಾಜ ॥ ॥ಪ॥

ಜಯ ಜಯ ಆಶ್ರಿತಕಲ್ಪಭೂಜ ॥ ॥ಅ॥

ದಂಡ ಕಮಂಡಲ ಕರದವನೆ
ಮಂಡಲದೊಳು ಬಹು ಮೆರೆದವನೆ ಉ
ದ್ದಂಡ ಖಳರ ಮತ ಮುರಿದವನೆ–ಚೆಲ್ವ
ಪುಂಡರೀಕನಯನನ ತೋರ್ದವನೇ ॥ ॥೧॥

ಭವಭಯಮದವನೆ ಮಣಿಸಿದನೆ–ಶುದ್ಧ
ಸುವಿವೇಕಶಿರೋಮಣಿ ಎನಿಸಿದನೆ–ನಮ್ಮ
ಅವನಿಪ ಹಯಾಸ್ಯನ ಭಜಿಸುವನೆ–ಎ
ನ್ನವಗುಣಗಳ ದೂರ ನಿಲಿಸಿದನೇ ॥ ॥೨॥

ಕವಿಜನರಿಗೆ ಸುಖ ಸುರಿಸಿದನೆ–ನಿ
ನ್ನವರವನೆಂದೆನಿಸಿದನೆ–ಅಭಿ
ನವಜನಾರ್ದನವಿಠ್ಠಲನ ಒಲಿಸಿದನೆ–ಮನ
ಕವಿಹಿತರಸ ದೂರ ನಿಲಿಸಿದನೇ ॥ ॥೩॥



## ೧೪೯

(ಬಾದರಾಯಣವಿಠ್ಠಲಾಂಕಿತ)

**ರಾಗ–ಕಾಂಬೋಧಿ** **ಝಂಪೆತಾಳ**

ದಿಕ್ಕು ದೆಸೆ ನೀನೇ ಗುರು ವಾದಿರಾಜ ॥ ॥ಪ॥

ಇಕ್ಕೋ ಈ ದೇಹವನು ನಿನಗರ್ಪಿಸಿದೆನೋ ॥ ॥ಅ॥

ಇನ್ನೊಬ್ಬರಿಗೆ ನಾನು ಶರಣೆನ್ನಲಾರೆನೋ
ನಿನ್ನಡಿಗೆ ಕೊರಳ ಕಟ್ಟಿದೆನೋ ಸತ್ಯ
ಅನ್ಯಾಯ ನ್ಯಾಯಗಳ ಬಲ್ಲ ಮಹಿಮನೊ ನೀನು
ನಿನ್ನ ನಂಬಿದಮೇಲೆ ಕೆಡಿಸುವವ ನೀನಲ್ಲ ॥ ॥೧॥

ಆರಾರಿಗಾಲ್ಪರಿದರಾರೇನ ಮಾಡುವರು
ಧೀರ ವಾಗೀಶ ಕರಕಮಲಜಾತ

ಧಾರುಣಿಯ ಮೇಲಿನ್ನು ನಿನ್ನಂಥ ಕರುಣಿಗಳ
ಆರಾರಿಸಿ ಹುಡುಕಿದರು ನಾ ಕಾಣೆ-ಎನ್ನಾಣೆ ॥ ॥೨॥

ವೇದವೇದ್ಯಾಚಾರ್ಯ ವಂದಿತಪಾದಾಂಬುಜ
ಸಾಧುಕುಲತಿಲಕ ಸರ್ವಜ್ಞ ಮುನಿಯೇ
ಶ್ರೀ ಧವಲಗಂಗಾತಟನಿಲಯ ಸಲಹೆಮ್ಮ
ಬಾದರಾಯಣವಿಠ್ಠಲ ಭಕ್ತಾಗ್ರಣಿಯೆ-ಎಮಗೆ ॥ ॥೩॥



## ೧೫೦

### (ವೆಂಕಟವಿಠ್ಠಲಾಂಕಿತ)

ರಾಗ-ಆನಂದಭೈರವಿ ಆದಿತಾಳ

ಇದಿರ್‍ಯಾರೋ ಗುರುವೇ ಸಮರ್‍ಯಾರೋ ಶ್ರೀ ಹಯ
ವದನಪದ ಪ್ರಿಯ ವಾದಿರಾಜ ॥ ॥ಪ॥

ಸಿರಿನಿಲಯನ ಗುಣಗಳ ಸ್ಮರಿಸುತ
ಗುರು ಮಧ್ವಮುನಿಪನ ಮಹಿಮೆಯ ಪೊಗಳುತ
ನೆರೆದಿದ್ದ ಮಾಯ್ಗಳ ಕರಿಗಳ ಶಿರವನು
ಭರದಿ ಛೇದಿಪ ಬಲಿ ವಿಬುಧಕೇಸರಿಯೇ ॥ ॥೧॥

ಹರಿತತ್ತ್ವಸಾರ ಸಜ್ಜನರಿಗೆ ತಿಳಿಯದೇ
ಪರಿಪರಿ ಕುಸಮಯ ತಮ ಕವಿಯಲು ನೀ
ಸರಸಭಾರತಿ ಮೊದಲಾದ ಗ್ರಂಥಗಳನು
ವಿರಚಿಸಿ ತಮ ಹರಿಸಿದ ದಿನಕರನೇ ॥ ॥೨॥

ಸೋದೆಯಪುರದಲ್ಲಿರುವ ಹಯವದನನ
ಮೋದದಿ ಭಜಿಸುತ ಈ ಧರೆಯೊಳ್ ಪೂರ್ಣ
ಬೋಧತೀರ್ಥರ ಪಾದಸೇವಕರಿಗೆ
ಆದರವೂಳ್ಪ ಯತಿಕುಲಶಿರೋಮಣಿಯೇ ॥ ॥೩॥

ಮುದ್ದು ಲಕ್ಷ್ಮೀಶ ವೆಂಕಟವಿಠ್ಠಲನ
ಹೊದ್ದಿದ ಭಕ್ತರ ಸಂತಾಪ ಕಳೆಯುತ
ಮಧ್ವಮುನಿಯ ಮತದುಗ್ಧವಾರಿಧಿಯೊಳು
ಉದ್ಭವಿಸಿದ ಪೂರ್ಣಶುದ್ಧಚಂದ್ರಮನೇ ॥ ॥೪॥



## ೧೫೧

### (ಗೋಪತಿವಿಠ್ಠಲಾಂಕಿತ)

ರಾಗ–ಯದುಕುಲಕಾಂಬೋಧಿ ಆದಿತಾಳ

ವಾದಿರಾಜ ಗುರುರಾಜರ ಕೊಂಡಾಡೀ–ಜನಿಪ ಸುಖವನು ಬೇಡಿ ॥ ॥ಪ॥

ಸೋದೆ ಸ್ಥಳದಲಿ ನಿಂತು ಮೆರೆವನಯ್ಯ–ಹಯವದನನ ಪ್ರಿಯ ॥ ॥ಅ॥

ಮೋದತೀರ್ಥಮತವಾರಿಧಿಪೂರ್ಣಚಂದ್ರ–ಸದ್ಗುಣ ಸಾಂದ್ರಾ
ಮೇದಿನಿಯೊಳಗಿಹ ತೀರ್ಥಕ್ಷೇತ್ರವ ಚರಿಸಿ–ಸಂತರನುದ್ಧರಿಸಿ
ಸಾದರದಲಿ ಹರಿಮಹಿಮೆಯ ಕೊಂಡಾಡಿ–ಪ್ರಬಂಧವನು ಮಾಡಿ
ವಾದಿಗಳೆಂಬುವ ಗಜಕುಲಹರ್ಯಕ್ಷ–ನಾಗಿಹ ಹರಿದೀಕ್ಷಾ ॥ ॥೧॥

ಎರಡೀರರುವತ್ತು ವಿದ್ಯಾಪೂರ್ಣನೆನಿಸೀ–ದೂಷಕರನು ಜಯಿಸೀ
ಬಿರುದುಗಳನಪಹರಿಸಿದ ಯತಿವರ್ಯ–ಹರಿಕಾರ್ಯ ಧುರ್ಯ

ವರಭೈಷ್ಮೀಶನ ವಿಜಯದ ಕಾವ್ಯವನು-ಬಹುಪರಿ ಮಹಿಮೆಯನು
ವಿರಚಿಸಿ ಕವಿಕುಲಮಾನ್ಯನೆನಿಸಿಕೊಂಡ-ಹರಿದಾಸ ಪ್ರಚಂಡಾ ॥ ॥೨॥

ಭೂತ ಬ್ರಹ್ಮರಾಕ್ಷಸ ಬಂದಿವರೊಳು-ವಾದಿಸಿ ಮಾರ್ಗದೊಳು
ಸೋತು ಆಜ್ಞಾಧಾರಕರಾಗಿರುತಿಹರು-ಅನುದಿನ ಸೇವಕರು
ಭೂತಳದ ಜನರು ಬೇಡಿದ ಇಷ್ಟಾರ್ಥ-ಕೊಡುವಂಥ ಸಮರ್ಥ
ಧಾರುಣಿಪತಿ ಗೋಪತಿವಿಠ್ಠಲ-ನಿಸ್ಕೋಶನಾಗಿಹನಲ್ಲ ॥ ॥೩॥



## ೧೫೨

(ರಮಾಪತಿವಿಠ್ಠಲಾಂಕಿತ)

ರಾಗ-ಧನ್ಯಾಸಿ ಆದಿತಾಳ

ಕರುಣದಿ ನೋಡೋ ಮದ್ಗುರು ವಾದಿರಾಜ
ನಂಬಿದ ಭಕ್ತರ ಸುರತರುವೇ ॥ ॥ಪ॥

ಪರಿಪರಿ ಭವಸಾಗರದಿ ಮುಳುಗುವ
ತರಳನ ಮರೆವುದು ಥರವೇ ॥ ॥ಅ॥

ವಾಗೀಶಮುನಿ ಕರಪದ್ಮಸಂಜಾತ ಹೇ
ಭಾಗವತಾಗ್ರಣಿ ಭರದಿ
ಆಗಮ ನಿಗಮ ವಿನುತ ಹಯವದನನ
ಬೇಗ ಒಲಿಸಿದೆ ನೀ ಮುದದಿ
ಯೋಗ ಜಿತಾಸನನಾಗಿರುವನೆ ತಲೆ
ಬಾಗುವೆ ಭಯವಳಿ ತ್ವರಿತ ॥ ॥೧॥

ವಾದದೊಳ್ ವಾದಿಗಳನೇ ಗೆದ್ದು ಗುರುಮತ
ಸಾಧಿಸಿದೆಯೋ ಬಲವಂತ
ಸಾಧುಸೇವಿತ ನಿನ್ನ ಪಾದವ ನಂಬಿದೆ ಭವ
ಬಾಧೆ ಕಳೆಯೋ ಮಹಂತ
ಕ್ರೋಧರಹಿತ ಪಂಚಭೇಧ ಸುಜ್ಞಾನವ
ಬೋಧಿಸುವ ದಯವಂತ ॥ ॥೨॥

ಅತಿವಿಮಲನೆ ನಿನ್ನ ಸ್ತುತಿಸಲರಿಯೆ ನಾನು
ಮತಿವಂತನೈ ಮಹದಾತ
ಸತತ ಬೇಡುವೆನು ಶ್ರೀಪತಿ ಭಜನೆಗೆ ಮನ
ಜತವಾಗಿ ಇರಲಯ್ಯ ತಾತ
ಕ್ಷಿತಿಯೊಳು ಕಂಡ ದುರ್ಮತಿಗಳ ಬಿಡಿಸೋ
ದತಿ ಅಧಿಕವೇನೋ ಅನಾಥನಾಥ
ಪತಿತಪಾವನ ರಮಾಪತಿವಿಠ್ಠಲನ
ರತನೊಳ್ಪ ಲಾತವ್ಯ ಖ್ಯಾತ ॥ ॥೩॥



## ೧೫೩

(ರಾಮವಿಠ್ಠಲಾಂಕಿತ)

ರಾಗ-ಯಮುನಾಕಲ್ಯಾಣಿ ಆದಿತಾಳ

ವಿಜಯಪ್ರದ ವಾದಿರಾಜ–ಜಯ ॥ ॥ಪ॥

ವಿಜಯಪ್ರದ ವಾದಿರಾಜ–ಋಜುಗಣ
ಸ್ವಜನ ಮುದಿತ ಸಮಾಜ ॥ ॥ಅ॥

ಸಾಧು ಸಮರ್ಥಿತ ಸೋದಾಸ್ಥಿತ ಸ್ವ
ಪಾದ ಮಹಿಮೆ ಅಗಾಧಾ || ||೦||

ವೃಂದಾರಕಸಹ ವೃಂದಾವನರತ
ವಂದಿತಾಶ್ರಿತಜನವೃಂದಾ || ||೨||

ಕಂಜಜಭವ ಪ್ರಭಂಜನ ಹರಯುತ
ರಂಜನೀಯ ಪದಪುಂಜಾ || ||೩||

ಭ್ರಾಜದ್ವೃಜುಗಣ ರಾಜಮಾನಗುಣ
ರಾಜವಿನುತ ಯತಿರಾಜಾ || ||೪||

ತಾರಕ ವೃಂದಾವನ ವರಮೃತ್ತಿಕಾ
ಸೇವಕ ಮೌನಸ್ವಭಾವ || ||೫||

ರಮತು ಮನ್ಮಥನ ಸ್ತ್ವತ್ಪದ
ಕಮಲಾಂಘ್ರಿಶಮಿತಕಲಿಮಲನ್ಮೌ || ||೬||

ನಾನ್ಯಂಯಾವೇಚೇಹ್ಯ ನನ್ನ ಭಕ್ತಿಂ
ಧನ್ಯ ತ್ವಯಿ ಸನ್ಮಾನ್ಯ || ||೭||

ಅಂಬುಜಕರಾವಲಂಬಂ ದೇಹಿ
ಹ್ಯಂಬುಜಾಕ್ಷ ಪ್ರತಿಬಿಂಬ || ||೮||

ಸಾಮಗಪ್ರಿಯ ಶ್ರೀರಾಮವಿಠ್ಠಲ ಪದ
ಪ್ರೇಮಾಸ್ಪದ ನಿಸ್ಸೀಮ || ||೯||



## ೧೫೪

## (ಪ್ರಾಣಪತಿವಿಠ್ಠಲಾಂಕಿತ)

ರಾಗ-ಬೇಹಾಗ್ ಆದಿತಾಳ

ಹೊಡೀ ನಗಾರಿ ಮೇಲೆ ಕೈಯ್ಯ
ಘಡ ಘಡ, ಹೊಡೀ ||ಪ||

ಕಡುವಾದಿರಾಜರೀ ಧೃತಯುಗತರೆಂದ್ಹೊಡೀ ||ಅ||

ಹಯಮುಖ ಪದದ್ವಯ ಸೇವಕ-ವರ
ಜಯಶೀಲರು ನಿಜಭಯಹರರೊಂದ್ಹೊಡೀ ||೧||

ದೂಪಕರನು ಬಹುಘಾಸಿ ಕೊಟ್ಟು ನಿಜ
ದಾಸರ ತೋಷಿಸಿ ಪೋಷಿಪರಿವರೆಂದ್ಹೊಡೀ ||೨||

ಮೋದತೀರ್ಥಮತ ಸಾಧಿಸಿ ಮೆರೆಸುವ
ವಾದಿರಾಜ ಪೂರ್ಣಬೋಧರ ಸಮರೆಂದ್ಹೊಡೀ ||೩||

ಇಂದಿರಾಪತಿಯ ಚಂದದಿ ಪೂಜಿಪ
ನಂದಿವಾಹನಮುಖ್ಯವಂದ್ಯರು ಇವರೆಂದ್ಹೊಡೀ ||೪||

ಕಲಿಮುಖ್ಯದಾನವ ಬಲವ ಜಯಿಪ ನಿ-
ಷ್ಕಲುಷಚಿತ್ತ ಯತಿಕುಲಭೂಷಣರಿವರೆಂದ್ಹೊಡೀ ||೫||

ಕಂಸಾರಿಮುಖಧ್ವಂಸಿ ಸಮೀರಣ
ಹಂಸವಾಹನಂಶಾಂಶ ಸಹಿತರೆಂದ್ಹೊಡೀ ||೬||

ಸುಂದರಪಂಚಸುವೃಂದಾವನದೊಳು
ವೃಂದಾರಕಮುನಿವೃಂದವಂದಿತರೆಂದ್ಹೊಡೀ ||೭||

ಲಾತವ್ಯಾತ್ಮಕ ಭೀತಿರಹಿತ–ಮಹ
ಪಾತಕಹರ ಸುರನಾಥ ಮಹಿಮರೆಂದ್ಹೊಡೀ ||೮||

ಭಾವಿಭಾರತಿದೇವಿ ಕರಕಮಲ
ಸೇವಿತಪದರಾಜೀವದ್ವಯರೆಂದ್ಹೊಡೀ ||೯||

ವೃಂದಾವನ ಸದಮಂದಾಖ್ಯಾನವ–ಭೂ
ವೃಂದಾರಕರಿಗೆ ತಿಳಿವರರೆಂದ್ಹೊಡೀ ||೧೦||

ಸಾಮರಾಗದಿ ಪ್ರಾಣಪತಿವಿಠ್ಠಲನ
ಧ್ಯಾನದಿಂದ ಸನ್ಮಾನಿತರಿವರೆಂದ್ಹೊಡೀ ||೧೧||



೧೫೫

(ಶ್ರೀಕರಿಗಿರೀಶಾಂಕಿತ)

ರಾಗ–ಬೇಹಾಗ್ ಆದಿತಾಳ

ಗುರು ವಾದಿರಾಜರ ಸ್ಮರಣೆಯ ಮಾಡಿರೋ ||ಪ||

ಗುರು ವಾದಿರಾಜರ ಸ್ಮರಣೆಯ ಮಾಡಲು
ದುರಿತ ಕಳೆದು ಮನಕೆ ಪರಮಹರುಷವೀವ ||ಅ||

ಪೂರ್ಣಬೋಧರ ಮತವಾರಿನಿಧಿಗೆ ಸಂ–
ಪೂರ್ಣಸುಧಾಕರ ಸುಗುಣಗಂಭೀರ ||೧||

ಕ್ಷೋಣಿಸುರೋತ್ತಮ ಕ್ಷೋಣಿಪಾಲಕ ಮಾನ್ಯ
ಜ್ಞಾನಿವರೇಣ್ಯ ಹಯಾನನ ಪದಶರಣ ||೨||

ಮಾನಸದೊಳಗಿಹ ಹೀನಮತಿಯಕಳೆ
ದಾನಂದ ಕೊಡುವಂಥ ಜ್ಞಾನವ ಕರುಣಿಸಿ ||೩||

ಪ್ರಾಣನಾಥ ಶ್ರೀಕರೀಗಿರೀಶನ ಪಾದ
ಧ್ಯಾನಿಪ ಸ್ಥಿರಮತಿ ತಾನಿತ್ತು ಪಾಲಿಪ ||೪||



೧೫೭

(ಶ್ಯಾಮಸುಂದರಾಂಕಿತ)

ರಾಗ– ಸೌರಾಷ್ಟ್ರ ಅಟ್ಟತಾಳ

ವಂದಿಪೆ ಚರಣಾಬ್ಜ ವೃಂದಕೆ ಸದ್ಗುರು–ವಾದಿರಾಜ
ಮಂದಮತಿಯ ಬಿಡಿಸಿ ಇಂದಿರೇಶನ ತೋರೋ–ವಾದಿರಾಜ ||ಪ||

ದುರುಳ ಬುದ್ಧಿಯಿಂದ ಮರೆದುಬಿಟ್ಟು ನಿನ್ನ–ವಾದಿರಾಜ
ಧರಣಿಮಂಡಲದೊಳು ಪಾಪಿಷ್ಟ ನಾನಾದೆ–ವಾದಿರಾಜ
ಪರಮಪುರುಷ ಭಾವಿಮರುತ ನೀನೆಂತೆಂದು–ವಾದಿರಾಜ
ಹಿರಿಯರ ಪರಿಮುಖದಿಂದ ನಿಶ್ಚೈಯಿಸಿದೆ–ವಾದಿರಾಜ ||೧||

ಶಿರದೊಳು ಹೂರಣ ಹರಿವಾಣ ಧರಿಸುತ–ವಾದಿರಾಜ
ವರಭಕ್ತಿಯಿಂದಲಿ ತುರಗಾಸ್ಯಗುಣಿಸಿದೆ–ವಾದಿರಾಜ
ಗುರುಜಗನ್ನಾಥದಾಸರ ಸ್ವಪ್ನದೊಳು ಬಂದು–ವಾದಿರಾಜ
ಹರಿಕಥಾಮೃತಸಾರ ವಿರಚಿಸೆಂದರುಹಿದೆ–ವಾದಿರಾಜ ||೨||

ಶ್ರೀ ಮಧ್ವಾಚಾರ್ಯರ ಮತಸಾಮ್ರಾಜ್ಯಧ್ವಜವೆತ್ತಿ–ವಾದಿರಾಜ
ವ್ಯೋಮಕ್ಕೆ ಹಾರಿಸಿ ಭೂಮಿಯೊಳ್ಮೆರಿಸಿದೆ–ವಾದಿರಾಜ

ಶ್ಯಾಮಸುಂದರ ಕೃಷ್ಣನಾಮದ ಮಹಿಮೆಯ–ವಾದಿರಾಜ
ಪಾಮರರಿಗೆ ಪೇಳಿ ಪ್ರೇಮದಿ ಸಲಹಿದೆ–ವಾದಿರಾಜ ||೩||



## ೧೫೭

### (ತಂದೆವೆಂಕಟೇಶವಿಠ್ಠಲಾಂಕಿತ)

ಉದಯರಾಗ ವಾರ್ಧಿಕ ಷಟ್ಪದಿ

ವಾದಿರಾಜರ ಭಜಿಸಿರೋ ||ಪ||

ವಾದಿರಾಜರ ಭಜಿಸಿ ಮೋದಪಡುವುದು ನಿಮಗೆ
ಮೋದಮುನಿದರ್ಶನ ಸುಬೋಧವಾಗುವುದಹಿತ
ಬಾಧೆ ತಪ್ಪಿಸಿ ವೇದವಾದೋದಿತನ ಪದ್ಮಪಾದಯುಗ್ಮವ ತೋರುವ ||ಅ||

ಪೂವಿನಾಕರದ ದ್ವಿಜದೇವ ರಾಮನು ಗೌರಿ
ದೇವಿಯುದರದಿ ಶಾರ್ವರೀವತ್ಸರದಿ ಮೌನಿ
ದೇವ ವಾಗೀಶರ ಶುಭಾವಹಾಣತಿಯಂತೆ ಭೂವರಾಹಾಖ್ಯದಿ ಜನ್ಮಿಸಿ
ಕೋವಿದೋತ್ತಮ ಹಯಗ್ರೀವಪದಸಂಸಕ್ತ
ಭಾವ ಭವಿಷ್ಯದ್ವಾಯು ಶ್ರೀವಾದಿರಾಜಯತಿ
ಭಾವುಕಾಬ್ಜಮಲವಿಭಾವಸೋದ್ಧಾವಕವಿ ಶ್ರೀವ್ಯಾಸರಲಿ ಓದಿದ ||೧||

ಸೋದೆಯೊಳು ಶ್ರೀಮಾಧ್ವವೇದಪೀಠವನೇರಿ
ಸಾಧುಸಂಸೇವ್ಯ ಪ್ರತಿವಾದಿನಿಗ್ರಹಶೀಲ
ಈ ಧರಾವಲಯ ಮರುನಾದಗುಡೆ ಕೀರ್ತಿಯ ಮಹೋದಧಿಯ ಘೋಷದಿಂದ
ಬಾದರಾಯಣರ ಸಿರಿಪಾದದಲಿ ಪಂಚಮೋ
ವೇದಕ್ಕೆ ವ್ಯಾಖ್ಯಾನವಾದ ಲಕ್ಷಾಭರಣ
ಮೋದದಿಂದರ್ಪಿಸಿ ವಿದ್ಯಾಧಿದೇವತೆಯಂತೆ ವಾದದಿಗ್ವಿಜಯ ಮಾಡ್ದ ||೨||

ಕ್ಷೇತ್ರವೆಲ್ಲವ ತಿರುಗಿ ಸೂತ್ರಾಪ್ತ್ಯಸಮಯ ಸ–
ರ್ವತ್ರ ಡಂಗುರ ಹೊಯ್ಸಿ ಪಾತ್ರರಾದವರ ಪರ
ಮಾರ್ಥಸಾಧನೆಗೆ ಗುರ್ವರ್ಥದೀಪಿಕಮುಖ ಪವಿತ್ರಸೋಳಗ್ರಂಥವ
ತತ್ರಾಪಿ ಕರ್ನಾಟಕ ಭ್ರಾತ್ರರಿಗೆ ವೇದಾಂತ
ಸೂತ್ರಾರ್ಥ ತಿಳಿಸಿ ಕೃತಾರ್ಥರನುಮಾಡಲ
ತ್ಯರ್ಥಪ್ರಸಾದ ಕರವರ್ಶಿಸುವ ತೆರದಿ ಹರಿಕೀರ್ತನೆಯ ಮಾಡಿ ಮೆರೆದ ||೩||

ವಾಜಿಮುಖನಂಘ್ರಿದ್ವಯರಾಜೀವಮಧುರಾಜ
ಸೋಜಿಗಾಮಲಚರ್ಯ ಭೋಜಕುಲಗುರುರಾಜ
ರಾಜಿಸುವ ಶರಣಸುರಭೂಜ ಸಕಲಸುಕಲಾಭ್ರಾಜಿತಯಶಾಧಿರಾಜ
ಪೂಜಿತಮಹಾಭೂತರಾಜ ಭೋ ಪರಿವ್ರಾಜ
ಈ ಜಗತ್ರಯಭಾರಯೋಜನನೆ ಋಜುರಾಜ
ಬೀಜಮಂತ್ರಾರ್ಥ ನಿರ್ವ್ಯಾಜಭಕ್ತಿಲಿ ಮುಕ್ತಿಭಾಜನೆನಿಸೆನ್ನ ಸಹಜ ||೪||

ಭೋಗಪುರಿರಾಜನ ಕುರೋಗವನು ಕಳೆದು ನೀ
ಭೋಗಿಭಯ ಬಿಡಿಸಿಲಿಯ ಯೋಗಕ್ಷೇಮವಮಾಡಿ
ಯೋಗಸಾಮರ್ಥ್ಯದಿಂದ ಘಟನಾಘಟನಗಳ ಆಗುಮಾಡುತ ಸರ್ವದಾ
ಆಗದವ ಗರ ಬಡಿಸೆ ಲಾಘವದಲರಗಿಸಿದೆ
ಈಗ ಸಮಯಲ್ಲಂದು ಪೀಗದೂತರನಟ್ಟಿ
ಭೂಗಗನಪಾತಾಳಕಾಗರ ತ್ರಿವಿಕ್ರಮನ ದೇಗುಲದೊಳಿರಿಸಿ ಮೆರೆದೇ ||೫||

ಕೊಚ್ಚಿ ಕೇರಳ ಚೋಳ ಕಚ್ಛಕ ಕರ್ನಾಟ ಪುರಿ
ಮಚ್ಛಲೀ ಗಯ ಕಾಶಿ ಉಚ್ಚ ಬದರೀ ಸೇತು
ಸ್ವೇಚ್ಛಾಯಟನದಿಂದುಚ್ಛ್ರಾಯರಾಗಿ ಬಹುಮೆಚ್ಚು ಕಾಣಿಕೆ ಪಡೆಯುತಾ
ಸಚ್ಛಾಸ್ತ್ರ ಪ್ರಣವಮಂತ್ರೋಚ್ಚಾರಣೆಯೊಳಖಿಳ
ತುಚ್ಛರನು ಸದೆಬಡಿದು ಸಚ್ಚರಿತ್ರರ ಮಾಡಿ
ಅಚ್ಚಸುಖತೀರ್ಥಮತದ್ದಚ್ಚಾಳಿಕೆಯ ಮೆರೆಸಿ ಪ್ರಚ್ಛನ್ನ ಕಲಿಯ ಕೊಂದು ||೬||

ಉಡುಪಿಲಿ ಪರ್ಯಾಯವೇರ್ಪಡಿಸಿ ದಿಗ್ಸಂಚಾರ
ಪಡೆವವೊಲು ಸಚ್ಛಿಷ್ಯಗಡಣವನು ನಿರ್ಮಿಸಿಕೊಂ
ಡಡೆಹಾಯ್ದು ಕಷ್ಟಗಳ ಹುಡಿಮಾಡಿ ಶ್ರೀಕೃಷ್ಣನಡಿದಾವರೆಗಳಲ್ಲೀ
ಬಡಗು ಮೂಡಲು ತೆಂಕ ಪಡುವಲಾಸ್ಯದ ಕಪ್ಪ
ಕಡಗೋಲುಕರನ ಪೊಲ್ಲಡಿಯಸೇವೆಗೆ ನಿತ್ಯ
ಸಡಿಲವಾಗದ ಸಿಸ್ತಿನೊಡನೆ ಸಂಸ್ಥಾಪಿಸಿದ ಪೊಡವಿಜನ ಪೊಗಳುತಿರಲು ॥೭॥

ಹರಿಕಥಾಮೃತಲಹರಿ ಎರಡುದಡಮೀರ್ದುದೋ
ಪರಿಪರಿ ಪುರಾಣೋಕ್ತಿ ಕರಣಾನುಭವವಾಯ್ತೋ
ಸರುವೋಪನಿಷದರ್ಥ ಪುರುಷಾಕೃತಿಯ ತಾಳ್ದು ನೆರೆಮಾರ್ಗ
ತೋರುತಿಹುದೋ
ಅರರೆ ಬ್ರಹ್ಮಜ್ಞಾನ ಗುರುವಾಗಿ ಬಂದಿಹುದೋ
ಸರುವಜ್ಞತೀರ್ಥಾರ್ಯರಪರಾವತಾರವೋ
ಅರಿಯಲರಿದೆಂದಖಿಳ ಧರಣೀಸುರರಚ್ಚರಿಯಶರಧಿಯೊಳಗೋಲಾಡ್ದರು ॥೮॥

ಪೂರ್ವೋಕ್ತಮಹಿಮೆ ನೂರಾರುವರ್ಷವು ತೋರಿ
ಶಾರ್ವರೀ ಫಾಲ್ಗುಣದ ಪರಮೂರು ಸೋದೆಯಲಿ
ಸರ್ವಜನ ಸ್ತುತಿಸುತಿರೆ ಸರ್ವಲೋಕಶರಣ್ಯಗರ್ಪಿಸಿದನೈ ದೇಹವ
ಊರ್ವಿಲುದಯದಿ ಭಕ್ತಿಪೂರ್ವಕೀ ಪದ ಪಠಿಸೆ
ದುರ್ವಿಭಾವ್ಯನು ತಂದೆವೆಂಕಟೇಶವಿಠ್ಠಲನು
ಸರ್ವಾರ್ಥಪ್ರದನಾಗಿ ನಿರ್ವಾಹ ಮಾಡುವನು ಉರ್ವಭವಬಂಧದಿಂದ ॥೯॥



## ೧೫೮

(ಗುರುಗೋವಿಂದವಿಠ್ಠಲಾಂಕಿತ)

ರಾಗ–ಧನ್ಯಾಸಿ ಆದಿತಾಳ

ವಾದಿರಾಜಗುರುಸಾರ್ವಭೌಮ ದುರ್ವಾದಿ ವಿಭಂಜನ ನಮೋ ನಮೋ ॥ಪ॥

ಮೋದತೀರ್ಥಸುಮತಾಂಬುಧಿಶಶಿ ಮಾಧವಪದಪಂಕಜಮಧುಪ
ನಮೋ ನಮೋ ॥ಅ॥

ಸ್ವಾದಿವಾಸಮುನಿ ಮೋದತೀರ್ಥಪದವಾರಾಧಕ ತೇ ನಮೋ ನಮೋ
ಮೇದಿನಿಸುರರಿಗೆ ಮೋದಪ್ರದಾಯಕ ಏನಾದಿ ಬಂಧನ ಛೇದ ನಮೋ
ಶ್ರೀವನಗುಣವಾಪಾದಿಸಿ ತನ್ನೊಳು ಮೋದಿಪ ವಾಯ್ಗಜ ಸಿಂಹ ನಮೋ
ಬೋಧಿಸಿ ದಶಮತಿಬೋಧಶಾಸ್ತ್ರ ದುರ್ವಾದಿಗಳ್ ಜೈಸಿದ ಯತಿಯೆ
ನಮೋ ನಮೋ ॥೧॥

ವಾಗೀಶರ ಕರಜಾತ ನಮೋ ನಮೋ ಯೋಗಿಕುಲಾಬ್ಧಿಗೆಚಂದ್ರ ನಮೋ
ಭಾಗವತರ ಸಂಪ್ರೇಮ ನಮೋ ನಮೋ ಆಗಮಜ್ಞ ತೇ ನಮೋ ನಮೋ
ಭೋಗಿಪುರೀಶ ಸುಮೋದ ನಮೋ ನಮೋ ಕಾಗಿನಿತೀರಗಭಜಕ ನಮೋ
ಭಾಗೀರಥಿಪಿತ ಹಯಮುಖನನು ರಾಗದಿ ಭಜಿಸುವ ಯೋಗಿ ನಮೋ ॥೨॥

ಭೂಸುರಋಣಕ್ಲೇಶಾವಹ ನಮೋ ನಮೋ ಮೂಷಕ ಬಹುಭಯನಾಶ
ನಮೋ
ಕಾಶಿ ಬದರಿ ರಾಮೇಶ್ವರ ಕ್ಷೇತ್ರ ಪ್ರವಾಸಿಸಿ ಸತ್ಕಥಕರ್ತೃ ನಮೋ
ಲೇಶಮಣ್ಣು ತಾ ಕೊಡುತಲಿ ವಿಪ್ರಗೆ ದೋಷವ ಕಳೆದಗೆ ನಮೋ ನಮೋ
ಮೀಸಲಮನದಿ ನಿಷೇವಿಸೆ ಸಂಸೃತಿ ಶೋಷಿಪ ಶ್ರೀಲಾತವ್ಯ ನಮೋ ॥೩॥

ಎರ್ಡುಭುಜದಿ ಹಯವದನನ ಚರಣವ ಬಿಡದೆ ಧರಿಸುವಗೆ ನಮೋ ನಮೋ
ಮೃಡನುತ ತಾ ಹರಿಘ್ನುರಿವಾಣದಿ ಕಡಲೆಹೂರ್ಣ ಬಿಡದೀವಗೆ ನಮೋ
ನಡುಮನೆದ್ವಿಜಸುತ ನಿಲಿಸ್ಯರ್ಚಿಸಿದಾ ಉಡುಪಿಯ ಕೃಷ್ಣಾರ್ಚಕಗೆ ನಮೋ
ಸಡಗರದಲಿ ಪರ್ಯಾಯಗಳನು ಮಾರ್ಪಡಿಸಿರುವಾತಗೆ ನಮೋ ನಮೋ ॥೪॥

ಪರಿಪರಿಗ್ರಂಥವ ಟೀಕಂಗಳ ತಾ ವಿರಚಿಸಿದಾತಗೆ ನಮೋ ನಮೋ
ಸುರಸವು ರುಕ್ಮಿಣಿಪತಿ ವಿಜಯವ ತಾ ಬರೆದು ಪುಣೆಯಲಿ ಮೆರೆದಗೆ ನಮೋ
ಎರಡೆರಡೊಂದು ವೃಂದಾವನ ಸ್ವಾದಿಲಿ ಸುರನದಿತಟ ನಿಲಸಿದವಗೆ ನಮೋ

ಎರಡೊಂದು ಎಕ್ರಮಸುತ್ತ್ವಗ್ಯೆಸಿವ ಗುರುಗೋವಿಂದವಿಠ್ಠಲಾರ್ಚಕಗೆ
ನಮೋ ನಮೋ ॥೫॥



೧೫೯

(ಅಂಕಿತ–ಕಾರ್ಪರನರಹರಿ]

ರಾಗ–ಸುರಟಿ ಆದಿತಾಳ
(ಭಾರತಿ ಭಕುತಿಯನು–ಎಂಬ ಧಾಟಿ]

ವಾದಿರಾಜಗುರುವೇ–ಪಾದಾರಾಧಕ ಸುರತರುವೆ ॥ ॥ಪ॥

ಮೋದವ ಕೊಡುವುದು ನೀ ದಯದಿಂದಲಿ
ಸ್ವಾದಿನಿಲಯ ತವ ಪಾದಕೆ ನಮಿಸುವೆ ॥ ॥ಅ॥

ಮೇದಿನಿಯೊಳು ಚರಿಸೀ–ಜನರೊಳು ಅ
ಗಾಧ ಮಹಿಮರೆನಿಸಿ
ಮೋದಮುನಿಯ ಸುಮತೋದಧಿಚಂದಿರ
ವಾದಿಮದಗಜ ಮೃಗಾಧಿಪರೆನಿಸಿದ ॥ ॥೧॥

ಯುಕ್ತಿಮಲ್ಲಿಕಾದೀ–ಬಹುಸರ-
ಸೋಕ್ತಿ ಸಹಿತಮಾಗಿ
ಭಕ್ತಿಪುಟ್ಟಿಸುವ ರುಕ್ಮಿಣೀಶ ವಿಜಯಾಖ್ಯ
ಗ್ರಂಥದಿ ಚಮತ್ಕೃತಿ ತೋರಿದ ॥

ಭಾಗವತರ ಪ್ರಿಯಾ–ನಮಿಸುವೆ
ವಾಗೀಶರ ತನಯಾ

ಯೋಗಿವರ್ಯರ ಕವಿಗೇಯ ದಯಾಕರ
ಭೋಗಪುರೀಶನ ರೋಗವ ಕಳೆದಿ ॥೩॥

ರಾಜರನ್ನು ಪೊರೆದಿ-ಯತಿಕುಲ
ರಾಜರೆನಿಸಿ ಮೆರೆದಿ
ವಾಜಿವದನ ಪದರಾಜೀವಯುಗಲ
ಪೂಜಿಸಿ ಜಗದಿ ವಿರಾಜಿಸಿದಂಥ ॥೪॥

ಭೂತಭಯವ ಬಿಡಿಸಿ-ಭಜಕರ
ಪಾತಕ ಪರಿಹರಿಸಿ
ಖ್ಯಾತ ಕಾರ್ಪರ ಕ್ಷೇತ್ರದಿ ನರಮೃಗ
ನಾಥನ ಪರಮಪ್ರೀತಿಯ ಪಡೆದಿ ॥೫॥



## ೧೬೦

## (ಗುರುಜಗನ್ನಾಥವಿಠ್ಠಲಾಂಕಿತ)

ರಾಗ–ಮೋಹನ ಏಕತಾಳ

ಸೋದಾಪುರದಲ್ಲಿ ನಿಂತು ರಾಜಿಪನ್ಯಾರೇ ಪೇಳಮ್ಮಯ್ಯ ॥ಪ॥

ಭೂಧರ ಹಯಮುಖಪಾದ ಭಜಿಸುವ
ವಾದಿಗಜಕೆ ಮೃಗರಾಜ ಕಾಣಮ್ಮಯ್ಯ ॥ಅ॥

ಅಂಚೆವಾಹನ ಪ್ರಪಂಚದಿ ಪೊಳೆವ ವಿ
ರಿಂಚಿಗೆ ಸಮನೇನೇ ಪೇಳಮ ಯ

ಸಂಚಿತಕರ್ಮಾವ ಕುಂಚಿಸಿ ಭಕ್ತರ
ಚಂಚಲ ಬಿಡಿಸುವನ್ಯಾರೇ ಪೇಳಮ್ಮಯ್ಯ
ಮಿಂಚುರಾಶಿಗೆಸಮ ಪಂಚವೃಂದಾವನ
ಲಾಂಛಿತನ್ಯಾರೇ ಪೇಳಮ್ಮಯ್ಯ
ಚಂಚಲಾಕ್ಷಿ ತಿಳಿ ಪಂಚರೂಪಾತ್ಮಕ
ಮುಂಚಿನ ಪ್ರಾಣ ವಿರಿಂಚಿ ಕಾಣಮ್ಮ ॥೦॥

ಸುಂದರ ಶುಭತಮ ವೃಂದಾವನ ನಿಜ
ಮಂದಿರ ಸ್ಥಿತನ್ಯಾರೇ ಪೇಳಮ್ಮಯ್ಯ
ವಂದಿಪ ಜನರಘವೃಂದ ಕಳೆದು ಆ-
ನಂದ ನೀಡುವನ್ಯಾರೇ ಪೇಳಮ್ಮಯ್ಯ
ಇಂದುಮುಖಿಯೆ ಶೀತ ಗಂಧವಾಹನನಾಗಿ
ಮಂದಜಾನನ ಪದ ಪೊಂದುವನಮ್ಮ ॥೨॥

ಖ್ಯಾತಮಹಿಮ ಮಾಯಾವ್ರಾತಗಳ ವಿ-
ಘಾತ ಮಾಡಿಹನ್ಯಾರೇ ಪೇಳಮ್ಮಯ್ಯ
ಆತುರಜನರಿಗೆ ಮಾತಪಿತರಂತೆ
ಮಾತು ಲಾಲಿಪನ್ಯಾರೇ ಪೇಳಮ್ಮಯ್ಯ
ದಾತ ಗುರುಜಗನ್ನಾಥವಿಠ್ಠಲನತಿ
ಪ್ರೀತಿ ಪಡೆದಿಹನ್ಯಾರೇ ಪೇಳಮ್ಮಯ್ಯ
ವೀತಭಯ ಪುರುಹೂತಪ್ರಮುಖ
ಭೂತನಾಥನುತ ಮಾತರಿಶ್ವನೀತ ಕಾಣಮ್ಮ ॥೩॥

✱

೧೬೧

[ತಂದೆ ಶ್ರೀಪತಿವಿಠ್ಠಲಾಂಕಿತ]

ಸುಳಾದಿ

|| ಧ್ರುವತಾಳ ||

ವಾದಿರಾಜಗುರುವೆ ಭಕುತಿಯಿಂದಲಿ ನಿಮ್ಮ
ಪಾದಕಂಜವನು ನಂಬಿದ ಮಾನವ
ಈ ಧರೆಯೊಳಗೆಲ್ಲಾ ವೈರಾಗ್ಯ ಭಕ್ತಿ ಜ್ಞಾ-
ನಾದಿಗಳಿಂದ ಪರಿಪೂರ್ಣನಾಗಿದ್ದು ಮಹ
ಮೋದಪಡುವನು ಸಕಲದೊಳಗ
ಗಾಢ ಸತ್ಕೀರ್ತಿಯನು ಪಡೆದು ನಿತ್ಯ
ಭೂದೇವೇರಿಂದ ಬಲುಪೂಜಾಗೊಂಡನಂತರ
ಆದಿತೇಯರೊಳು ಮಾನ್ಯನಾಗುವ
ಮೇದಿನಿಯೊಳು ನಿಮ್ಮ ದಯಮಾತ್ರ ಪಡೆಯಲು
ಮಾಧವನು ಕರಬಿಡದೆ ಪೊರೆವ
ಮೇಧಾವಿ ತಂದೆಶ್ರೀಪತಿವಿಠ್ಠಲನ
ಪಾದಾರಾಧಕರ ನಂಬಿದವರಿಗೆ ಸುರಧೇನು ||೧||

|| ಮಠ್ಯತಾಳ ||

ಸುರಚಿರ ಸತ್ಸೋದೆಪುರದಲ್ಲಿ ನೆಲೆಸಿದ್ದು
ವರಧವಳಗಂಗಾದಿ ತೀರ್ಥಗಳನು
ಧರೆಯಲ್ಲಿ ವಿರಚಿಸಿ ಮಹಮಹಿಮೆಯನಿಟ್ಟು
ಪರಮೂರುತಿ ಗೋಪಾಲಕೃಷ್ಣರನು ಸ್ಥಾಪಿಸಿ ಮೋದದಲಿ
ವರಕ್ರೂರ ನಾರಾಯಣಭೂತರ ಕೈಲಿ, ಬ-
ದರಿಯಿಂದಲಿ ತ್ರಿವಿಕ್ರಮದೇವರನು

ಅರೆಘಳಿಗೆಯೊಳಗೆ ರಥಸಹಿತ
ತರಿಸಿ ಪ್ರತಿಷ್ಠಯನು ಮಾಡಿದ ಧೀರ
ಪರಮಪುರುಷ ತಂದೆ ಶ್ರೀಪತಿವಿಠ್ಠಲನ
ವರಕರುಣಾಪಾತ್ರ ವಿದ್ವಜ್ಜನಮಿತ್ರ ||೨||

|| ತ್ರಿಪುಟತಾಳ ||

ವಾಗೀಶತೀರ್ಥರ ಕರಪದ್ಮೋದ್ಭವರೆ ವೈ-
ರಾಗ್ಯಾದಿಗುಣದಿಂದ ಪರಿಪೂರ್ಣರೆ
ಯೋಗಿಜನರಿಗೆ ಅತಿಪ್ರಿಯರೆ ತ್ವತ್ಪಾದ
ಹೇಗೆ ಕಾಂಬುವೆ ನಾ ಇನ್ನ್ಯಾಂಗೆ ಕಾಂಬುವೆ
ಬಾಗಿ ಬೇಡುವೆ ನಾ ಇನ್ನೊಂದು ಭಾಗ್ಯವನೊಲ್ಲೆ
ಹೇಗಾದರೂ ನಿಮ್ಮ ಪಾದಯುಗಳವ
ಬೇಗದಿಂದಲಿ ತೋರಿ ಸಂಸಾರವೆಂಬಂಥ
ಸಾಗರದಿಂದಲಿ ಕಡೆಹಾಯಿಸೋ
ಶ್ರೀಗುರು ತಂದೆ ಶ್ರೀಪತಿವಿಠ್ಠಲವ
ಯೋಗದಿಂದಲಿ ಭಜಪ ಸುಮತಿ ಪಾಲಿಸೋ ಮುನಿಪ ||೩||

|| ಅಟ್ಟತಾಳ ||

ನಿಷ್ಠೆಯಿಂದಲಿ ಮನಮುಟ್ಟಿ ನಿಮ್ಮ ಪಾದ
ಘಟ್ಯಾಗಿ ಭಜಿಸಲು ಇಷ್ಟಪ್ರಾಪ್ತವು ಅ-
ನಿಷ್ಟವು ಪರಿಹಾರ ಕುಷ್ಠಯಾದವ ಬಲು
ಶಿಷ್ಟನೆಂದೆನಿಸುವ ಕಷ್ಟ ದಾರಿದ್ರ್ಯವು
ಮುಟ್ಟವು ಕೇಳು ಕಣ್ಣು ಮಿಟ್ಟಿಸದಿದ್ದರು
ದೃಷ್ಟಿವಂತನಾಗುವ, ಹುಟ್ಟುಮೂಕನು
ಶ್ರೇಷ್ಠ ಮಾತಾಡುವ, ಪುಟ್ಟುವುದು ಜ್ಞಾನ
ದುಷ್ಟಗ್ರಹಾದಿಗಳು ನಷ್ಟವಾಗುವವು

ಶ್ರೀಪ್ತ ಮೂರುತಿ ತಂದೆ ಶ್ರೀಪತಿವಿಠ್ಠಲನ ದಯ
ಪುಟ್ಟುವುದಕೆ ನಿಮ್ಮ ದಯ ಮೊದಲಲಿ ಬೇಕು ||೪||

|| ಆದಿತಾಳ ||

ಪರಮಹಂಸರೆ ನಿಮ್ಮ ಸುರುಚಿರಮಹಿಮೆಯ
ಧರೆಯೊಳು ಸುಜನರಾಡುವುದು ನಿಜವೆಂದು ನಾ
ಮೊರೆಯಹೊಕ್ಕೆ ನಿಮ್ಮ ಅರೆಮನಮಾಡದಲೆ
ಪರಮರಜತಪೀಠಪುರದಲ್ಲಿ ನೆಲೆಸಿಪ್ಪ
ಹರಿಯಪಾದವ ತೋರಿ, ತರುವಾಯ ನಿಮ್ಮ ಪಾದ
ಸರಸಿಜವ ತೋರಿ ಎನ್ನ ಕರೆಕರೆಮತಿಯನ್ನು
ಪರಿಹಾರಮಾಡಿ ಬೇಗ ಪರಮಭಕುತಿ ಜ್ಞಾನ
ವಿರಕ್ತಿಯನ್ನು ಕೊಟ್ಟು ಪೊರೆವದೋ ನಿಮ್ಮ ಪಾದ
ಶರಣರೊಳಗಾಡಿಸಿರಿ ಗುರುವೆ ನೀ ಮರೆಯದಲೆ
ಹರುಷವೀವುದು ತಂದೆ ಶ್ರೀಪತಿವಿಠ್ಠಲನ್ನ
ವರೆನೆಂಬುವಂತೆ ಮಾಡೋ ಅರೆಮನಮಾಡದಲೆ ||೫||

|| ಜೊತೆ ||

ತಂದೆ ಶ್ರೀಪತಿವಿಠ್ಠಲ ಪ್ರಿಯ ವಾದಿರಾ-
ಜೇಂದ್ರಾರ್ಯ ಶ್ರೀಮದಾನಂದತೀರ್ಥ ಮುಂದೆ ನಿಜ ||



೧೬೩

(ಪ್ರಸನ್ನ ವೆಂಕಟೆ-ಅಂಕಿತ)

ರಾಗ-ಧನಾಶ್ರೀ ಆದಿತಾಳ

ಶ್ರೀವಾದಿರಾಜ ಸಲಹೆನ್ನ ರಾಜ
ಸೇವಕರಿಗಮರಭೂಜ ರಾಜಾ ||ಪ||

ಪಾವನ ಸುಕೀರ್ತಿಚಂದ್ರಿಕೆಯಿಂದ ಥಳಥಳಿಸಿ
ಭೂವಲಯಕಾಹ್ಲಾದವನಿತ್ತೆ ರಾಜಾ ||೮||

ಚತುರಹಯಗ್ರೀವ ವಹಿಸಿ ಹೊಳೆವ ದಶ
ಮತಿ ಶಾಸ್ತ್ರರಥವ ನಿರ್ಮಿಸಿ
ಶ್ರುತಿ ಪಂಚರಾತ್ರವನ್ನು ವಾದಿಗೈದು
ಋತುಭೇದಶರವಗೂಡಿಸಿ ನೆಸದು
ಕ್ಷಿತಿಯಾರ ದುರ್ವಾದಿಗಳ ಜಯಿಸಿದೆ ಅ
ಪ್ರತಿಮ ಮಹಾರಥಿಕನೆನಿಸುವ ಚಕ್ರವರ್ತಿ ರಾಜಾ ||೮||

ಬೇಕಾದ ಪುರುಷಾರ್ಥವ ಕೊಡುವ ಗುಣ
ಶಾಖಿಗಳ ಸೊಬಗುದೋರೆ
ಶ್ರೀಕರಗ್ರಂಥ ರಚನೆಗಳನೇಕ ಪತ್ರಗಳಿರೆ
ಆ ಕರುಣಾಲೋಚನ ಕುಸುಮರಸವನುಂಡು
ಝೋಂಕರಿಪ ಕವಿ ಮಧುಮಕರಂದ ರಾಜಿಸುತ ರಾಜಾ ||೨||

ಸಾರಾರ್ಥ ಚೋರಕೂಲದಾಗಲ ಭೇದ ಸಂ
ಚಾರ ಧರೆಯೊಳಗಿಡಿಸಿ
ಈರಮತ ಸದ್ವನದಿಹ ಪಂಡಿತ ಚ
ಕೋರಗಳ ನಲಿನಲಿಸಿದೆ
ಧೀರವಾಗೀಶಕರವಾರ್ಧಿಭವ ವಾದಿವಂದ್ಯ
ವಾರಿನಿಧಿ ನಂದೆಕರ ಪ್ರಸನ್ನವೆಂಕಟ ಪ್ರಿಯ ||೩||



## ೧೬೩

### (ಶ್ರೀ ವಿಶ್ವೇಂದ್ರತೀರ್ಥರ ಕೃತಿ-ರಾಜೇಶ ಅಂಕಿತ)

ರಾಗ-ಹಿಂದೂಸ್ಥಾನಿಕಾಪಿ ಆದಿತಾಳ

ರಾಜರ ಭಾಗ್ಯವಿದುವಾದಿರಾಜರ ಭಾಗ್ಯವಿದು
ಸೋದೇರಾಜರ ಭಾಗ್ಯವಿದು ||ಪ||

ರಾಜರ ಭಾಗ್ಯವೆಂತು ವರ್ಣಿಪೆನು ನಾ
ವಾಜಿವದನನ ಸದಾ ಪೂಜಿಪ ಭಾಗ್ಯವು ||೧||

ಐದು ಪರ್ಯಾಯದಿ ಕೃಷ್ಣನ ಪೂಜೆಯ
ಸಾದರದಲಿ ರಚಿಸಿರ್ದ ವಿಭವವಿದು ||೨||

ಸುರರ ವಿಮಾನವ ತಡೆದು ನಿಲ್ಲಿಸಿದ
ಮರುತನ ಪದವ ಮುಂದೇರುವ ಭಾಗ್ಯವು ||೩||

ಬದರಿಕಾಶ್ರಮದಿಂದ ನದಿಯುಪೆತ್ತನ ತಂದು
ಸದನದೊಳಿರಿಸಿದುದತಿ ವಿಭವ ||೪||

ಸೋದೆಯಪುರದಿ ರಾಜೇಶ ಹಯಾಸ್ಯನ
ಪಾದವ ಭಜಿಸುತ ನಿಂದಿಹ ಭಾಗ್ಯವು ||೫||



## ೧೬೪

(ಅಂಕಿತ-ಶ್ರೀಕೃಷ್ಣ-ಶ್ರೀವ್ಯಾಸರಾಜ ವಿರಚಿತ)

ರಾಗ–ಪೂರ್ವಿ ಆದಿತಾಳ

ವಾದಿಗಳೆಲ್ಲರನೇ ಗೆದ್ದ ವಾದಧೀರನೇ ||ಪ||

ವಾದಿರಾಜ ಗುರುರಾಯ ಸಾಧುಪ್ರಿಯ ಗೇಯಕಾಯ ||ಅ||

ಮುಂದುವರಿದು ಬಂದ ವಾದಿಯವೃಂದವನು
ಒಂದು ಮಾತಿನಿಂದಲವರ ಮುಂದೆಗೆಡಿಸಿ
ಕಂದಿಸಿ ಕುಂದಿಸಿ ನಂದದಿ ನಲಿವ ||೧||

ಮತ್ತರಾದ ಜನರ್ಗಳೆಲ್ಲ ಸುತ್ತಮುತ್ತ ನೋಡುತಿರಲು
ಮತ್ತೆ ಅವರ ನೆತ್ತಿಯ ತೊಣೆದು
ಹತ್ತಿದೆ ಮುತ್ತಿನ ಗದ್ದಿಗೆಯನ್ನು ||೨||

ನಿನಗೆಣೆಗಾಣೆ ನವದಿನಪತೇಜ ಮಧ್ವಮುನಿಯು
ಮನದೊಡೆಯ ಶ್ರೀಮುದ್ದುಕೃಷ್ಣನ
ನೆನೆದ ತನುವನಲ್ಲವೇ ||೩||



## ೧೬೫

(ಶ್ರೀಕೃಷ್ಣವಿಠಲಾಂಕಿತ)

ಮಂಗಳಪದ

ರಾಗ–ಮಧ್ಯಮಾವತಿ ಛಾಪುತಾಳ

ಮಂಗಳಂ ಮಂಗಳಂ ಶ್ರೀಗುರುರಾಜನಿಗೆ
ಮಂಗಳಂ ಶರಣರ ಸುರಭೂಜನಿಗೆ ||ಪ||

ವೇದವೇದಾಂತದಿ ಮೋದಿಪಗೆ
ಸಾಧುಸಜ್ಜನರನು ಆದರಿಸುವಗೆ
ಮೋದತೀರ್ಥರಮತ ಬೋಧಿಪಗೆ
ವಾದದಿ ಬಹುಶೂರ ವಾದಿರಾಜನಿಗೆ ||೧||

ಪಂಚವೃಂದಾವನದಿ ಮೆರೆವವಗೆ
ಪಂಚಭೇದಜ್ಞಾನ ನಿಜವೆಂದವಗೆ
ಪಂಚಬಾಣನ ಪಿತನ ಸ್ಮರಿಸುವಗೆ
ಮಿಂಚಿನಂದದಿ ಪೊಳೆವ ಮಹಾಮಹಿಮನಿಗೆ ||೨||

ದೇವ ತ್ರಿವಿಕ್ರಮತಂದವನಿಗೆ
ಭಾವದಿ ಭಕುತರ ಪೊರೆವವಗೆ
ಕಾವಕರುಣಿ ಸಿರಿಕೃಷ್ಣವಿಠ್ಠಲಪ್ರಿಯ
ಭಾವಿಮರುತ ನಮ್ಮ ಭವ್ಯಚರಿತಗೆ ||೩||



॥ ಶ್ರೀಃ ಹರಿಃ ಓಂ ॥

# ಯತಿಪೀಳಿಗೆ

## ಭಾಗ - ೭

# ಶ್ರೀ ವ್ಯಾಸರಾಜ ಗುರುಸಾರ್ವಭೌಮರ
# ಪರವಾದ ಕೀರ್ತನೆಗಳು

# ಶ್ರೀವ್ಯಾಸರಾಜ ಮಠದ ಗುರುಪರಂಪರಾ

| ಕ್ರಮ ಸಂಖ್ಯೆ | ಯತಿಪರಂಪರಾ | ಕಾಲ | ಪುಣ್ಯದಿನ | ವೃಂದಾವನ ಸ್ಥಳ |
|---|---|---|---|---|
| 1 | 2 | 3 | 4 | 5 |
| 1 | ಶ್ರೀಮದಾನಂದತೀರ್ಥರು | ಕ್ರಿ.ಶ. 1238–1317 | ಮಾಘ ಶುದ್ಧ ನವಮೀ (ಬದರಿಕಾಶ್ರಮಕ್ಕೆ ಪ್ರಯಾಣ) | — |
| 2 | ಶ್ರೀಪದ್ಮನಾಭತೀರ್ಥರು | ಕ್ರಿ.ಶ. 1317–1324 | ಕಾರ್ತೀಕ ಬಹುಳ ಚತುರ್ದಶೀ | ನವವೃಂದಾವನ |
| 3 | ಶ್ರೀ ನರಹರಿತೀರ್ಥರು | ಕ್ರಿ.ಶ. 1324–1333 | ಪುಷ್ಯ ಬಹುಳ ಸಪ್ತಮೀ | ಚಕ್ರತೀರ್ಥ |
| 4 | ಶ್ರೀ ಮಾಧವತೀರ್ಥರು | ಕ್ರಿ.ಶ. 1333–1350 | ಮಾರ್ಗಶೀರ ಬಹುಳ ಅಮಾವಾಸ್ಯೆ | ಮಣ್ಣೂರು |
| 5 | ಶ್ರೀಅಕ್ಷೋಭ್ಯತೀರ್ಥರು | ಕ್ರಿ.ಶ. 1350–1365 | ಮಾರ್ಗಶೀರ ಬಹುಳ ಪಂಚಮೀ | ಮಳಖೇಡ |

| 1 | 2 | 3 | 4 | 5 |
| --- | --- | --- | --- | --- |
| 6 | ಶ್ರೀ ಜಯತೀರ್ಥರು | ಕ್ರಿ.ಶ. 1365-1388 | ಆಷಾಢ ಬಹುಳ ಪಂಚಮೀ | ಮಳಖೇಡ |
| 7 | ಶ್ರೀ ವಿದ್ಯಾಧಿರಾಜತೀರ್ಥರು | ಕ್ರಿ.ಶ. 1388-1392 | ವೈಶಾಖ ಶುದ್ಧ ದ್ವಿತೀಯ | ಯರಗೊಳ |
| 8 | ಶ್ರೀರಾಜೇಂದ್ರತೀರ್ಥರು | ಕ್ರಿ.ಶ. 1392-1412 | ಕಾರ್ತೀಕ ಶುದ್ಧ ಪೂರ್ಣಿಮಾ | ಯರಗೊಳ |
| 9 | ಶ್ರೀ ಜಯಧ್ವಜತೀರ್ಥರು | ಕ್ರಿ.ಶ. 1412-1432 | ಕಾರ್ತೀಕ ಶುದ್ಧ ಪೂರ್ಣಿಮಾ | ಯರಗೊಳ |
| 10 | ಶ್ರೀಪುರುಷೋತ್ತಮತೀರ್ಥರು | ಕ್ರಿ.ಶ. 1432-1440 | ಚೈತ್ರಶುದ್ಧ ಪ್ರತಿಪದ (ಗುಹಾ ಪ್ರವೇಶ) | ಅಬ್ಬೂರು |
| 11 | ಶ್ರೀ ಬ್ರಹ್ಮಣ್ಯತೀರ್ಥರು | ಕ್ರಿ.ಶ. 1440-1467 | ವೈಶಾಖ ಬಹುಳ ದ್ವಾದಶೀ | ಅಬ್ಬೂರು |
| 12 | ಶ್ರೀ ವ್ಯಾಸರಾಜ ಗುರುಸಾರ್ವಭೌಮರು (ಶ್ರೀ ಚಂದ್ರಿಕಾಚಾರ್ಯರು) | ಕ್ರಿ.ಶ. 1467-1539 | ಫಾಲ್ಗುಣಬಹುಳ ಚತುರ್ಥೀ | ನವಬೃಂದಾವನ |

| 1 | 2 | 3 | 4 | 5 |
|---|---|---|---|---|
| 13 | ಶ್ರೀ ಶ್ರೀನಿವಾಸತೀರ್ಥರು | ಕ್ರಿ.ಶ. 1539-1564 | ವೈಶಾಖಬಹುಳ ಪಂಚಮೀ | ನವವೃಂದಾವನ |
| 14 | ಶ್ರೀ ರಾಮತೀರ್ಥರು | ಕ್ರಿ.ಶ. 1564-1584 | ಆಶ್ವಯುಜಶುಜಶುದ್ಧ ಚತುರ್ದಶೀ | ನವವೃಂದಾವನ |
| 15 | ಶ್ರೀ ಲಕ್ಷ್ಮೀಕಾಂತತೀರ್ಥರು | ಕ್ರಿ.ಶ. 1584-1594 | ಶ್ರಾವಣ ಶುದ್ಧ ಸಪ್ತಮೀ | ತ್ರಿಮಕೂಟ |
| 16 | ಶ್ರೀಪತಿತೀರ್ಥರು | ಕ್ರಿ.ಶ. 1594-1612 | ಆಷಾಢ ಶುದ್ಧ ದ್ವಾದಶೀ | ತ್ರಿಮಕೂಟ |
| 17 | ಶ್ರೀ ರಾಮಚಂದ್ರತೀರ್ಥರು | ಕ್ರಿ.ಶ. 1612-1632 | ಮಾರ್ಗಶೀರ ಶುದ್ಧ ತೃತೀಯಾ | ತ್ರಿಮಕೂಟ |
| 18 | ಶ್ರೀ ಲಕ್ಷ್ಮೀವಲ್ಲಭತೀರ್ಥರು | ಕ್ರಿ.ಶ. 1632-1642 | ಪುಷ್ಯ ಶುದ್ಧ ಪಂಚಮೀ | ತ್ರಿಮಕೂಟ |
| 19 | ಶ್ರೀ ಲಕ್ಷ್ಮೀನಾಥತೀರ್ಥರು | ಕ್ರಿ.ಶ. 1642-1660 | ಶ್ರಾವಣ ಶುದ್ಧ ತ್ರಯೋದಶೀ | ಶ್ರೀರಂಗ |
| 20 | ಶ್ರೀ ಲಕ್ಷ್ಮೀಪತಿತೀರ್ಥರು | ಕ್ರಿ.ಶ, 1660-1670 | ಕಾರ್ತೀಕ ಶುದ್ಧ ಏಕಾದಶೀ | ಶ್ರೀರಂಗ |

| 1 | 2 | 3 | 4 | 5 |
|---|---|---|---|---|
| 21 | ಶ್ರೀ ಲಕ್ಷ್ಮೀನಾರಾಯಣತೀರ್ಥರು | ಕ್ರಿ.ಶ. 1670–1700 | ಕಾರ್ತೀಕ ಶುದ್ಧ ತ್ರಯೋದಶೀ | ಬದರಿಕಾಶ್ರಮ |
| 22 | ರಘುನಾಥತೀರ್ಥರು (ಶೇಷಚಂದ್ರಿಕಾಚಾರ್ಯರು) | ಕ್ರಿ.ಶ. 1700–1755 | ಆಷಾಢ ಶುದ್ಧ ಚತುರ್ಥೀ | ತ್ರಿಮಕೂಟ |
| 23 | ಶ್ರೀ ಜಗನ್ನಾಥತೀರ್ಥರು (ಭಾಷ್ಯದೀಪಿಕಾಚಾರ್ಯರು) | ಕ್ರಿ.ಶ. 1755–1770 | ಪುಷ್ಯ ಶುದ್ಧ ದ್ವಿತೀಯಾ | ಕುಂಭಕೋಣ |
| 24 | ಶ್ರೀ ಶ್ರೀಪಾದತೀರ್ಥರು | ಕ್ರಿ.ಶ. 1770–1780 | ಪುಷ್ಯ ಶುದ್ಧ ಚತುರ್ಥೀ | ತ್ರಿಮಕೂಟ |
| 25 | ಶ್ರೀವಿದ್ಯಾನಾಥತೀರ್ಥರು | ಕ್ರಿ.ಶ. 1780–1788 | ವೈಶಾಖ ಶುದ್ಧ ಏಕಾದಶೀ | ಕುಂಭಕೋಣ |
| 26 | ಶ್ರೀ ವಿದ್ಯಾಪತಿತೀರ್ಥರು | ಕ್ರಿ.ಶ. 1788–1798 | ವೈಶಾಖ ಶುದ್ಧ ಚತುರ್ಥೀ | ಕುಂಭಕೋಣ |
| 27 | ಶ್ರೀ ವಿದ್ಯಾವಲ್ಲಭತೀರ್ಥರು | ಕ್ರಿ.ಶ. 1798–1812 | ಮಾರ್ಗಶೀರ ಶುದ್ಧ ನವಮೀ | ಸೋಸಲೆ |

| 1 | 2 | 3 | 4 | 5 |
|---|---|---|---|---|
| 28 | ಶ್ರೀ ವಿದ್ಯಾಕಾಂತತೀರ್ಥರು | ಕ್ರಿ.ಶ. 1812–1824 | ಜ್ಯೇಷ್ಠ ಶುದ್ಧ ನವಮೀ | ಸೋಸಲೆ |
| 29 | ಶ್ರೀ ವಿದ್ಯಾನಿಧಿತೀರ್ಥರು | ಕ್ರಿ.ಶ. 1824–1834 | ಆಷಾಢ ಬಹುಳ ಏಕಾದಶೀ | ಸೋಸಲೆ |
| 30 | ಶ್ರೀ ವಿದ್ಯಾಪೂರ್ಣತೀರ್ಥರು | ಕ್ರಿ.ಶ. 1834–1872 | ಶ್ರಾವಣ ಶುದ್ಧ ಷಷ್ಠೀ | ಸೋಸಲೆ |
| 31 | ಶ್ರೀ ವಿದ್ಯಾಸಿಂಧುತೀರ್ಥರು | ಕ್ರಿ.ಶ. 1872–1884 | ಆಷಾಢ ಶುದ್ಧ ನವಮೀ | ಸೋಸಲೆ |
| 32 | ಶ್ರೀ ವಿದ್ಯಾಶ್ರೀಧರತೀರ್ಥರು | ಕ್ರಿ.ಶ. 1884–1887 | ಚೈತ್ರ ಶುದ್ಧ ಚತುರ್ದಶೀ | ಶ್ರೀರಂಗ |
| 33 | ಶ್ರೀ ವಿದ್ಯಾಶ್ರೀನಿವಾಸತೀರ್ಥರು | ಕ್ರಿ.ಶ. 1887–1890 | ವೈಶಾಖ ಶುದ್ಧ ಚತುರ್ಥೀ | ಸೋಸಲೆ |
| 34 | ಶ್ರೀ ವಿದ್ಯಾಸಮುದ್ರತೀರ್ಥರು | ಕ್ರಿ.ಶ. 1890–1903 | ಕಾರ್ತೀಕ ಶುದ್ಧ ದ್ವಿತೀಯಾ | ಸೋಸಲೆ |
| 35 | ಶ್ರೀ ವಿದ್ಯಾರತ್ನಾಕರತೀರ್ಥರು (ಅಂಕಿತ–ನಾಮಗಿರಿ ನಾರಸಿಂಹ) | ಕ್ರಿ.ಶ. 1903–1915 | ವೈಶಾಖ ಬಹುಳ ನವಮೀ | ಸೋಸಲೆ |

| 1 | 2 | 3 | 4 | 5 |
|---|---|---|---|---|
| 36 | ಶ್ರೀ ವಿದ್ಯಾವಾರಿಧಿತೀರ್ಥರು | ಕ್ರಿ.ಶ. 1915–1940 | ಭಾದ್ರಪದ ಶುದ್ಧ ಪಂಚಮೀ | ಶ್ರೀರಂಗ |
| 37 | ಶ್ರೀ ವಿದ್ಯಾಪ್ರಸನ್ನತೀರ್ಥರು (ಅಂಕಿತ-ಪ್ರಸನ್ನ) | ಕ್ರಿ.ಶ. 1940–1969 | ಮಾರ್ಗಶೀರ ಶುದ್ಧ ಪೂರ್ಣಿಮಾ | ಸೋಸಲೆ |
| 38 | ಶ್ರೀ ವಿದ್ಯಾಪಯೋನಿಧಿತೀರ್ಥರು | ಈಗ ಸರ್ವಜ್ಞಾಚಾರ್ಯರಪೀಠದಲ್ಲಿ ವಿರಾಜಮಾನರಾಗಿರುವ ಯತಿಗಳು. | | |

ಆಪಾದ ಮೌಳಿ ಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ॥
ತೇನವಿಘ್ನಾ : ಪ್ರಣಶ್ಯಂತಿ ಸಿಧ್ಯಂತಿ ಚ ಮನೋರಥಾಃ ॥

॥ ಶ್ರೀಮನ್ಮೂಲ ಗೋಪಾಲಕೃಷ್ಣಾರ್ಪಣಮಸ್ತು ॥

# ಶ್ರೀವ್ಯಾಸರಾಜಮಠದ ಗುರುಪರಂಪರಾ ಸ್ತೋತ್ರಗಳು:

ಅಭ್ರಮಂ ಭಂಗರಹಿತಮಜಡಂ ವಿಮಲಂ ಸದಾ ।
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ॥೧॥

ಶ್ರೀಮಧ್ವಸಂಸೇವನಲಬ್ಧ ಶುದ್ಧ ವಿದ್ಯಾಸುಧಾಂಬೋನಿ
ಧಯೋಽಮಲಾಯೇ ।
ಕೃಪಾಲವಃ ಪಂಕಜನಾಭತೀರ್ಥಾಃ ಕೃಪಾಲವಸ್ಯಾನ್ಮಯಿ
ನಿತ್ಯಮೇಷಾಂ ॥೨॥

ಭೂದೇವಿತನಯಾಸಕ್ತಃ ರಘ್ವೀಶಪದಮಾನಸಃ ।
ನೃಹರಾಖ್ಯ ಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ ॥ ॥೩॥

ಮಾಧವಾಂಘ್ರಿಯುಗಾಸಕ್ತಾಃ ಮಾಧವಾಖ್ಯಮುನೀಶ್ವರಾಃ ।
ಅಭ್ರದುರ್ಮಾಧ್ವತೀರ್ಥಂ ಯೇ ಪದಸ್ತೇಽಭೀಷ್ಟಸಂತತಿಂ ॥೪॥

ಶ್ರೀಮದ್ರಮಾರಮಣ ಸದ್ಗುರುಪಾದಸಂಗೀ ವ್ಯಾಖ್ಯಾನಿನಾದ
ದಲಿತಾಖಿಲದುಷ್ಟದರ್ಪಂ ।
ದುರ್ವಾದಿವಾರಣವಿದಾರಣದಕ್ಷದೀಕ್ಷ ಮಕ್ಷೋಭ್ಯತೀರ್ಥ ಮೃಗರಾಜ
ಮಹಂ ನಮಾಮಿ ॥೫॥

ಚಿತ್ರೈಃಪದೈಶ್ಚಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ ।
ಗುರುಭಾವಂ ವ್ಯಂಜಯತೀ ಭಾತಿ ಶ್ರೀ ಜಯತೀರ್ಥವಾಕ್ ॥೬॥

ವಿದ್ಯಾಧೀಶಪದಾಸಕ್ತೋ ವಿದ್ಯಾಕೌಶಲಸಂಯುತಃ
ವಿದ್ಯಾಧಿರಾಜತೀರ್ಥಾಖ್ಯೋ ಗುರುರ್ಭೂಯಾದಭೀಷ್ಟದಃ ॥೭॥

ವಿಬುಧೇಂದ್ರಾದಿ ಶಿಷ್ಯಾದೀನ್ ನವಕೃತ್ವಸುಧಾಂಬುಧಿಃ ।
ಅಪಾತಯತ್ ಸ ರಾಜೇಂದ್ರತೀರ್ಥೋಽಭೂದಭೀಷ್ಟದಃ ॥೮॥

ರಮಾರಮಣಪಾದಾಬ್ಜಯುಗಳಾಸಕ್ತಮಾನಸಃ ।
ಜಯಧ್ವಜಮುನೀಂದ್ರೋಽಸೌ ಗುರುರ್ಭೂಯಾದಭೀಷ್ಟದಃ ॥೯॥

ಪುರುಷೋತ್ತಮಪಾದಾಬ್ಜ ಹೃದಯಃಶಾಸ್ತ್ರಕೋವಿದಃ ।
ಪುರುಷೋತ್ತಮತೀರ್ಥಾಖ್ಯೋ ಗುರುರ್ಭೂಯಾದಭೀಷ್ಟದಃ ॥೧೦॥

ಕಂಸಧ್ವಂಸಿ ಪದಾಂಭೋಜ ಸಂಸಕ್ತೋ ಹಂಸಪುಂಗವಃ ।
ಬ್ರಹ್ಮಣ್ಯಗುರುರಾಜಾಖ್ಯೋ ವರ್ತತಾಂ ಮಮ ಮಾನಸೇ ॥೧೧॥

ಅರ್ಥಿಕಲ್ಪಿತಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ ॥೧೨॥

ಯದುನಾಥಪದಾಂಭೋಜ ಸಂಸಕ್ತೋ ಹಂಸರಾಣ್ಮುದೇ ।
ಶ್ರೀನಿವಾಸಗುರುರ್ಭೂಯಾದ್ವ್ಯಾಸವೀಸೂನು ಪೂಜಕಃ ॥೧೩॥

ರಾಮತೀರ್ಥಗುರುಂ ವಂದೇ ರಾಮಪದಾಬ್ಜಭಾಜಕಂ ।
ಸಮಜ್ಞಾಸ ಧರೇಶಾನಾಂ ರಾಮಪಾರಮ್ಯ ಸಾಧಕಂ ॥೧೪॥

ಲಕ್ಷ್ಮೀಕಾಂತಗುರುಂ ವಂದೇ ಲಕ್ಷಣಾರ್ಯಮಹಂ ಸದಾ ।
ರಕ್ಷಿತಾನ್ ಸ್ವೇನ ಕುರ್ವಾಣೋ ಲಕ್ಷ್ಮೀಶಾನ್ ಭಿಕ್ಷುಕಾನಪಿ ॥೧೫॥

ವೇಂಕಟೇಶ ಪದಾಸಕ್ತಂ ವಾದಿಭಂಗವಿಕ್ಷಣಂ ।
ಶ್ರೀಪತೀಂದ್ರಗುರುಂ ವಂದೇ ಸರ್ವಸ್ವಂತ್ರೇಷು ಕೋವಿದಂ ॥೧೬॥

ವಂದಾರುಕಲ್ಪತರವೇ ವಾದಿಕೈರವಭಾನವೇ ।
ಶ್ರೀರಾಮಚಂದ್ರಗುರವೇ ನಮಃ ಕಾರುಣ್ಯಸಿಂಧವೇ ॥೧೭॥

ಅರ್ಥ್ಯಭೀಪ್ಸಿತಕಲ್ಪದ್ರುಃ ವಾದಿಮತ್ತೇಭಕೇಸರೀ ।
ಲಕ್ಷ್ಮೀವಲ್ಲಭಯೋಗೀಂದ್ರೋ ಭೂಯಾದಸ್ಮದಭೀಷ್ಟದಃ ॥೧೮॥

ನಾಥಮಾನೇಷ್ಟ ಮಂದಾರಃ ಶ್ರೀನಾಥ ಸ್ಮರಣಾದರಃ ।
ಲಕ್ಷ್ಮೀನಾಥಗುರುರ್ಭೂಯಾನ್ಮನ್ಮನೋಭೀಷ್ಟಸಿದ್ಧಯೇ ॥೧೯॥

ಲಕ್ಷ್ಮೀನಾಥಾಬ್ಧಿಸಂಭೂತೋ ಲಕ್ಷ್ಮೀಪತಾಖ್ಯ ಚಂದ್ರಮಾಃ ।
ಸಾಧುಸಂದೋಹ ಕುಮುದಾಮೋದಸ್ಸಂಪಾತುನಸ್ಸದಾ ॥೨೦॥

ಭವಸಂಪಾತಸಂಘಾತ ಪ್ರಧ್ವಂಸನ ಘಟಿನಾಂ ಚಣಂ ।
ಲಕ್ಷ್ಮೀನಾರಾಯಣಮುನಿಂ ಲಕ್ಷಣಾರ್ಯಮಹಂ ಭಜೇ ॥ ॥೨೦॥

ಸರ್ವಂ ಸರ್ವಂ ಸಹೇಶಾನಸ್ಸಭಾ ಸುಜಿತವಾದಿರಾಟ್ ।
ಸರ್ವದಾ ಸರ್ವದೋ ಭೂಯಾದ್ರಘುನಾಥಮುನೀಶ್ವರಃ ॥ ॥೨೨॥

ವಿದ್ವತ್ಪಂಕಜ ಮಾರ್ತಾಂಡಃ ವಾದಿಮತ್ತೇಭಕೇಸರಿ ॥
ಜಗನ್ನಾಥಗುರುರ್ಭೂಯಾರ್ಜಾಜ್ಞಾಯಸೇ ಶ್ರೀಯಸೇ ಮಮ ॥೨೩॥

ಪ್ರಾರ್ಥಿತಾಭೀಷ್ಟ ಸಂತಾನಃ ಪ್ರತ್ಯರ್ಥಿಮತಭಂಜನಃ ।
ಶ್ರೀನಾಥತೀರ್ಥಗುರುರಾಟ್ ಈಪ್ಸಿತಾರ್ಥಪ್ರದೋಽಸ್ತುನಃ ॥೨೪॥

ವಾದಿಯೂಥಪಸಂದೋಹಗರ್ವಪಾತನಕೇಸರೀ ।
ನೈಜತಾರ್ಥಿತದೋಭೂಯಾದ್ವಿದ್ಯಾನಾಥಗುರುಶ್ರಿಯೈ॥ ॥೨೫॥

ವಾದಿವಾರಣ ಗರ್ವಾಣಾಂ ಛೇಧೇ ಕಂಠೀರವಸ್ಸದಾ ।
ವಿದ್ಯಾಪತಿಗುರುರ್ಭೂಯಾನ್ಮನ್ಮನೋಭೀಷ್ಟಸಿದ್ಧತೆ ॥ ॥೨೬॥

ವಿದ್ಯಾಚಂದ್ರಿಕಯಾಯುಕ್ತೋ ವಿದ್ಯಾಪತಿಕರಾಬ್ಜಜಃ ।
ವಿದ್ಯಾವಲ್ಲಭತೀರ್ಥೇಂದುಃ ವಿದ್ಯಾಂ ಯಚ್ಛತುಮೇನಘಾಂ ॥ ॥೨೭॥

ಚತುಷಷ್ಟಿಕಲಾಯುಕ್ತಃ ಸರ್ವಸ್ವಾಂಬುಧಿಪಾರಗಃ ।
ವಿದ್ಯಾಕಾಂತಗುರುರ್ಭೂಯಾದ ಸ್ಮದಿಷ್ಟಾರ್ಥಸಿದ್ಧಯೇ ॥ ॥೨೮॥

ವಿದ್ಯಾಗಭಸ್ತಿ ವಿಧ್ವಸ್ತಾಽ ವಿದ್ಯಾತಿಮಿರಸಂತತಿಃ ।
ವಿದ್ಯಾನಿಧಿಗುರುರ್ಭೂರ್ಯಾದಸ್ಮದಿಷ್ಟಾರ್ಥಸಿದ್ಧಯೇ ॥ ॥೨೯॥

ವಿದ್ವತ್ಕುಮುದಚಂದ್ರಾಯ ಭಕ್ತಪಂಕಜಭಾನವೇ ।
ವಿದ್ಯಾಪೂರ್ಣಾರ್ಯಗುರವೇ ನಮಸ್ಸರ್ವೇಷ್ಟಹೇತವೇ ॥ ॥೩೦॥

ಸದ್ಯಾಚಿತಾಮರತರುಃ ಹೃದ್ಯಾಶ್ಚರ್ಯಪ್ರಭಾವವಾನ್ ॥
ವಿದ್ಯಾಸಿಂಧುಯತಿರಾಟ್ ದದ್ಯಾದ್ವಿದ್ಯಾಂ ಮುರದ್ವಿಷಃ ॥ ॥೩೧॥

ದುರ್ವಾದಿಮತ್ತಮಾತಂಗ ಕಂಠೀರವ ಉದಾರಧೀಃ ।
ವಿದ್ಯಾಶ್ರೀಧರಯೋಗೀಶಃ ಶ್ರೇಯಸೇ ಭೂಯಸೇಸ್ತುಮೇ ॥ ॥೩೨॥

ಭೈಷ್ಮೀಜಾನಿಪದಾಂಭೋಜ ಮಾನಸಾಸಕ್ತಂ ಮಾನಸಂ ।
ಮೌನಿವರ್ಯಂ ಸದಾ ವಿದ್ಯಾಶ್ರೀನಿವಾಸಮಹಂ ಭಜೇ ॥೩೩॥

ಶ್ರೀಮದ್ವಿದ್ಯಾಶ್ರೀನಿವಾಸತೀರ್ಥಪಾಣಿ ಸರೋಜ ಭೂಃ ।
ಕೃಪಾಂ ವಿದ್ಯಾಸಮುದ್ರ ಗುರುಃ ಕುರ್ಯಾತ್ಸದಾಮಯಿ ॥ ॥೩೪॥

ದುರ್ವಾದಿಮತ್ತನಾಗೇಂದ್ರವಿದಾರಣ ಮೃಗಾಧಿಪಃ ।
ವಿದ್ಯಾರತ್ನಾಕರ ಗುರುಸ್ಸನ್ನಿಧತ್ತಾಂ ಸದಾ ಹೃದಿ ॥ ॥೩೫॥

ಶ್ರೀಕೃಷ್ಣಾಂಘ್ರಿಯುಗಾಸಕ್ತಮಾನಸೋ ಯತಿಸತ್ತಮಃ ।
ಶ್ರೀಮದ್ವಿದ್ಯಾವಾರಿಧಿರ್ಮಗುರುರ್ಭೂರ್ಯಾದಭೀಷ್ಟದಃ ॥೩೬॥

ಶ್ರೀಮತ್ಕೃಷ್ಣ ಪದಾಂಭೋಜ ಮಾನಸಂ ಕವಿಪುಂಗವಂ ।
ಶ್ರೀಮದ್ವಿದ್ಯಾಪ್ರಸನ್ನಾಬ್ಧಿಂ ಗುರುಂ ವಂದೇ ನಿರಂತರಂ ॥ ॥೩೭॥

॥ ಶ್ರೀಮಧ್ವೇಶಾರ್ಪಣಮಸ್ತು ॥

# ಶ್ರೀ ವ್ಯಾಸರಾಜ ಗುರುಸಾರ್ವಭೌಮರು

## (ಶ್ರೀ ಚಂದ್ರಿಕಾಚಾರ್ಯರು)

## (ಕ್ರಿ. ಶ. 1478-1539)

ಧ್ಯಾನಶ್ಲೋಕಗಳು:

ಅರ್ಥಿಕಲ್ಪಿತಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ ॥ ॥೧॥

ಮಧ್ವಸಿದ್ಧಾಂತದುಗ್ಧಾಬ್ಧಿ ವೃದ್ಧಿಪೂರ್ಣಕಲಾಧರಃ ।
ವ್ಯಾಸರಾಜಯತೀಂದ್ರೋ ಮೇ ಭೂಯಾದೀಪ್ಸಿತ ಸಿದ್ಧಯೇ ॥ ॥೨॥

ಪದವಾಕ್ಯಪ್ರಮಾಣಜ್ಞಾನ್ ಸಂಪ್ರದಾಯಾರ್ಥ ಕೋವಿದಾನ್ ।
ವ್ಯಾಸತೀರ್ಥಮುನೀನ್ ಸೇವೆ ದುರ್ವಾದಿ ಫಣಿ ಪಕ್ಷಿಪಾನ್ ॥ ॥೩॥

(ಶ್ರೀರಾಘವೇಂದ್ರರು–ತಾತ್ಪರ್ಯ ಚಂದ್ರಿಕಾ ಪ್ರಕಾಶ)

ಬ್ರಹ್ಮಣ್ಯತೀರ್ಥವಾರ್ಧ್ಯುತ್ಥಂ ವ್ಯಾಸತೀರ್ಥೇಂದುಮಾ ಭಜೇ ।
ತಾತ್ಪರ್ಯಚಂದ್ರಿಕಾಯುಕ್ತಂ ಸರ್ವತಾಪಾಪಹಂಸತಾಂ ॥ ॥೪॥

(ಬಿದರಳ್ಳಿ ಶ್ರೀನಿವಾಸತೀರ್ಥರು–ನ್ಯಾಯಾಮೃತ ಪ್ರಕಾಶ)

ಟೀಕೋಕ್ತಿ ಮಹಿಮಾಯೇನ ವ್ಯಾಸರಾಜೇನ ಬೋಧಿತಃ ।
ತದುಕ್ತಿ ಮಹಿಮಾಯೈಸ್ತಾನ್ ಗುರೂನನುದಿಶಂಶ್ರಯೇ ॥ ॥೫॥

(ಶ್ರೀವ್ಯಾಸತತ್ತ್ವಜ್ಞರು-ನ್ಯಾಯಾಮೃತವ್ಯಂಜನ)

—●—

# ಶ್ರೀವ್ಯಾಸರಾಜರ ಪರವಾದ ಕೀರ್ತನೆಗಳು

## ೧೬೬

(ರಂಗವಿಠ್ಠಲಾಂಕಿತ-ಶ್ರೀಪಾದರಾಜವಿರಚಿತ)

ರಾಗ-ಪೂರ್ವಿ ಆದಿತಾಳ

ಇದಿರದಾವನು ನಿನಗೀಧರೆಯೊಳು
ಪದುಮನಾಭನ ದಾಸ ಪರಮೋಲ್ಲಾಸಾ ॥ ॥ಪ॥

ವಾದಿತಿಮಿರಮಾರ್ತಾಂಡನೆಂದೆನಿಸಿದೆ
ವಾದಿಶರಭ ಭೇರುಂಡ ವ್ಯಾಸರಾಯಾ ॥ ॥೧॥

ಯತಿಯೊಳಗೆ ನಿಮ್ಮಂದದವರುಂಗಳ
ಪ್ರತಿಗಾಣೆ ಈ ಕ್ಷಿತಿಯೊಳು ಯತಿರಾಯಾ ॥ ॥೨॥

ಹಮ್ಮನುಳಿದು ಶ್ರೀಪತಿ ರಂಗವಿಠ್ಠಲನ್ನ
ಸುಮ್ಮಾನದಿಂ ಸೇವಿಪ ವ್ಯಾಸಮುನಿರಾಯಾ ॥ ॥೩॥



## ೧೬೭

(ಗುರುಪುರಂದರವಿಠ್ಠಲಾಂಕಿತ)

ರಾಗ-ಕಾಂಬೋಧಿ ಝಂಪೆತಾಳ

ವಾಸುದೇವನ ಚರಣವನಜ ವಂದಿಪನೆ ಸ
ನ್ಯಾಸಿರತ್ನಾಕರನೆ ವ್ಯಾಸಮುನಿರಾಯಾ ॥ ॥ಪ॥

ವಾದಿಗಜಸಿಂಹ ದುರ್ವಾದಿಮೃಗಭೇರುಂಡ
ವಾದಿಫಣಿಗರುಡ ತತ್ವಾದಿ ರಚಿತ
ವಾದಿಭಯಂಕರ ದುರ್ವಾದಿ ಕೋಲಾಹಲ
ವಾದಿಮಸ್ತಕಶೂಲ ಮಧುರಗುಣಶೀಲಾ ||೧||

ವೈಷ್ಣವೋತ್ತಮನೆ ಸದ್ವೈಷ್ಣವಪ್ರಜಾನಂದ
ವೈಷ್ಣವಾಗಮಭರಿತ ವೈಷ್ಣವಸುಪ್ರೀತ
ವೈಷ್ಣವಕಮಲಸೂರ್ಯ ವೈಷ್ಣವಕುಮುದಚಂದ್ರ
ವೈಷ್ಣವಕುಲೋತ್ಕೃಷ್ಟ ವೈಷ್ಣವ ವಿಶಿಷ್ಟ ||೨||

ಹರಿಯಲ್ಲದನ್ಯತ್ರನರಿಯಾದ ಮಹಾಮಹಿಮ
ಸಿರಿಕೃಷ್ಣಚರಣ ಸರಸೀರು ಭೃಂಗ
ಗುರುಪುರಂದರವಿಠ್ಠಲನೆ ಪರದೈವವೆಂ
ದರುಹಿ ಸುಜನರ ಪೊರೆವ ವ್ಯಾಸಮುನಿರಾಯಾ ||೩||



## ೧೬೮

### (ವಿಜಯವಿಠ್ಠಲಾಂಕಿತ)

ರಾಗ–ಉದಯರಾಗ ವಾರ್ಧಿಕಷಟ್ಪದಿ

ವ್ಯಾಸರಾಯರ ಸ್ಮರಿಸಿರೋ ||ಪ||

ವ್ಯಾಸರಾಯರ ಸ್ಮರಿಸಲೇಸು ಜನ್ಮದ ಪಾಪ
ನಾಶವಾಗುವುದು ನಿಮ್ಮಾಸೆ ಸಿದ್ಧಿಸುವುದು
ಲೇಸಾಗಿ ತುತಿಸಲಾನಂದ ವೈಕುಂಠ ಪರಿವಾಸವಾಗುವುದು
ಬಿಡವೆ ||ಅ||

ಪಿತನಿಂದ ನೊಂದು ರತಿಪತಿಪಿತನ ತುತಿಸಿ ಮಹ-
ಪ್ರತಿಬಂಧಕಗಳು ಅಪ್ರತಿಯಾಗಿ ಬಂದಿರಲು-
ಅತಿವೇಗದಿ ಪಾರಂಗತನಾಗಿ ಹಿತದಿಂದ ಮತಿವಂತನಾಗಿ ಸತತ
ಕ್ಷಿತಿಯಭಾರವ ವಹಿಸಿ ಕ್ರತುಭುಜ ಮುನೀಶ್ವರನ
ತುತಿಸಿಕೊಳ್ಳುತಲಿದ್ದು ಮಿತಕಾಲ ಹಿಂಗಳೆದು
ಸುತಗೆ ರಾಜ್ಯವನಿತ್ತು ಕೃತಕಾರ್ಯನಾಗಿ ಅಚ್ಯುತವರುಷವನು ಸಾರಿ ॥೧॥

ಅಲ್ಲಿ ತ್ರಿನೇತ್ರ ಸಿರಿವಲ್ಲಭನ ಸಿರಿಪಾದ
ಪಲ್ಲವಾರುಣಚಿತ್ತದಲಿ ತಂದು ಪ್ರತಿದಿವಸ
ನಿಲ್ಲಿಸುತ ನಿಗಮೋಕ್ತದ ಪೂಜಿಸುತಿರ್ದ ಬಲ್ಲ ಭಕುತಿಗಳಿಂದಲಿ
ಖುಲ್ಲನಲಿ ಪುಟ್ಟಿರ್ದ ಪ್ರಹ್ಲಾದದೇವನವ
ಬಲ್ಲಿದನು ತಾನಾಗಿ ಸಂಸಾರವುತ್ತರಿಸಿ
ಎಲ್ಲ ಕಾಲದೊಳಗಿರುತಿರಲು ನಾರದಮುನಿ ಮೆಲ್ಲನೆ
ನಡೆದಂದನಾಗ ॥೨॥

ಬಂದ ನಾರದಮುನಿಗೆ ಪ್ರಹ್ಲಾದನೆರಗುತ್ತ
ನಿಂದು ಕರಗಳ ಮುಗಿದು ತ್ರಾಹಿತ್ರಾಹಿಯೆಂದು
ಒಂದೊಂದು ವಾಕ್ಯದಿಂ ಕೊಂಡಾಡಿ ಬೆಸಗೊಂಡು ಇಂದು ನಿಮ್ಮಯ ದರ್ಶನ
ಚಂದವಾಯಿತು ಎನಗೆ ಎತ್ತಲಿಂದಲಿ ಇತ್ತ
ಬಂದಿರಿ ವಿಚಾರವದ ಪೇಳೆಂದು ಬಿನ್ನೈಸೆ
ವೃಂದಾರಕಾಮುನಿ ನುಡಿದ ಕೃಷ್ಣನ ಮಹಿಮೆ ಚಂದ ಹಾಹಾ ಎನುತಲಿ ॥೩॥

ದಿಕ್ಕುಗಳ ಮರೆದು ಧಿಗಿಧಿಗಿಯೆಂದು ಜಿಗಿದಾಡೆ
ಉಕ್ಕಿದುವು ಕಣ್ಣಲಾನಂದಾಶ್ರುಧಾರೆ ತಾ-
ರಕ್ಕಿಯಂದದಿ ಬಿಂದುಗಳುದುರುತ್ತಲಿರೆ ದೇವಕ್ಕಿನಂದನನೆಂದುವ
ನಕ್ಕು ಕಿಲಕಿಲ ರಹಸ್ಯಗಳನುಚ್ಚರಿಸುತಲಿ
ತಕ್ಕೈಸಿ ತಿಳುಹಿದನು ಮುಂದಣಾಗಮನವನು
ಇಕ್ಕೆಲರು ಸಹಪೊಂದಿ ಜನಿಸುತಿಹ ವೃತ್ತಾಂತವಕ್ಕಟಾ
ಏನೆಂಬೆನು ॥೪॥

ವೃಕೋದರನಿಂದ ದೇಹವನು ಬಿಡುವಾಗ ಬಾ-
ಹ್ಲೀಕರಾಯನಾಗಿ ಪುಟ್ಟಿರ್ದ ಪ್ರಹ್ಲಾದ ತಾ-
ನುಕುತಿಯಿಂದಲಿ ಪೊಗಳಿ ವರವ ಬೇಡಿದನು ವೈದಿಕಮಾರ್ಗವನ್ನೆ ಪಿಡಿದು
ಉಕುತಿಯನು ಸಾಧಿಸುತ ಕಲಿಯೊಳಗೆ ನಿಮ್ಮ ಪೂ-
ಜಕನಾಗಿ ಬಾಳುವೆನು ಎಂದು ತಲೆಬಾಗಿದನು
ಭಕುತಿಗೆ ಮೆಚ್ಚುತ್ತೈಸಲೆಯೆಂದ ಮಾತಿಂದು ಪ್ರಕಟವಾಯಿತು
ಧರೆಯೊಳು ||೫||

ಬನ್ನೂರುಗ್ರಾಮದಲಿ ಜನಿಸಿದನು ಭೂಸ್ಪರ್ಶ-
ಮುನ್ನಯಿಲ್ಲದೆ ಬೆಳೆದು ಶುದ್ಧಮುನಿ ಸುಬ್ರಾಹ್ಮ-
ರನ್ನು ಪಾಲಿಸುವ ಪರಮಾನಂದಭರಿತ ಬ್ರಹ್ಮಣ್ಯತೀರ್ಥರ ಕರದಲಿ
ಚೆನ್ನಾಗಿ ಪೋಷಿಸಿಕೊಂಡು ಉಪನೀತನಾಗಿ
ಸನ್ಯಾಸಪಟ್ಟವನು ಧರಿಸಿ ಧರ್ಮದಲಿ ಸ-
ತ್ಪುಣ್ಯ ಶ್ರೀಪಾದರಾಯರಲಿ ವಿದ್ಯೆಯನೋದಿ ಘನ್ನ ಕೀರ್ತಿಯಲಿ
ಮೆರೆದ ||೬||

ಮಂತ್ರೋದ್ಧಾರಕನ ಪ್ರತಿಷ್ಠಿಸಿ ವಿಜಯೀಂದ್ರ
ಸಂತವಾದೀರಾಜ ಗೋವಿಂದ ಪುರಂದರ-
ರಿಂತು ಶಿಷ್ಯರ ಪಡೆದು ಉಪದೇಶವನು ಕೊಟ್ಟು ಮಂತ್ರಸಿದ್ಧಿಯನು ಮಾಡಿ
ಭ್ರಾಂತಿಗೊಳಿಸುವ ಮಹಾ ಅನ್ಯಾಯ ಮತವೆಂಬ
ಕಾಂತಾರಪಾವಕನು ವ್ಯಾಸಾಬ್ಧಿಯನು ಬಿಗಿದು
ಶಾಂತ ನಿಸ್ಸೀಮರೆನಿಸಿದ ಯತಿಶಿರೋರತ್ನ ಚಿಂತಿತಾರ್ಥಪ್ರದಾಯಕ ||೭||

ರಾಯಗದ್ದುಗೆಯೇರಿ ಅವನಿಗೆ ಬಂದ ಮಹಾ
ಕುಯೋಗವನು ನೂಕಿ ರಾಜ್ಯಂಗಳೊಳಗಿರ್ದ
ಮಾಯಿಗಳ ಮಥಿಸಿ ಬಲು ಮುದದಿಂದ
ಸೌವರ್ಣಛಾಯದಂದಲೊಪ್ಪುತ

ನ್ಯಾಯಾಮೃತ ತರ್ಕತಾಂಡವ ಚಂದ್ರಿಕೆಯೆಂಬ
ನ್ಯಾಯಗ್ರಂಥವ ರಚಿಸಿ ಮುಕ್ತಿಪಥವನು ತೋರಿ
ಶ್ರೀಯರಸನೊಲಿಸಿ ನಾನಾ ವಿಧದಿ ಪೂಜಿಸುತ ಸ್ಥಿರರಾದರು
ಹಂಪೆಯಲ್ಲಿ ||೨||

ಮಧ್ವಮತವೆಂಬ ವರದುಗ್ಧಾಬ್ಧಿ ಪೂರ್ಣೇಂದು
ಹೃದ್ಯಬ್ಜದೊಳಗೆ ಕೃಷ್ಣನ್ನ ಪಾದಾಂಬುಜವ
ಚಿದ್ವಾಕ್ಯದಲಿ ನಿಲಿಸಿ ಕಾವ್ಯದಿಂ ಕೊಂಡಾಡಿ ಸದ್ವೀರವೈಷ್ಣವರಿಗೆ
ಸದ್ವಾರ್ತೆಯನು ಪೇಳಿ ತವಕದಿಂದಲಿ ತಾವು
ಸದ್ವೈಷ್ಣವರ ಲೋಕ ಸೇರಿ ಮರಳೈದಿದರು
ಮಧ್ವವಲ್ಲಭ ನಮ್ಮ ವಿಜಯವಿಠ್ಠಲನ ಪಾದದ್ವಯಿ ಭಕುತಿಯಲಿ ನಿತ್ಯ ||೩||



## ೧೬೯

### (ಪ್ರಾಣೇಶವಿಠ್ಠಲಾಂಕಿತ)

ರಾಗ–ಕಲ್ಯಾಣಿ ತ್ರಿಪುಟತಾಳ

ವ್ಯಾಸರಾಯರ ಬೇಸರದೆ ನೆನೆ
ದಾಸೆ ಪೂರ್ತಿಸಿಕೊಂಬೆ ನಾಂ 

ದಾಸರಾಯರಿಗಾ ಸುಮಂತ್ರೋಪ
ದೇಶ ಕರುಣದಿ ಮಾಡಿದ
ದೇಶದೊಳಗೆ ವಿಶೇಷ ಮೆರೆದು ಅ–
ಶೇಷ ಜನರುದ್ಧರಿಸಿದ 

ವಾಸುದೇವನ ದ್ವೇಷಿಗಳ ಅನಾ-
ಯಾಸದಿಂ ನೀಕರಿಸಿದ
ದಾಸವರ್ಗವ ಪೋಷಿಸಲು ನಿ-
ರ್ದೋಷ ಗ್ರಂಥ ರಚಿಸಿದ ॥೨॥

ಭಾಸುರಚರಿತ ಭೇಶಭಾಸ ಸು-
ಕಾಷಾಯಾಂಬರ ಧರಿಸಿದ
ವೀಶವಾಹನ ಕ್ಲೇಶನಹ ಪ್ರಾ-
ಣೇಶವಿಠ್ಠಲನೊಲಿಸಿದ ॥೩॥



## ೧೭೦

(ಶ್ರೀದವಿಠ್ಠಲಾಂಕಿತ)

ರಾಗ–ಆನಂದಭೈರವಿ ಆದಿತಾಳ

ಇದಿರಾರೋ ಗುರುವೇ ಸಮರ್ಯಾರೋ ॥ಪ॥

ದುರಳವಾದಿಗಳನು ಮರಳುಮಾಡೋರನ್ನ
ತರಿದಿಟ್ಟು ಚಂದ್ರಿಕಗ್ರಂಥವ ರಚಿಸಿ
ಧರಣಿಸುರರ ಪರಿವೃಢರ ಸುನಿಕರಕೆ
ಪರಿಪರಿಯಲ್ಲುಪದೇಶಿಸುತಿಪ್ಪಗೆ ॥೧॥

ಕನಕಕಶಿಪುತನಯನು ಘನಅಂಶದಿ
ಫಣಿಗಣ ರಮಣನಾವೇಶದಿ ಪೊಳೆಯುತ
ದಿನದಿನದಲ್ಲಿ ಹರಿ ಮನದಣಿಸುತಲಿಪ್ಪ
ಘನಮಹಿಮನೆ ಯತಿಕುಲತಿಲಕ ॥೨॥

ಉಂಡವಾದಿಗಳೆಂಬೊದ್ದಂಡವೀ ತಂಡಕೆ
ಗಂಡುಸಿಂಹ ತರ್ಕತಾಂಡವ ಯುಕುತಿಯು
ದಂಡುಗಳಿಗೆ ಕಟ್ಟಿಕೊಂಡು ತಾರ್ಕಿಕರ
ಷಂಡಗಳನು ಖಂಡಿಸುತಿಹ ಯತಿಯೆ ||೩||

ಬ್ರಹ್ಮಣ್ಯತೀರ್ಥರ ಕರಕಮಲದಿ ಪುಟ್ಟಿ
ಬ್ರಹ್ಮಜನಕ ನರಸಿಂಹಮೂರುತಿಯು ಹೃ
ದ್ಗಹ್ವರದಲಿ ಧ್ಯಾನಿಸುತಿಹ ವ್ಯಾಸರಾ
ಜಾಹ್ವಯದಿಂದ ಭುವಿಯೊಳ್ಮೆರೆದೆ ||೪||

ದಶದಿಶೆಯೆಲಿ ದಶರಥಸುತಮಹಿಮೆಯ
ಕುಶಲದಿಂದಲಿ ಸಭೆಯೊಳಗೆ ಸ್ಥಾಪಿಸುತ
ಹೊಸ ಹೊಸ ಬಿರುದು ತಂದ್ದೆಸರು ಎತ್ತಿರುವಂಥ
ವಸುಧೆಯೊಳಗೆ ಸುಖಕರ ಸುಚರಿತಗೆ ||೫||

ಹೊಳೆಯುತಿರುವ ರುಕ್ಮಿಣಿಪತಿ ಕೃಷ್ಣನು
ನಲಿಯುತ ಕುಣಿದಾಡುತಲಿಪ್ಪನು
ಥಳಥಳಿಸುವ ರಾಮವೇದವ್ಯಾಸರು ನಿಮ್ಮ-
ಗಿಳೆಯೊಳಮೂಲ್ಯ ಪ್ರಸಾದವನೀವರು ||೬||

ಶ್ರೀದವಿಠ್ಠಲಗತಿಪ್ರಿಯರಾದ ಶ್ರೀ-
ಪಾದರಾಯರಲ್ಲಿ ಓದಿ ಗ್ರಂಥಗಳ
ವಾದಿರಾಜ ವಿಜಯೀಂದ್ರ ಪ್ರಮುಖರಿಗೆ
ಆದರದಲಿ ಪಾಠ ಹೇಳುತಿಪ್ಪನೆ ||೭||

## ೧೭೧

### (ಅಂಕಿತ-ಕದರುಂಡಲಿಗೀಶ)

ರಾಗ-ವಸಂತ ಆದಿತಾಳ

ಚಂದ್ರಾ ಧರೆಯೊಳು ಮೂಡಿದಾ
ಪ್ರಹ್ಲಾದನೆಂಬ ಚಂದ್ರಾ ||ಪ||

ಹೊಂದಿದವರ ಹೃದಯಾಂಧಕಾರನೀಗುವ ಗುಣ
ಸಾಂದ್ರ ವ್ಯಾಸರಾಜೇಂದ್ರನೆಂಬುವ ||ಅ||

ವಿಕಸಿತಸತ್ಕುಮುದಕೆ ಬಂಧೂ–ಖಳ
ಮುಖಾರವಿಂದವಳಿದು-ಕೊಂದೂ
ಸುಖದಿ ಕುಣಿವ ಬುಧಚಕೋರ ತತ್ವ
ಪ್ರಕಾಶಕರ ಚಂದ್ರಿಕಾಪೂರ್ಣನೆಂಬ ||೧||

ಹೇಯಮತಗಳೆಲ್ಲವ ಮುರಿದೂ–ಬಲು
ಬಾಯಿಬಾರದೆ ನಿಲ್ಲಲು ಜರಿದೂ
ಮಾಯಿಚೋರರು ಪಲಾಯನ-ಗೈಯ್ಯಲು
ನ್ಯಾಯಾಮೃತಮಯ ವೃಷ್ಟಿಕರೆಸಿದಾ ||೨||

**ಕಂಡೂ ಗೋಪಾಲಕೃಷ್ಣನ ಪದವ-ಕದ**
**ರುಂಡಲಿಗೀಶ ಭಕ್ತನಾ ಮೋದವ**
**ಕೊಂಡು ಭೂಮಂಡಲವ ಪಂಡಿತಜನಮನ**
ತಾಂಡವಾಡಿಪ ತರ್ಕತಾಂಡವ ಮಾಡಿದ ||೩||



## ೧೭೨

### (ಶ್ಯಾಮಸುಂದರಾಂಕಿತ)

ರಾಗ–ಭೀಮಪಲಾಸ ಛಾಪುತಾಳ

ಗುರುವ್ಯಾಸರಾಯರಾ ಪಾಲಿಸೋ–ಮೊರೆಹೊಕ್ಕ ನಿನ್ನಾ
ಶರಣನ್ನ ಮಾತು ಲಾಲಿಸೋ ॥ ॥ಪ॥

ಕರುಣಾಕರ ಭವಕರಕರಿಗಾರದೆ
ಕರವಪಿಡಿದು ಪೊರೆಎಂದು–ನಾನಿನ್ನ ಕರೆವೆ–ಬಾ–
ಯ್ದ್ದರಿವೆ-ನತಜನ ಸಂತರ ತ್ರರುವೆ ॥ ॥ಅ॥

ಮಧ್ವಮುನಿ ಸುಮತೋದ್ಧಾರಾ-ಯತಿಕುಲತಿಲಕಾ
ಅದ್ವೈತಾರಣ್ಯಪಾವಕಾ-ವಿದ್ವಜ್ಜನತತಿ
ಸದ್ವಿನುತನೆ ಪದಪದ್ಮಕೆ ನಮಿಸುವೆ
ಶುದ್ಧ ಸುಜ್ಞಾನವ ನೀಡೋ–ಅಘದೊಡೋ
ಕೃಪೆಮಾಡೋ-ಸುತನೆಂದು ನೋಡೋ ॥ ॥೧॥

ವಿರಚಿಸಿ ಗ್ರಂಥತ್ರಯವ–ಬೋಧಿಸಿ ಭೇದಾ
ಪೊರೆದಿ ದ್ವಿಜಪರಿವಾರಾ ॥
ನೆರೆನಂಬಿದ ಭೂವರಗೆ ಧಾವಸುತ ಭರದಿ
ಬರುವ ಕುಹುಯೋಗ ಕಂಟಕವ ದಯದೀ–ನೀ
ತರಿದೀ–ಸುಖಗೆರದೀ-ಧಾರಣಿಯೊಳು ಮೆರೆದೀ ॥ ॥೨॥

ವಂದಿಪೆನು ಗತಿದಾಯಕಾ-ಶ್ರೀವರ ಶ್ಯಾಮ
ಸುಂದರ ಕೃಷ್ಣೋಪಾಸಕಾ ॥

ತಂದೆ ಎಂದು ನಿನ್ನ ಪೊಂದಿ ಪ್ರಾರ್ಥಿಸುವೆ
ಒಂದು ಜವದಿ-ಪುರಂದರದಾಸರ ಪ್ರಿಯಾ
ಪಿಡಿಕಯ್ಯಾ-ಶುಭಕಾಯಾ–ಶಕ್ತವಿಜನಗೇಯಾ ॥ ॥೩॥



## ೧೭೩

## (ಪ್ರಸನ್ನ–ಅಂಕಿತ) (ಶ್ರೀವಿದ್ಯಾಪ್ರಸನ್ನತೀರ್ಥರಿಂದ ವಿರಚಿತ)

ರಾಗ-ಮಧ್ಯಮಾವತಿ ಆದಿತಾಳ

ಅವನಿಯೊಳವತರಿಸಿದ ವ್ಯಾಸರಾಯ–ಭೂಸುರಜನವರ್ಯ
ಸುವಿನೋದವ ಪಡೆದರು ಸುರನರಜನರು ॥ ॥ಪ॥

ಪವನಸುತರ ಮತ ಭೂಮಿಯಲಿ ಸುಲಭದಿ
ವಿವರಿಸಿ ಜನರಿಗೆ ಪ್ರವಚನವೆಸಗಲು ॥ ॥ಅ॥

ಗುರುಬ್ರಹ್ಮಣ್ಯರ ವರಪದಕಮಲಗಳ
ಪರತರ ಭಕುತಿಯಲಿ-ಪರಿಪರಿ ಸೇವಿಸಿ ಗುರು
ಕರುಣದಲಿ-ಹರುಷವ ಪೊಂದುತಲಿ ॥
ವರವ ಪಡೆದ ಭೂಸುರ ರಾಮಾರ್ಯರ
ವರಸತಿಯುದರದಿ ವಹ್ನಿಪುರದೊಳವ
ತರಿಸುತ ಧರೆಯೊಳು ಸುಜನಗಣವನು
ದ್ಧರಿಸಲು ಮುದದಲಿ ಸಿರಿಪತಿಭಕುತನು ॥ ॥೧॥

ಅತಿಬಾಲ್ಯದಿ ಗುರ್ವಾಜ್ಞೆಯನನುಸರಿಸಿ
ಯತಿಯಾಶ್ರಮವಹಿಸಿ ಕ್ಷಿತಿಯೊಳಪರೋಕ್ಷಜ್ಞಾನಿಗಳೆಂದು

ಪ್ರಥೆಯನು ಪೊಂದಿದ ಲಕ್ಷ್ಮೀನಾರಾಯಣ
ಯತಿಯಲಿ ಶಾಸ್ತ್ರಾಮೃತಪಾನ ಮಾಡುತ
ಅತಿಸುಲಭದಿ ಶೃತಿತತಿಗಳ ಸಾರವ
ಕ್ಷಿತಿಸುರರೊಳಗತಿಹಿತದಲಿ ಅರುಹಲು ॥ ॥೨॥

ಗಜಗಹ್ವರದೇಶದ ನರಪತಿಗಳಿಗೆ ನಿಜವರ ಕರುಣದಲಿ
ವಿಜಯಾಭ್ಯುದಯಗಳನು ಸತತ ಪೊಂದಿಸುತ
ರಜಕಕನಕನವಮಣಿಗಳಾಯುತ ವಾ
ರಿಜವನು ಪೋಲುವ ಸಿಂಹಾಸನದಲಿ
ಬಿಜಯಗೈಯುತ ಸುಜನಸಮೂಹಕೆ
ನಿಜಪದಯುಗಳಾಂಬುಜಸೇವೆ ನೀಡಲು ॥ ॥೩॥

ನಂದತೀರ್ಥವರ ಶಾಸ್ತ್ರಗಳನು ಚಂದದಿ ವಿವರಿಸಲು
ಚಂದ್ರಿಕಾ ನ್ಯಾಯಾಮೃತ ಮೊದಲಾದ ಗ್ರಂಥಗಳನು ರಚಿಸಿ
ಮಂದಜನಕೆ ಮುಚುಕುಂದನ ಶುಭಗುಣ
ವೃಂದಗಳನು ಸುಖದಿಂದ ಬೋಧಿಸಲು
ಆನಂದ ಪದಗಳನು ರಚಿಸುತ ಶುಭಗುಣ
ಸಾಂದ್ರನ ಭಜನಾನಂದ ಪೊಂದಿಸಲು ॥ ॥೪॥

ವಿಜಯೀಂದ್ರ ವಾದಿರಾಜ ಮೊದಲಾದ
ನಿಜವರ ಶಿಷ್ಯರುಗಳ ವ್ರಜಕೆ ಶಾಸ್ತ್ರಾರ್ಥಗಳನು ಬೋಧಿಸಲು
ದ್ವಿಜಕುಲಸಂಭವರಾದ ಪುರಂದರ ಸುಜನ ಶಿರೋಮಣಿ
ಕನಕ ಪ್ರಮುಖ ಪೂಜಿತಪದಗಳಾಂಬುಜ
ಯತಿಶೇಖರ ವಿಜಯಸಾರಥಿಯು ಪ್ರಸನ್ನನಾಗಲೆಂದು ॥ ॥೫॥



೧೭೪

(ಅಂಕಿತ-ಕಾರ್ಪರ ನರಹರಿ)

ರಾಗ–ಖರಹರಪ್ರಿಯ ಆದಿತಾಳ

ವಂದನೆಯ ಮಾಡಿರೈ ವ್ಯಾಸಮುನೀಂದ್ರರ ಪಾಡಿರೈ ‖ ‖ಪ‖
ವಂದಿಸುವರ ಭವಬಂಧವ ಬಿಡಿಸಿ ಆ
ನಂದಕೊಡುವ ಕರ್ಮಂದಿವರೇಣ್ಯರ ‖ ‖ಅ‖

ನಂದತೀರ್ಥಮತಸಿಂಧುವಿಗೆ ಪೂರ್ಣಚಂದ್ರಾ–ಸದ್ಗುಣಸಾಂದ್ರಾ
ಚಂದ್ರಿಕಾದಿ ಪ್ರಬಂಧತ್ರಯ ನಿರ್ಮಿಸಿದಾ–ಮತವರ್ಧಿಸಿದಾ
ನಂದದಿಂದ ಮುಚುಕುಂದವರದನರ್ಚಿಸಿದಾ–ಸಲೆ ಮೆಚ್ಚಿಸಿದಾ
ಹಿಂದಕೆ ಹರಿಯನು ಸ್ತಂಭದಿ ತೋರಿದ
ಕಂದ ಪ್ರಹ್ಲಾದರೆ ಬಂದಿಹರೆನ್ನುತ ‖ ‖೧‖

ಕೃಷ್ಣರಾಯನಿಗೆ ದುಷ್ಟಯೋಗ ಪರಿಹರಿಸಿ–ರಾಜ್ಯವ ವಹಿಸೀ
ಯಥೇಷ್ಟ ದಾನಫಲ ಕೊಟ್ಟು ನೃಪನನುಗ್ರಹಿಸಿ–ರಾಜ್ಯದೊಳಿರಿಸಿ
ಶ್ರೇಷ್ಠವಾದ ಸಿಂಹಾಸನದಲಿ ಕುಳ್ಳಿರಿಸಿ–ಆಜ್ಞೆಯ ತಿಳಿಸೀ
ಎಷ್ಟು ಮಹಿಮರೆಂದರಿತು ಇವರ ಮನ
ಮುಟ್ಟಿ ಭಜಿಪರಿಗಭೀಷ್ಟೆಯ ಗರೆವರ ‖ ‖೨‖

ಧರೆಯೊಳು ಚರಿಸುತ ಪರಮತತಿಮಿರಕೆ ಸೂರ್ಯ–ಯತಿಕುಲವರ್ಯ
ಗುರುಮಧ್ವಮತದಿ ಸದ್ವೈಷ್ಣವ ಕುಮುದಕೆ ಛಾರ್ಯ–ಪಾವನಚರ್ಯಾ
ಪರಮಮಹಿಮ ಬ್ರಹ್ಮಣ್ಯತೀರ್ಥರಿಗೆ ತನಯಾ–ಕವಿಜನಗೇಯಾ
ಶರಣರ ಪೊರೆಯುವ ಸಿರಿ ಕಾರ್ಪರ ನರ-
ಹರಿಯನೊಲಿಸಿರುವ ಪರಮಮಹಾತ್ಮರ ‖ ‖೩‖

## ೧೭೫

### (ತಂದೆ ವೆಂಕಟೇಶವಿಠ್ಠಲಾಂಕಿತ)

ರಾಗ-ಮೋಹನ ಆದಿತಾಳ

ನವವೃಂದಾವನದಿ ವಿರಾಜಿಪ ಯತಿ-
ಪವಿಧರನ್ಯಾರೇ ಪೇಳಮ್ಮಾ ॥ ॥ಪ॥

ಕವಿಜನನಾಯಕ ಪವನವಂತ ಸಮು-
ದ್ಭವ ಅಭಿನವವ್ಯಾಸಾರ್ಯ ಕಾಣಮ್ಮಾ ॥ ॥ಅ॥

ಭೂಸಾಮ್ರಾಜ್ಯ ಮುದ್ರಾಸೀನದಿ ಬಹು । ಭಾಸಮಾನನಿವನ್ಯಾರಮ್ಮಾ
ಕ್ಲೇಶಿತ ಕೃಷ್ಣಜನೇಶನ ಪೊರೆದು ಸಿಂ । ಹಾಸನವೇರಿದನ್ಯಾರಮ್ಮಾ ॥
ದೇಶಾಡಳಿತ ಸದ್ವ್ಯಾಸಂಗದಿ ದಿ । ಗ್ದೇಶದಿ ಮೆರೆದವನ್ಯಾರಮ್ಮಾ
ಭಾಸುರಮಂತ್ರೋಪದೇಶದಿಂದ ಭಕ್ತ । ರಾಸೆ ಪೂರೈಸುವ
ವ್ಯಾಸತೀರ್ಥರೇ ॥ ॥೧॥

ಫಲಮಂತ್ರಾಕ್ಷತೆ ಒಲಿದರೆ ಹಾಲಾ । ಹಲಕಲಿಕುಲಕಿವನ್ಯಾರಮ್ಮಾ
ಜಲಧಿ ಬಿಗಿದ ಬುಧಜಲಜಾರ್ಕವಿದ । ಗ್ದ ಲಲಾಮನ್ಯಾರಮ್ಮಾ ॥
ಖಳಹಿರಣ್ಯಜ ಲಂಕಾಪಾಲನನುಜ ನೃಪ । ಬಾಲ್ಹೀಕಾನಿವನ್ಯಾರಮ್ಮಾ
ಇಳೆಯೊಳು ಮುಂದೆ ಮಂತ್ರಾಲಯದೊಳು ಯತಿ । ಕುಲತಿಲಕ
ನೆನಿಸಿಸಿದಾ ಫಲಪ್ರದನಮ್ಮಾ ॥ ॥೨॥

ಚಂದ್ರಿಕಾರ್ಯ ವಿಜಯಿಾಂದ್ರ ಸ್ವಾದೀಶ ಪು । ರಂದರಾರ್ಯರ ಗುರುವ್ಯಾರಮ್ಮಾ
ಅಂದಣಗಜ ಧ್ವಜ ಕುಂದಣ ಬಿರುದುಗ । ಳಿಂದೆಸೆವನು ಇವನ್ಯಾರಮ್ಮಾ ॥
ನಂದತೀರ್ಥರಮತ ಸಿಂಧುಶಶಾಂಕ ಮಾ । ಯಾಂಧದಿನೇಶನ್ಯಾರಮ್ಮಾ
ತಂದೆವೆಂಕಟೇಶವಿಠ್ಠಲನೊಲುಮೆಯೊಳು । ಬಂಧವಳಿದ ವ್ಯಾಸೇಂದ್ರ
ಕಾಣಮ್ಮಾ ॥ ॥೩॥



## ೧೭೬

## (ಗುರುಗೋವಿಂದ ವಿಠ್ಠಲಾಂಕಿತ)

## (ವೃಂದಗಾನದಲ್ಲಿ)

ರಾಗ–ವಸಂತ ಆದಿತಾಳ

ವ್ಯಾಸಾರ್ಯ–ವ್ಯಾಸಾರ್ಯ ॥ ॥ಪ॥

ದೈಶಿಕಾರ್ಯ ಬ್ರಹ್ಮಣ್ಯರ ಕರಜನೆ । ॥ಅ॥

ಭುವಿಸ್ಪರ್ಶಿಲ್ಲದೆ ಅವನಿಜನಿತ ಗುರು
ತವಪದಭಜಕಗೆ ಭವಪರಿಹರಿಸುವೆ ॥ ॥೧॥

ಭೀಕರವೆನೆ ನೃಪಗಾಕುಯೋಗವ ।
ತಾಕುವ ಮುನ್ನವೇ ನೀ ಕಳೆದೆಯೋ ಗುರು ॥ ॥೨॥

ಹನ್ನೆರಡೊರ್ಷವು ಪನ್ನಗನಗಪ ಪ್ರ
ಪನ್ನಭಜಕ ನಿನಗಿನ್ನುಂಟೇ ಸಮ ॥ ॥೩॥

ಮಂದಜನೋದ್ಧಾರವೆಂದು ರಚಿಸಿದೇ
ಚಂದ್ರಿಕಾದಿತ್ರಯ ಸುಂದರ ಗ್ರಂಥ॥ ॥೪॥

ವ್ಯಾಸತ್ರಯಾಭಿಧ ಲೇಸುಗ್ರಂಥ ಸಂ–
ಕಾಶಿಸೆ ಬಹುವಿಧ ಆಸುರೀಮತಹನ ॥ ॥೫॥

ದಾಸಪಂಥ ಉಪದೇಶಿಸೆ ಶ್ರೀನಿ–
ವಾಸನಾಯಕರ ದಾಸರೆಂದೆನಿಸಿದೆ ॥ ॥೬॥

ವಾಸವನಾಮಕದಾಸರಿಂದ ದಿ–
ಗ್ದೇಶ ಪ್ರಸರ ಮಹಿದಾಸನ ನಾಮವು ॥ ॥೭॥

ಶ್ವಸನಸಮತ ವಿದ್ವೇಷಿವಾದಹರ
ದೇಶದೇಶ ಹನುಮೇಶ ಪ್ರತಿಷ್ಠಿತ ॥ ॥೮॥

ಸಾರ್ವಭೌಮ ಗುರುಗೋವಿಂದವಿಠ್ಠಲನ
ತೋರ್ವುದೆನ್ನ ಹೃದಯಾವಕಾಶದಲಿ ॥ ॥೯॥

## ೧೭೭

(ಅಂಕಿತ-ಕುಂಡಲಗಿರಿವರ)

ರಾಗ-ಕಾನಡ ಅಟ್ಟತಾಳ

ಗುರುವ್ಯಾಸರಾಯ-ಗುರುವ್ಯಾಸರಾಯ ಶ್ರೀ-
ಹರಿಗತಿಪ್ರಿಯ ಗುರುವ್ಯಾಸರಾಯ ॥ ॥ಪ॥

ಶರ್ಕರಕ್ಷೀರವ ಕುಡಿಸುವಂದದಿ ಶುಭ
ತರ್ಕತಾಂಡವ ನ್ಯಾಯಾಮೃತವನು ಸುರಿದಾ ॥ ॥೧॥

ಸಾಂದ್ರಹೃತ್ತಾಮತಂದ್ರ ಓಡಿಸುವ ಶ್ರೀ-
ಚಂದ್ರಿಕರ ಕರುಣಾಂಬುಧಿ ಧೀರಾ ॥ ॥೨॥

ಕುಂಡಲಗಿರಿವರ ಪಾಂಡವಾಧಾರ ಬ್ರ-
ಹ್ಮಾಂಡಕೋಟೀಶನ ಮಂಡಿಸಿ ನಲಿದಂಥ-ಗುರುವ್ಯಾಸರಾಯ ॥ ॥೩॥



॥ ಶ್ರೀಃ ಹರಿಃ ಓಂ ॥

# ಯತಿಗಳಪೀಳಿಗೆ

## ಭಾಗ - ೫

# ಶ್ರೀಪಾದರಾಜರು

೧. ಧ್ಯಾನಶ್ಲೋಕಗಳು.

೨. ಶ್ರೀಪಾದರಾಜ ಮಠದ ಯತಿಪರಂಪರಾ.

೩. ಶ್ರೀಪಾದರಾಜರಪರವಾದ ಕೀರ್ತನೆಗಳು.

# ಶ್ರೀಪದ್ಮನಾಭತೀರ್ಥರ ಮೂಲಮಹಾಸಂಸ್ಥಾನ ಶ್ರೀಪಾದರಾಜಮಠದ ಗುರುಪರಂಪರಾ

೧. **ಶ್ರೀಮಧ್ವಾನಂದತೀರ್ಥಭಗವತ್ಪಾದರು (ಕ್ರಿ.ಶ. 1238-1317)**
೨. **ಶ್ರೀಪದ್ಮನಾಭತೀರ್ಥರು (ಕ್ರಿ.ಶ: 1317-1324)**
೩. ಶ್ರೀಲಕ್ಷ್ಮೀಧರತೀರ್ಥರು
೪. ಶ್ರೀಸಂಕರ್ಷಣತೀರ್ಥರು
೫. ಶ್ರೀಪರಶುರಾಮತೀರ್ಥರು
೬. ಶ್ರೀಆದಿರಾಜತೀರ್ಥರು
೭. ಶ್ರೀಸತ್ಯವ್ರತತೀರ್ಥರು
೮. ಶ್ರೀಸುವರ್ಣವರ್ಣತೀರ್ಥರು
೯. **ಶ್ರೀಪಾದರಾಜತೀರ್ಥರು (ಕ್ರಿ.ಶ. 1404-1502)**
೧೦. ಶ್ರೀಹಯಗ್ರೀವತೀರ್ಥರು
೧೧. ಶ್ರೀಶ್ರೀಪತಿತೀರ್ಥರು
೧೨. ಶ್ರೀಶ್ರೀಧರತೀರ್ಥರು
೧೩. ಶ್ರೀಗೋಪಾಲಸ್ವಾಮಿತೀರ್ಥರು
೧೪. ಉದ್ದಂಡ ಶ್ರೀರಾಮಚಂದ್ರತೀರ್ಥರು
೧೫. ಶ್ರೀರಘುನಾಥತೀರ್ಥರು
೧೬. ಶ್ರೀಲಕ್ಷ್ಮೀಮನೋಹರತೀರ್ಥರು
೧೭. ಶ್ರೀಲಕ್ಷ್ಮೀಪತಿತೀರ್ಥರು
೧೮. ಶ್ರೀಲಕ್ಷ್ಮೀನಾಥತೀರ್ಥರು
೧೯. ಶ್ರೀಲಕ್ಷ್ಮೀಕಾಂತತೀರ್ಥರು

೨೦. ಶ್ರೀಕಾಂತತೀರ್ಥರು

೨೧. ಶ್ರೀಶ್ರೀನಿಧಿತೀರ್ಥರು

೨೨. ಶ್ರೀವಿದ್ಯಾನಿಧಿತೀರ್ಥರು

೨೩. ಶ್ರೀಜ್ಞಾನನಿಧಿತೀರ್ಥರು

೨೪. ಶ್ರೀಗುಣನಿಧಿತೀರ್ಥರು

೨೫. ಶ್ರೀಗುಣಸಾರನಿಧಿತೀರ್ಥರು

೨೬. ಶ್ರೀಪ್ರಜ್ಞಾನಿಧಿತೀರ್ಥರು

೨೭. ಶ್ರೀಸುಬೋಧನಿಧಿತೀರ್ಥರು

೨೮. ಶ್ರೀವೈರಾಗ್ಯನಿಧಿತೀರ್ಥರು

೨೯. ಶ್ರೀ ಸುಜ್ಞಾನನಿಧಿತೀರ್ಥರು.

೩೦. ಶ್ರೀ ಸುಗುಣನಿಧಿತೀರ್ಥರು.

೩೧. ಶ್ರೀ ಸುಧೀನಿಧಿತೀರ್ಥರು.

೩೨. ಶ್ರೀ ಮೇಧಾನಿಧಿತೀರ್ಥರು.

೩೩. ಶ್ರೀ ದಯಾನಿಧಿತೀರ್ಥರು.

೩೪, ಶ್ರೀ ಸತ್ಯನಿಧಿತೀರ್ಥರು.

೩೫. ಶ್ರೀ ವಿಜಯನಿಧಿತೀರ್ಥರು.

೩೬. ಶ್ರೀವಿಜ್ಞಾನನಿಧಿತೀರ್ಥರು

(ಈಗ ಶ್ರೀಸರ್ವಜ್ಞಾಚಾರ್ಯರಪೀಠದಲ್ಲಿ ವಿರಾಜಮಾನರಾಗಿರುವ ಯತಿವರೇಣ್ಯರು)

॥ ಶ್ರೀಗೋಪಿನಾಥೋವಿಜಯತೇ ॥

# ಶ್ರೀಪಾದರಾಜಮಠದ ಯತಿಪರಂಪರಾ ಸ್ತೋತ್ರ :

ಸಾಕ್ಷಾನ್ಮದ್ಗುರು ಪರ್ಯಂತಾಂ ವಂದೇ ಗುರು ಪರಂಪರಾಮ್ ॥
ಶ್ರೀಮದ್ಧಂಸಂ ವಿಧಾತಾರಂ ಸನಕಾದಿಗುರೂನಪಿ ।
ದೂರ್ವಾಸ ಸುಜ್ಞಾನನಿಧಿಂ ಗರುಡವಾಹನ ಸಂಜ್ಞಿತಮ್ ॥
ಕೈವಲ್ಯತೀರ್ಥಂ ಜ್ಞಾನೇಶಂ ಪರತೀರ್ಥ ಗುರುಂ ತಥಾ ।
ಸತ್ಯಪ್ರಜ್ಞಂ ಪ್ರಾಜ್ಞತೀರ್ಥಂ ಅಮೃತಪ್ರೇಕ್ಷಾಂ ಗುರೂನಪಿ
ಶ್ರೀಮದಾನಂದತೀರ್ಥಂ ಏಕವಿಂಶತಿ ಭಾಷ್ಯದೂಷಕಂ ಭಜೇ ॥೧॥

ಪೂರ್ಣಪ್ರಜ್ಞಕೃತಂ ಭಾಷ್ಯಂ ಆದೌತದ್ಭಾವಪೂರ್ವಕಂ ।
ಯೋವ್ಯಾಕರೋನ್ನಮಸ್ತಸ್ಮೈ ಪದ್ಮನಾಭಾಖ್ಯಯೋಗಿನೇ ॥೨॥

ಗೋವರ್ಧನಧರಂ ಗೋಪೀಶ್ವರಂ ಅತಿಸುಮನೋಹರಂ ।
ಧ್ಯಾಯಂತಂ ಸತತಂ ನೌಮಿ ಲಕ್ಷ್ಮೀಧರಯತೀಶ್ವರಮ್ ॥೩॥

ಶ್ರೀಲಕ್ಷ್ಮೀಧರ ಸಂಜಾತಾನ್ ಸಂಕರ್ಷಣಮುನೀಶ್ವರಾನ್
ಭಾಷ್ಯಪ್ರವಚನಾಸಕ್ತಾನ್ ಗುರೂನ್ವಂದೇ ನಿರಂತರಂ ॥೪॥

ಸಂಕರ್ಷಣ ಕರಾಬ್ಜೋತ್ಥ ವಿದ್ವತ್ಕುಮುದ ಬಾಂಧವಃ ।
ಪರಶುರಾಮಾಖ್ಯ ಯತಿರಾಟ್ ರಾಜತಾಂ ಮಮಮಾನಸೇ ॥೫॥

ಪರಶುರಾಮತೀರ್ಥಕರಾಬ್ಜೋತ್ಥಂ ಸುಶಾಂತ್ಯಾದಿ ಗುಣಾರ್ಣವಂ ।
ತತ್ತ್ವಪ್ರದೀಪ ಪ್ರವಚನಾಸಕ್ತಂ ಆದಿರಾಜಗುರುಂ ಭಜೇ ॥೬॥

ಸ್ವರ್ಣವರ್ಣ ವ್ರತೀಂದ್ರಾರ್ಯ ಕರಕಂಜಸುಪೂಜಿತಮ್ ।
ಆದಿರಾಜ ಕರಾಬ್ಜೋತ್ಥಂ ಸತ್ಯವ್ರತಗುರುಂ ಭಜೇ ॥೭॥

ವಸುಧಾತಲ ವಿಖ್ಯಾತಂ ವೈರಾಗ್ಯಾದಿ ಗುಣಾರ್ಣವಂ ।
ವೇದವೇದಾಂಗ ಚತುರಂ ಸ್ವರ್ಣವರ್ಣಗುರುಂ ಭಜೇ ॥೮॥

ಜ್ಞಾನವೈರಾಗ್ಯ ಭಕ್ತ್ಯಾದಿ ಕಲ್ಯಾಣಗುಣಶಾಲಿನಃ ।
ಲಕ್ಷ್ಮೀನಾರಾಯಣ ಮುನೀನ್ವಂದೇ ಗುರೂನ್ಮಮ ॥೯॥

ವಾಗ್ವಜ್ರಗ್ರಂಥ ಸಾರಾರ್ಥಕೋವಿದಂ ಸುವಿದ್ವನ್ಮಣಿರಾಜಿತಂ ।
ಸರ್ವಾಭೀಷ್ಟಪ್ರದಾತಾರಂ ಶ್ರೀಹಯಗ್ರೀವಗುರುಂ ಭಜೇ ॥೧೦॥

ಶ್ರೀಹಯಗ್ರೀವತೀರ್ಥಸಂಜಾತಂ ಸಂಪ್ರದಾಯಾರ್ಥಕೋವಿದಂ ।
ಸಚ್ಛಾಸ್ತ್ರಾವವಿತಪಾತಾರಂ ಶ್ರೀಪತಿತೀರ್ಥ ಗುರುಂ ಭಜೇ ॥೧೧॥

ಶ್ರೀಪತೇರ್ಯತಿ ರಾಜಸ್ಯ ಕರಕಂಜ ಸಮುದ್ಭವಾನ್ ।
ಶ್ರೀಧರಾಖ್ಯ ಮುನೀನ್ವಂದೇ ಸಚ್ಛಾಸ್ತ್ರಾಧ್ಯಯನೇ ನಿರತಾನ್ ॥೧೨॥

ಸನ್ನ್ಯಾಯ ರತ್ನಾವಲ್ಯಾದಿ ವ್ಯಾಖ್ಯಾಯಾ ಮೋದದಾಯಕಂ ।
ಗೋಪೀನಾಥ ಪದಾಸಕ್ತಂ ಗೋಪಾಲಸ್ವಾಮಿನಂ ಭಜೇ ॥೧೩॥

ಗೋಪಾಲಸ್ವಾಮಿ ಸಂಜಾತಂ ದುರ್ಮತಧ್ವಾಂತ ಭಾಸ್ಕರಂ ।
ಉದ್ದಂಡ ರಾಮಚಂದ್ರಾಖ್ಯ ಗುರೂನ್ ವಂದೇ ನಿರಂತರಂ ॥೧೪॥

ರಾಮಚಂದ್ರಪದಾಸಕ್ತಂ ಪ್ರಸನ್ನೀಕೃತರಾಮಕಂ ।
ಪದವ್ಯಾಖ್ಯಾನ ಕುಶಲಂ ರಘುನಾಥಗುರುಂ ಭಜೇ ॥೧೫॥

ದ್ವಿಗ್ವಿಜಯ ರಂಗವಿಠ್ಠಲ ಕೃಪಾಪಾತ್ರಂ ರಘುನಾಥ ಶಿಷ್ಯ ಶೇರಾಂ ।
ಲಕ್ಷ್ಮೀಕಟಾಕ್ಷ ಪಾತ್ರಂ ಲಕ್ಷ್ಮೀಮನೋಹರ ಗುರುಂ ಭಜೇ ॥೧೬॥

ಸುಖತೀರ್ಥಮತಾಬ್ಧೀಂದು ಲಕ್ಷ್ಮೀಮನೋಜ್ಞ ಪಾಣಿಜಂ ।
ಸರ್ವಾಭೀಷ್ಟ ಪ್ರದಂ ನೃಣಾಂ ಲಕ್ಷ್ಮೀಪತಿಗುರುಂ ಭಜೇ ॥೧೭॥

ಶ್ರೀಪಾದರಾಜ ಪದದ್ವಂದ್ವಂ ಮಾನಸಾಂಭೋಜ ಮಂದಿರಂ ।
ಬ್ರಹ್ಮಣ್ಯಪುರ ವಾಸಾಸಕಂ ಲಕ್ಷ್ಮೀನಾಥಗುರುಂ ಭಜೇ ॥೧೮॥

ನರಸಿಂಹ ಪದಾಸಕ್ತಂ ಭಕ್ತಾಭೀಷ್ಟಪ್ರದಂ ಯತಿಮ್ ।
ವಿಜ್ಞಾನವಿಮಲಂ ಶಾಂತಂ ಲಕ್ಷ್ಮೀಕಾಂತತೀರ್ಥಗಂ ಭಜೇ ॥೧೯॥

ಸಚ್ಛಾಸ್ತ್ರಾಸಕ್ತ ಹೃದಯಂ ವಿದ್ವತ್ಕಮಲ ಭಾಸ್ಕರಂ ।
ಶ್ರೀಕಾಂತಮುನಿಮೀಡ್ಯೇಹಂ ಶ್ರೀನಿವಾಸ ಸಮರ್ಚಕಂ ॥೨೦॥

ಸುಸಂಸ್ತುತಿ ಪ್ರಣಯನ ಪ್ರಸನ್ನ ಗುರುರಾಜಕಮ್ ।
ಶ್ರೀನಿಧಿಯೋಗೀಂದ್ರ ಪದದ್ವಂದ್ವ ನಮಾಮ್ಯಹವ್ ॥೨೧॥

ಶ್ರೀನಿಧ್ಯಂಬೋಧಿ ಸಂಭೂತಂ ವಿದುಷಾಂ ಚ ಸದಾಪ್ರಿಯಂ ।
ಪೂಜಯಂತಂ ವಿಠ್ಠಲಾದೀನ್ ವಂದೇ ವಿದ್ಯಾನಿಧಿಂ ಮುದಾ ॥೨೨॥

ಪಶ್ಚಿಮೇ ರಂಗನಾಥ ಕ್ಷೇತ್ರೇ ಬೃಂದಾವನೇಸ್ಥಿತಂ ।
ಕಾವೇರೀ ತೋಯಜಾಸಕ್ತಂ ನೌಮಿ ಜ್ಞಾನನಿಧಿಂ ಯತಿಂ ॥೨೩॥

ಜ್ಞಾನನಿಧಿಕರಾಬ್ಜೋತ್ಥಂ ಸುವಿದ್ಮಣಿ ರಾಜಿತಂ ।
ಸುಮ್ರಪ್ರಾಜ್ಞ ಪ್ರದಾತಾರಂ ವಂದೇ ಗುಣನಿಧಿಂ ಮುನಿಂ ॥೨೪॥

ಗುಣಚಿಂತಾಮಣಿ ಶ್ರೇಣಿ ಗುಣನಿಧ್ಯರ್ಣವೋದಿತಂ ।
ಗುಣಸಾರಖ್ಯ ಯೋಗೀಂದ್ರಂ ಸೇವೇಹಂ ಜ್ಞಾನಸಿದ್ಧಯೇ ॥೨೫॥

ಗುಣಸಾರನಿಧಿತೀರ್ಥೇಂದು ವಿದ್ವತ್ಕುಮುದಭಾಂಧವಃ ।
ಪ್ರಜ್ಞಾನಶೇವಧಿರ್ಭೂಯಾತ್ ಅಸ್ಮದಿಷ್ಟಾರ್ಥಸಿದ್ಧಯೇ ॥೨೬॥

ಪ್ರಜ್ಞಾನನಿಧಿಪ್ರಿಯಂ ನೌಮಿ ವೇದವೇದಾಂಗಕೋವಿದಂ ।
ಮಾಧ್ವಿಕ ಕುಲ ಶ್ರೇಷ್ಠಂ ಸುಬೋಧನಿಧಿತೀರ್ಥಕಂ ॥೨೭॥

ಸಚ್ಛಾಸ್ತ್ರಬೋಧ ಚತುರಾನ್ ನೃಸಿಂಹ ತಟವಾಸಿನಃ ।
ಶ್ರೀಹರಿಧ್ಯಾನನಿರತಾನ್ ವೈರಾಗ್ಯನಿಧಿ ದೇಶಿಕಾನ್ ॥೨೮॥

ಗೋಪೀನಾಥವಿಠ್ಠಲ ಪದದ್ವಂದ್ವ ವಾರಿಜಾಸಕ್ತಮಾನಸಂ ।
ಶ್ರೀಸುಜ್ಞಾನನಿಧಿಂ ವಂದೇ ವೈರಾಗ್ಯನಿಧಿಪುತ್ರಕಮ್ ॥೨೯॥

ಸುಜ್ಞಾನನಿಧಿತೀರ್ಥಾಖ್ಯೋದಿತ ಸಂತಾಪಶಾಂತಯೇ ।
ಪಾಯತ್ಸುಗುಣನಿಧ್ಯಾಖ್ಯೋ ಗುರುರಸ್ಮಾದ್ವಿಪದ್ಗಣಾತ್ ॥೩೦॥

ಸತ್ಯದೀಪ್ತಂ ಪಶ್ಯವಾಚಂ ಯಮಾದ್ಯೈರಷ್ಟಭಿರ್ಯುತಂ ॥
ಹಂಸಾಧೀಶಂ ನಿಷೇವದ್ವಂ ಸುಧೀನಿಧಿ ನಿಧಿಂ ಬುಧಾಃ ॥೩೦॥

ಗೋಪೀನಾಥಸಪರ್ಯಾದಿ ವೈರಾಗ್ಯಗುಣಶಾಲಿನಃ ।
ಮೋದಾನಿಧಿ ಗುರೂನ್ವಂದೇ ಸಚ್ಛಿಷ್ಯಾಪಾಪನ್ನಿವಾರಕಾನ್ ॥೩೨॥

ದಯಾನಿಧಿ ಗುರುಂ ವಂದೇ ಭಕ್ತ್ಯಾದಿ ಗುಣಮಂಡಿತಮ್ ॥೩೩॥

ಗೋಪೀನಾಥಪದದ್ವಂದ್ವಂ ವಾರಿಜಾಸಕ್ತಮಾನಸಂ ।
ಶ್ರೀಮತ್ಸತ್ಯನಿಧೀಂ ವಂದೇ ದಯಾನಿಧಿ ಸುಪುತ್ರಕಂ ॥೩೪॥

ಸತ್ಯದೀಪ್ತಂ ಪಶ್ಯವಾಚಂ ಶಾಂತ್ಯಾದಿಗುಣಮಂಡಿತಂ ।
ಶ್ರೀಸತ್ಯನಿಧಿಸಂಜಾತಂ ವಿಜಯಾಖ್ಯನಿಧಿಂ ಭಜೇ ॥೩೫॥

॥ ಇತಿ ಶ್ರೀಪಾದರಾಜಮಠಗುರುಪರಂಪರಾಸ್ತೋತ್ರಂ ಸಂಪೂರ್ಣಂ ॥

॥ ಶ್ರೀಮಧ್ವೇಶಾರ್ಪಣಮಸ್ತು ॥



# ಶ್ರೀ ಶ್ರೀ ಪಾದರಾಜಗುರುಸಾರ್ವಭೌಮರು

(ಕ್ರಿ.ಶ. ೧೪೦೪-೧೫೦೨)

(ಪುಣ್ಯದಿನ:—ಜ್ಯೇಷ್ಠ ಶುದ್ಧ ಚತುರ್ದಶೀ)

(ವೃಂದಾವನ ಸ್ಥಳ:—ಶ್ರೀ ನರಸಿಂಹತೀರ್ಥ–ಮುಳಬಾಗಿಲು)

**ಧ್ಯಾನಶ್ಲೋಕಗಳು:—**

ಜ್ಞಾನವೈರಾಗ್ಯಭಕ್ತ್ಯಾದಿ ಕಲ್ಯಾಣಗುಣಶಾಲಿನಃ ।
**ಲಕ್ಷ್ಮೀನಾರಾಯಣ ಮುನೀಂ ವಂದೇ ಗುರೂನ್ಮಮ** ॥೧॥
(ಶ್ರೀವ್ಯಾಸರಾಜಕೃತ)

ಯದ್ವೃಂದಾವನ ಸೇವಯಾ ಸುವಿಮಲಾಂ ವಿದ್ಯಾಂ ಪಶೂನ್ ಸಂತತಿಂ ।
ಧ್ಯಾನಾಜ್ಞಾನಮನಲ್ಪಕೀರ್ತಿನಿವಹಂ ಪ್ರಾಪ್ನೋತಿ ಸೌಖ್ಯಂ ಜನಃ ॥
ತಂ ವಂದೇ ನರಸಿಂಹತೀರ್ಥನಿಲಯಂ ಶ್ರೀವ್ಯಾಸರಾಟ್ಪೂಜಿತಂ ।
ಧ್ಯಾಯಂತಂ ಮನಸಾ ನೃಸಿಂಹಚರಣಂ ಶ್ರೀಪಾದರಾಜಂ ಗುರುಮ್ ॥೨॥
(ಶ್ರೀವ್ಯಾಸರಾಜಕೃತ ಶ್ರೀಪಾದರಾಜಪಂಚರತ್ನಮಾಲಿಕಾ)

ದ್ವೈಪಾಯನೋತ್ತಮಕರೋಪಗತಾಂ ಪವನರೂಪಾಮಿತೇಕ್ಷಮಹಿತಾಮ್।
ಗೋಪಾಂಗನೇಶತನುಮಾಪಾತಮರ್ಚಯಿತುಮಾಪಾದ್ಯಯೋಹಿ
ಯತಿತಾಮ್ ॥
ಸ್ವಾಪಾಸ್ತಭೂಪಕೃತ ಶಾಪಾಸಿಘಾತನಿಜತಾಪಾರ ಪಾಪನಿಚಯಮ್ ।
**ಶ್ರೀಪಾದರಾಜವರ ಶಾಪಾಯುಧಂ ಭಜತ ಸೂಪಾನ್ನಲೋಲುಪಧಿಯಃ**॥೩॥
(ಶ್ರೀವಾದಿರಾಜಕೃತ ಶ್ರೀಪಾದಸ್ತೋತ್ರಂ)

ಶ್ರೀಮದ್ವೀರನೃಸಿಂಹನಾಮನೃಪತೇರ್ಭರ್ೂದೇವ ಹತ್ಯಾವ್ಯಥಾಮ್ ।
ದೂರೀಕೃತ್ಯ ತದರ್ಪಿತೋಜ್ಜ್ವಲಮಹಾಸಿಂಹಾಸನೇ ಸಂಸ್ಥಿತಃ ॥
ಶ್ರೀಮತ್ಪೂರ್ವಕವಾಟನಾಮಕಪುರೇ ಸರ್ವೇಷ್ಟಸಿದ್ಧಿಪ್ರದಃ ।
ಶ್ರೀ ಶ್ರೀಪಾದಯತೀಂದ್ರ ಶೇಖರಮಣೀ ಭೂಯಾತ್ಸನಃ ಶ್ರೇಯಸೇ ॥೪॥

(ಶ್ರೀವಿಜಯೀಂದ್ರವಿರಚಿತ ಶ್ರೀ ಶ್ರೀ ಪಾದರಾಜಾಷ್ಟಕಂ)

ಶ್ರೀಪೂರ್ಣಬೋಧಕುಲವಾರ್ಧಿ ಸುಧಾಕರಾಯ ।
ಶ್ರೀವ್ಯಾಸರಾಜಗುರವೇರ್ಯತಿಶೇಖರಾಯ ॥
ಶ್ರೀರಂಗವಿಠ್ಠಲಪದಾಂಬುಜ ಬಂಭರಾಯ ।
ಶ್ರೀ ಪಾದರಾಜಗುರವೇಽಸ್ತು ನಮಶ್ಶುಭಾಯ ॥೫॥

(ಶ್ರೀ ಶ್ರೀನಿಧಿತೀರ್ಥಕೃತ ನವಪದ್ಯಸುರತ್ನಮಾಲಾ)

॥ ಶ್ರೀಗೋಪೀನಾಥಾಭಿನ್ನ ಶ್ರೀರಂಗವಿಠ್ಠಲಾಯನಮಃ ॥



## ಶ್ರೀಪಾದರಾಜಗುರುಸಾರ್ವಭೌಮರ ಪರವಾದ ಕೀರ್ತನೆಗಳ ಸಂಗ್ರಹ

೧೩೮

(ಅಂಕಿತ–ಸಿರಿಕೃಷ್ಣ–ಶ್ರೀವ್ಯಾಸರಾಜ ವಿರಚಿತ)

ರಾಗ–ತೋಡಿ ಆದಿತಾಳ

ಮಹಿಮೆ ಸಾಲದೇ–ಇಷ್ಟೇ ಮಹಿಮೆ ಸಾಲದೆ ॥ಪ॥

ಅಹಿಶಯನನ ಒಲುಮೆಯಿಂದ
ಮಹಿಯೊಳೆಮ್ಮ ಶ್ರೀಪಾದರಾಜರ ॥ಅ॥

ಮುತ್ತಿನಕವಚ ಮೇಲ್ಕುಲಾವಿ ನವ
ರತ್ನ ಕೆತ್ತಿದ ಕರ್ಣಕುಂಡಲ
ಕಸ್ತುರಿತಿಲಕ ಶ್ರೀಗಂಧಲೇಪನ
ವಿಸ್ತಾರದಿಂದ ಮೆರೆದು ಬರುವ ||೧||

ವಿಪ್ರಹತ್ಯ ದೋಷ ಬರಲು
ಕ್ಷಿಪ್ರ ಶಂಖೋದಕದಿ ಕಳೆಯೆ
ಅಪ್ರಬುದ್ಧರು ದೂಷಿಸೆ ಗೇರೆಣ್ಣೆ
ಕಪ್ಪುವಸನ ಹಸನ ಮಾಡಿದ ||೨||

ಹರಿಗೆ ಸಮರ್ಪಿಸಿದ ನಾನಾ
ಪರಿಯ ಶಾಖಂಗಳನು ಭುಂಜಿಸೆ
ನರರು ನಗಲು ಶ್ರೀಕೃಷ್ಣನ
ಕರುಣದಿಂದ ಹಸಿಯ ಮಾಡಿದ ||೩||



## ೧೩೯

(ಅಂಕಿತ-ಸಿರಿಕೃಷ್ಣ)

ರಾಗ-ನಾಟಿ ಧ್ರುವತಾಳ

ವಾದಿಗಜಮಸ್ತಕಾಂಕುಶ ಸುಜನಬುಧಗೇಯ
ಮೇದಿನೀಸುರವಂದ್ಯ ಶ್ರೀಪಾದರಾಯ ||ಪ||

ಸಕಲಶಾಸ್ತ್ರ ಕಲಾಪ ಸನ್ಯಾಸಕುಲದೀಪ
ಸಕಲ ಸತ್ಯಸ್ಥಾಪ ಸುಜ್ಞಾನದೀಪ

ಪ್ರಕಟಪಾವನರೂಪ ಅರಿಕುಜನಮತಲೋಪ
ನಿಕಟವರ್ಜಿತಪಾಪ ಕೀರ್ತಿಪ್ರತಾಪ ॥೧॥

ಹರಿಪದಾಂಬುಜಭೃಂಗ ಪರಮತಾಹಿವಿಹಂಗ
ಪರಮಸುಗುಣಾಂತರಂಗ ಭವದುರಿತಭಂಗ
ಶರಣಕೀರ್ತಿತರಂಗ ಶತ್ರುತಿಮಿರಪತಂಗ
ಶರಣುಶುಭಚರಿತಾಂಗ ಷಟ್ಶಾಸ್ತ್ರಸಂಗ ॥೨॥

ಸಿರಿಕೃಷ್ಣ ದಿವ್ಯಪಾದಾಬ್ಜ ಚಿಂತಾಲೋಲ
ವರಹೇಮವರ್ಣಮುನಿಪತಿಯ ಸುಕುಮಾರ
ಗುರುತಿಲಕ ಶ್ರೀಪಾದರಾಯ ಅಮಿತೋದ್ಧಾರ
ಶರಣಜನಸುರಧೇನು ಭಕ್ತಮಂದಾರ ॥೩॥



## ೧೪೦

### (ಅಂಕಿತ–ಹಯವದನ–ಶ್ರೀವಾದಿರಾಜಯತಿ ಕೃತ)

**ರಾಗ-ಕಲ್ಯಾಣಿ** **ಆದಿತಾಳ**

ಶ್ರೀಪಾದರಾಯರ ದಿವ್ಯ ಶ್ರೀಪಾದವ ಭಜಿಸುವೆ ॥ಪ॥

ವಾಗ್ವಜ್ರಗಳಿಂದ ಮಾಯಾವಾದಿಗಳೆಲ್ಲರ ಬಾಯ
ಬೀಗವನಿಕ್ಕಿ ಮುದ್ರಿಸಿದ ಬಿಂಕಗಳ ಬಿಡಿಸುವ ॥೧॥

ವ್ಯಾಸರಾಯರಿಗೆ ವಿದ್ಯಾಭ್ಯಾಸವ ಮಾಡಿಸುವ
ದಾಸರ ನಾಮಗಳಿಂದ ಲೇಸುಲೇಸೆಂದೆನಿಸಿಕೊಂಬ ॥೨॥

ಮಧ್ವಮತದಲ್ಲಿ ಪುಟ್ಟಿ ಮಾಯಾವಾದಿಗಳ ಕುಟ್ಟಿ
ಗೆದ್ದು ಮೆರೆದನು ದಿಟ್ಟ ಗುರುರಾಯ ಜಗಜಟ್ಟಿ ॥೩॥

ಸುವರ್ಣವರ್ಣತೀರ್ಥರ ಸುತ ಶ್ರೀಪಾದರಾಯರ
ಅವರ ನಾಮಗಳಿಂದ ಕಾವನಯ್ಯ ಕರುಣಾನಿಧಿ ॥೪॥

ವರದ ವೆಂಕಟೇಶನ್ನ ಒಲಿದು ಪೂಜಿಸುವನ
ಕರುಣದಿಂದ ಹಯವದನ ಸಲಹೋ ಯತಿರನ್ನನ ॥೫॥



## ೧೪೧

### (ವಿಜಯವಿಠ್ಠಲಾಂಕಿತ)

### ಸುಳಾದಿ

॥ಧ್ರುವತಾಳ॥

ಶ್ರೀಪಾದರಾಯಗುರುವೆ ದೃಢಭಕುತಿಯಿಂದ ನಿಮ್ಮ
ಶ್ರೀಪಾದಪದುಮವನ್ನು ನೆರೆನಂಬಿದವರ ಭಾಗ್ಯ
ಅಪಾರವಲ್ಲದೆ ಲೇಶ ಕೊರತೆ ಇಲ್ಲ
ಗೋಪಾದ ಉದಕದೊಳು ರತುನ ದೊರಕಿದಂತೆ
ಪ್ರಾಪುತವಾಗುವದು ಬಹಿರಂತರ ಸೌಖ್ಯ
ಲೋಪವಾಗದು ಒಂದು ಇಷ್ಟಾರ್ಥ ಪ್ರತಿದಿನ
ಅಪರ್ಥವೆನಿಸದು ಪೇಳಿದ ವಚನಂಗಳು
ಅಪವರ್ಗಕೆ ಮಾರ್ಗ ಕೇವಲ ಖ್ಯಾತಿಯಾಗಿ
ತಾಪಸಿಯಾಗುವನು ಜನುಮ ಜನುಮದಲಿ ಬಿಡದೆ
ಗೋಪಾಲಕೃಷ್ಣನ ಗುಣವೆ ಕೊಂಡಾಡುತ
ಆಪಾದಮೌಳಿಪರ್ಯಂತ ನೋಡುವ ಮಹಾ

ಪಾಪರಹಿತರಾಗಿ ಸಂಚರಿಸುವರು ನಿತ್ಯ
ಪ್ರಾಪುತವಲ್ಲದೆ ಬಂದಾದವರಿಗೆ
ಭೂಪಾರ ಬೇಡಿದ ಮನೋರಥಂಗಳು
ಶ್ರೀಪಾದರಾಯ ಶಿರಿನಾರಾಯಣಯೋಗಿ
ಶ್ರೀಪಾದಸ್ಮರಿಸಿದ ಜನರ ಸಂಗದಲ್ಲಿದ್ದ
ಆ ಪುಣ್ಯಪುರುಷರಿಗೆ ಕೈವಲ್ಯ ಇದ್ದಲ್ಲಿಗೆ
ಪೋಪಾದಲ್ಲದೆ ಅವನ ಆಯುಷ್ಯ ವ್ಯರ್ಥವಾಗಿ
ಭಾಪು ಇವರ ಬಿರುದು ಪೊತ್ತು ತಿರುಗಿದರೆ
ಶಾಪಾದಪಿ ಶರಾದಪಿ ಎನಿಸಿಕೊಂಬ
ದೀಪದ ಬೆಳಕಿನಲ್ಲಿ ಸರ್ವವು ಕಂಡಂತೆ
ವ್ಯಾಪುತದರ್ಶಿಯಾಗಿ ಯೋಗ್ಯತದಂತೆ ಕಾಂಬ
ದ್ವಿಪಾದಪಶುಗಾಣೋ ಈ ಮುನಿಯ ನಂಬದವ
ಕೂಪಾರವೆಂಬ ಮಹಘೋರದೊಳಗೆ ಇಪ್ಪ
ಆಪತ್ಕಾಲಮಿತ್ರ ವಿಜಯವಿಠ್ಠಲರೇಯನ
ವ್ಯಾಪಾರವನ್ನೆ ನೆನೆದು ನಲಿನಲಿದಾಡುವ ||೧||

||ಮಠ್ಯತಾಳ||

ಭಕುತಿಬೇಕಾದವರು ಇವರ ಪಾದದಲ್ಲಿ
ಸಕಲಕಾಲಕೆ ಇದು ಸಾಧ್ಯನಮಗೆಂದು
ಯುಕುತರಾಗಬೇಕು ರಾಗಂಗಳ ತೊರೆದು
ಮುಕುತಿ ಮಾರ್ಗಕೆ ಇನ್ನು ಯಾತಕೆ ಅನುಮಾನ
ಕಕುಲಾತಿಯಿಂದ ಕಂಡಲ್ಲಿ ತಿರುಗಿ
ಹಕ್ಕಲಮನದಿಂದ ಕೆಟ್ಟು ಹೋಗದಿರಿ
ಲಕುಮಿರಮಣ ನಮ್ಮ ವಿಜಯವಿಠ್ಠಲರೇಯನ
ಭಕುತರೊಳಗೆ ಮಹಮಹಿಮ ಎನಿಸಿಕೊಂಬ ||೨||

||ತ್ರಿಪುಟತಾಳ||

ನಂಬಿರೋ ಶ್ರೀಪಾದರಾಯರ ಚರಣವ
ಹಂಬಲಿಸದಿರಿ ಅನ್ಯಮಾರ್ಗ
ತುಂಬಿತುಳುಕುವುದು ಇಹಪರದ ಭಾಗ್ಯ
ಉಂಬುವದುಣುವುದು ಅಡಿಗಡಿಗೆ
ಡಿಂಬದೊಳಗೆ ಹರಿಧ್ಯಾನಗತನಾಗಿ
ಕಾಂಬುವ ಲೇಶ ಪಾಪಂಗಳಿಲ್ಲದೆ
ಗಂಭೀರ ಸಂಸಾರವಾದರೂ ಅದೆ ಅವಗೆ
ಇಂಬುಕೊಡುವುದು ವೈದಿಕವೆನಿಸಿ
ಅಂಬುಜಸಖತೇಜ ವಿಜಯವಿಠ್ಠಲನ
ಹಂಬಲಿಸಿ ಭಜಿಸಬೇಕು ಈ ಪರಿಯಲ್ಲಿ ||೩||

||ಅಟ್ಟತಾಳ||

ಇವರ ಪ್ರಸಾದವಾದರೆ ವ್ಯಾಸಮುನಿರಾಯಾ
ಕವಿರಾಯ ಪುರಂದರದಾಸರು ಮೊದಲಾ
ದವರ ಕರುಣವಿನ್ನೂ ಸಿದ್ಧಿಸುವುದು ಕೇಳಿ
ನವಭಕುತಿ ಪುಟ್ಟುವುದು ವ್ಯಕ್ತವಾಗಿ
ತವಕದಿಂದಲಿ ಚರಮದೇಹವೆ ಬರುವುದು
ದಿವಿಜರು ಒಲಿದು ಸತ್ಕರ್ಮ ಮಾಡಿಸುವರು
ಸುವಿರುದ್ಧವಾದ ಜನರೆಲ್ಲ ನೆರೆದು ಭಾ-
ಗ್ಯವನು ಬರಲಿ ಎಂದು ಕೊಂಡಾಡುವರು ನಿತ್ಯ
ಕವಿನುತ ನಮ್ಮ ವಿಜಯವಿಠ್ಠಲರೇಯನ
ದಿವಾರಾತ್ರಿಗಳಲಿ ನೋಡಿ ಸುಜನರ ಕೂಡುವಾ ||೪||

||ಆದಿತಾಳ||

ನರಕನರಕದಲ್ಲಿ ಹೊರಳುವ ಮನುಜನೆ
ಧರೆಯೊಳು ಇವರ ಚರಿತೆ ಒಂದೊಂದದ್ಭುತವಾಗಿ
ನಿರುತದಲಿನೋಡೆ ತುಂಬಿ ಸೂಸುತಲಿದೆ
ಅರುಣೋದಯದಲ್ಲೆದ್ದು ಶ್ರೀಪಾದರಾಜರ
ಸ್ಮರಿಸಿದ ಮಾನವಂಗೆ ಸರ್ವ ಸಂಪದವು
ಪರಗತಿಯಾಗುವುದು ಸಿದ್ಧ
ಪರಿಹಾಸವಲ್ಲ ಕೇಳಿ ಅನುಭವ ತಿಳಿದವಗೆ
ಸುರಭೂಸುರಪ್ರಿಯ ವಿಜಯವಿಠ್ಠಲನ
ಕರುಣದಿಂದಲಿ ಮಹಉನ್ನತಪದವೀವ ||೫||

||ಜೊತೆ||

ಧ್ರುವಮತಿಯಿಂದಿವರ ಭಜಿಸಿದ ಮನುಜಗೆ
ಭವರೋಗ ಪರಿಹಾರ ವಿಜಯವಿಠ್ಠಲನೊಲಿವಾ ||



೧೪೨

(ತಂದೆವೆಂಕಟೇಶವಿಠ್ಠಲಾಂಕಿತ)

ರಾಗ–ಉದಯರಾಗ ವಾರ್ಧಿಕಷಟ್ಪದಿ

ಶ್ರೀಪಾದರಂ ಭಜಿಸಿರೋ ||ಪ||

ಶ್ರೀಪಾದರಾಜಾಬ್ಜ ಶ್ರೀಪಾದಕಾರಡಿಗ
ಳೋಪಾದಿ ಚರಿಸುವ ಧರಾಪಾವಕಾಸ್ಮರಿಗೆ

ತಾಪತ್ರಯಾದಿ ದುಃಖಾಪನೋದನವಹುದು ಶ್ರೀಪತಿಯು
ಕೈಪಿಡಿವನು ‖೮‖

ಅಬ್ಬೂರ ಶೇಷಗಿರಿಯಾಚಾರ್ಯನೆಂಬೋರ್ವ
ಸುಬ್ರಾಹ್ಮಣೋತ್ತಮನ ಜಾಯೆ ಗಿರಿನಾಮಕಳ
ಗರ್ಭಾಮೃತಾಬ್ಧಿಯಲಿ ವಿಧುಬಿಂಬದಂತೆ ಪ್ರಾದುರ್ಭವಿಸಿ
ಮುದವೀಯುತಾ ‖
ನಿರ್ಭರದಿ ಚೌಷಷ್ಟಿಕಲೆಗಳಿಂ ಶೋಭಿಸುತ
ಕರ್ಬುರಾಭಿಧಮುನಿಕರಾಬ್ಜೋತ್ಥನೆಂದೆನಿಸಿ
ಉರ್ಬಿಯೊಳು ಸೌಖ್ಯಪ್ರಾರಬ್ಧ ಭೋಗಿಸುವ
ಗುರುದುಗ್ಧಾಬ್ಧಿ ಜೇಶಯೋಗೀ ‖೧‖

ಶ್ರೀಮದಾಚಾರ್ಯರ ಕರಕಮಲಸಂಜಾತರಹ
ತಾಮರಸನಾಭಾರ್ಯರಾಮಹಾಪೀಠಿಗೆಯು
ಸೋಮುಪಸಮೂಹಾಭ್ರ ಸಾಮಜಾರೂಢ ನಿಸ್ಸೀಮ
ಮಹಿಮಾವೇಷ್ಟಿತ ‖
ಆ ಮಹಾಮಿಥ್ಯಾದ್ರಿಸ್ತೋಮ ಪಾಟನ ಪರೋ
ದ್ದಾಮ ವಾಗ್ವಜ್ರಕೃತ ಧೀಮತಾಂವರ ಸಾರ್ವ
ಭೌಮ ಸಾಳ್ವನೃಸಿಂಹನಾಮಯುವ ಹರಿಸಿ
ಸಿಂಹಾಸನವೇರಿಮೆರೆದಾ ‖೨‖

ಗಂಗೆಯನು ಸಾಕ್ಷಾನ್ನೃಸಿಂಗತೀರ್ಥಕೆ ಕರೆಸಿ
ರಂಗವಿಠಲನ ಭೀಮರಥಿಯಿಂದ ಹೊರದೆಗೆಸಿ
ಸಾಂಗಲೊದಗಿದ ಭುಜಗನೊಡನುಡಿಸಿ ನೃಪಗರಣ್ಯಾಂಗಣದಿ
ಸೌಖ್ಯಪಡಿಸಿ ‖
ಹಿಂಗದಲೆ ನಿತ್ಯ ಚೌಷಷ್ಟಿಶಾಖವ ನಡೆಸಿ
ಸಂದೀತ ಕಾವ್ಯಕವಿಪುಂಗವೋತ್ತಮನೆನಿಸಿ
ಭಂಗಪಡುತಿಹರ ಪಾಪಂಗಳನು ಪರಿಹರಿಸಿ ಮಂಗಳಾತ್ಮಕನೆನಿಸಿದಾ ‖೩‖

ವ್ಯಾಸಮುನಿಪಗೆ ಶಾಸ್ತ್ರಾಭ್ಯಾಸಮಾಡಿಸಿ ಮಾತೃ
ಭಾಷೆಯಲಿ ಪರಮಾರ್ಥಗೋಸಂತತಿಯನೂತ
ನಾಶುಕವಿತೆಯೊಳುಭಯಭಾಷಾಪ್ರವೀಣನೆಂದಾಶಾಂತಕೀರ್ತಿ
ಪಡೆದೂ ॥

ಭಾಸುರಸುಕರ್ನಾಟದಾಸದೀಕ್ಷಾಪಗತ
ಮಾತ್ಸರ್ಯ ಬುಧರಿಗುಪದೇಶಿಸಿ ಮಧ್ವಾಗಮವ
ದೇಶದೇಶದಿ ಹಬ್ಬಿ ಹಸುರಾಗಿ ಫಲಿಸೆ ಸ್ವತ ಏವ ಮಾರ್ಗವ
ತೋರಿದಾ ॥೪॥

ಶ್ರೀಪಾದರಾಜ ನಮೋ ಪಾಪಾಪಹಾರ ನಮೋ
ತಾಪಸೋತ್ತಂಸ ನಮೋ ವ್ಯಾಪಿತ ಸುಕೀರ್ತಿ ನಮೋ
ಸ್ವಾಪರೋಕ್ಷಾನುಗತಗೋಪಾಲಕೃಷ್ಣಾಂಘ್ರಿಸ್ಥಾಪಿತ ಸುಚೇತನಮಃ ॥
ಭೂಪಾಲವಂದ್ಯ ನಮೋ ಕೋಪಾದಿರಹಿತ ನಮೋ
ರೂಪಾತಿರೇಕ ನಮೋ ಪ್ರಾಪ್ತಸುಖನಿವಹ ನಮೋ
ಆ ಪ್ರಪಿತ್ತುಂಗಮತಸ್ಥಾಪನಾಚಾರ್ಯ ದುರ್ಮಿಥ್ಯಾಪಮೃತ್ಯೋಪಮ ॥೫॥

ನಿರುತ ಕರುಣಾಮೂರ್ತಿ ಹರಿದಾಸಕುಲವೃಷಭ
ಸರಸ ಸಜ್ಜನವಂದ್ಯ ನಿರ್ಧೂತದುರಿತಕುಲ
ಪರಮಹಂಸ ಪರಾರ್ಥನಿವಿಷ್ಟ ಸುಚಿತ್ತ ಪರಿತ್ಯಕ್ತದುರ್ಮೋಹ
ಧ್ರುವನಂಶವೂ ॥

ಮರುತಮತಕ್ಷೀರಾಬ್ಧಿ ಶರಸುಧಾಕರಮೂರ್ತಿ
ವರಜ್ಞಾನ ವೈರಾಗ್ಯನಿರುಪಮಿತಭಕ್ತಿಯುತ
ಹರಿಪುರವಸೇರ್ದನು ಪರಾಭವ ಚತುರ್ದಶಿಯ
ಜ್ಯೇಷ್ಠೇಂದುಪಕ್ಷದಲ್ಲಿ ॥೬॥

ಶ್ರೀಪಾದರಾಜರ ದಯಾಪ್ರಸಾದವೆ ಮುಕ್ತಿ
ಸೋಪಾನವೆನಿಸಿ ಭವತಾಪಗಳೆವುದು ಗುರು

ಶ್ರೀಪ್ರಮೋದರ ಮತದಿ ವ್ಯಾಪಿಸಿದ ಭಕ್ತಿಯಿಂದಪವರ್ಗ ಕೈಸಾರ್ವುದು
ಶ್ರೀಪಾದರಾಜಸ್ತವಸಪ್ತರತ್ನಾಖ್ಯ ಸ
ನ್ನೂಪುರವ ಸಿರಿ ತಂದೆವೆಂಕಟೇಶವಿಠ್ಠಲ ಪ
ರಾಪರೇಶನ ಪಾದಕರ್ಪಿಸಿದೆ ಪಠಿಸಿ ಪರಿತೋಷಪಡಲೆಂದು ಬುಧರು ||೭||



## ೧೪೩

(ಶ್ಯಾಮಸುಂದರಾಂಕಿತ)

ಶ್ರೀಪಾದರಾಜಗುರುವೆ ॥ ನತ ಸುರತರುವೆ ||ಪ||

ಶ್ರೀಪಾದರಾಜ ನಿನ್ನ ನಾ । ಪೊಂದಿದೆನು ತ್ರಯ
ತಾಪಗಳೋಡಿಸಿ । ನೀ ಪಾಲಿಸನುದಿನದಿ ||ಅ||

ಪಂಡಿತಾಗ್ರಣಿ ಕರ್ಣ । ಕುಂಡಲ ಮುಕುಟಾಭರಣ
ಮಂಡಿತನಾಗಿ ಮಾ । ರ್ತಾಂಡನಂತೆ ಪೊಳೆವ ||೧||

ಪವನದೇವನ ಶಾಸ್ತ್ರ । ಸುವಿಚಾರಭರಿತ ವಾಕ್
ಕವಿಯಾಖ್ಯ ಗ್ರಂಥಕೃತಿ । ಕವಿಕುಲೋತ್ತಂಸ ||೨||

ಮೃಷ್ಟಾನ್ನ ನಾನಾವಿಧ । ಷಷ್ಟಿಶಾಖಂಗಳ
ನಿಷ್ಠೆಲಿ ಸದಾ ರಂಗ । ವಿಠ್ಠಲಗರ್ಪಿಸಿದ ||೩||

ಇಳೆಯಸುರಗೆ ಹತ್ಯ । ಸಲೆ ಕರುಣದಿ ಶಂಖ
ಜಲವ ಪ್ರೋಕ್ಷಿಸಿ ಕಳೆದು । ಸಲಹಿದ ಸನ್ಮಹಿಮ ||೪||

ತಂದೆ ಜರಿಯೆ ವನದಿ । ನಿಂದು ಭಜಿಸಿ ಶ್ಯಾಮ
ಸುಂದರನೊಲಿಸಿ ಸ್ಥಿರಾ । ನಂದ ಪಡೆದಾ ॥೫॥



೧೪೪

(ಅಂಕಿತ–ಕಾರ್ಪರನರಹರಿ)

ರಾಗ–ಪಂತುವರಾಳಿ ಆದಿತಾಳ

(ಗುರುವ್ಯಾಸರಾಯಪಾಲಿಸೋ-ಎಂಬಂತೆ)

ಶ್ರೀಪಾದರಾಜ ಪಾಲಿಸೋ–ಕೈಪಿಡಿದೀಭವದ
ಕೂಪಾರದಿಂದ ದಾಟಿಸೋ ॥ಪ॥

ಕಾಪಾಡೆಲೊ ಕರುಣಾಪಯೋನಿಧೆ । ಭೂಪಚಂದ್ರಗಿರಿ
ಪಾಪಗಳನು ಕಳೆದಿರುವೆ–ಮದ್ಗುರುವೇ–ಕರಮುಗಿವೇ
ಭಜಕರಸುರತರುವೇ ॥ಅ.ಪ॥

ಮೇದಿನಿಪಾಲಪೂಜಿತ । ವಿದ್ವಜ್ಜನವಿನುತ
ಮೇದಿನಿಜಾತ ಪ್ರದಾತ ॥
ಮೋದಮುನಿಯ ಸುಮತೋದಧಿಚಂದಿರ
ವಾದಿಮದಗಜ ಮೃಗಾಧಿಪ ಕವಿಜನಗೇಯ–
ಶುಭಕಾಯ-ಧ್ರುವರಾಯ–ಆಶ್ಚರ್ಯಚರ್ಯ ॥೧॥

ವಿಪ್ರಹತ್ಯಾದಿ ದೋಷಗಳನ್ನು । ಕಳೆಯುವ ಮಹಿಮೆಯನು
ಅಪ್ರಬುದ್ಧರು ದೂಷಿಸೆ ನಿಮ್ಮನು ॥

ಕ್ಷಿಪ್ರ ಕುಶೋದಕ ಸಂಪ್ರೋಕ್ಷಿಸಿ ಖಲು
ಕಪ್ಪು ವಸನವನು ಸುಪ್ರಕಾಶಿಸಿದ ಮಹಿಮಾ–
ಶುಭನಾಮಾ–ಜಿತಕಾಮಾ–ಯತಿಸಾರ್ವಭೌಮಾ ||೨||

ಕ್ಷೇತ್ರ ಕಾರ್ಪರದಲಿ ಶ್ರೀರಘುನಾಥಾ । ವಿಬುಧೇಂದ್ರ ಸಹಿತ
ಧಾತ್ರಾ ನಿಮ್ಮನು ಕೇಳಲು ಸೂತ್ರಾರ್ಥ ||
ಚಾತುರ್ಮಾಸದಿ ಕೂತಿರೆ ತವ ಸರ್ವಾತಿಶಯದಿ
ಶಬ್ದಶಾಸ್ತ್ರ ಪ್ರವಚನ ಸುಪ್ರೀತಾ–ರಘುನಾಥಾ–
ಮುಖಗೀತಾ–ನಾಮದಿ ಪ್ರಖ್ಯಾತ ||೩||

ಎಷ್ಟು ನಿಮ್ಮಂಘ್ರಿ ಸ್ಮರಣೆಯ । ಮಾಡುವರಿಗೆ ನಿತ್ಯಾ
ಮೃಷ್ಟಾನ್ನ ಕೊಡುವೋ ಮಹಿಮೆಯ ||
ಶ್ರೇಷ್ಠ ಗರ್ಜಿಸಿದ ಷಷ್ಟಿ ಶಾಖಿಯುತ ಮೃಷ್ಟಾನ್ನದಿ ದ್ವಿಜ
ತುಷ್ಟಿಗೈಸುವಿರಿ ನಿರುತ–
ಗುಣಭರಿತ–ಪ್ರಖ್ಯಾತ–ಪಾವನಚರಿತ ||೪||

ಇರುತಿಹ ನಿಮ್ಮನು ಸ್ಮರಿಸುವ ನರ ಧನ್ಯ । ಜಗದೊಳು ಸನ್ಮಾನ್ಯ
ಪರಿಹಿ ಸತ್ಕರ್ಮವ ಗಳಿಸುವ ಪುಣ್ಯ ||
ವರಜಾ ಜನಕೆ ಸುರತರುವೆಂದೆನಿಸುತ ಧರೆಯೊಳು ಮೆರೆಯುವ
ಶ್ರೀಕಾರ್ಪರ ಶುಭನಿಲಯ–ಸುರಗೇಯ–
ಗುರುರಾಯಾ–ನರಹರಿಗತಿಪ್ರಿಯಾ ||೫||



## ೧೪೫

### (ಗುರುಗೋವಿಂದವಿಠ್ಠಲಾಂಕಿತ)

ರಾಗ-ಕಾಂಬೋಧಿ [illegible]

ಕಾಪಾಡು-ಕಾಪಾಡು ಶ್ರೀಪಾದರಾಯ ||ಪ||

ಪಾಪೌಘಗಳನಳಿದು ಶ್ರೀಪತಿಯ ತೋರೀ [illegible]

ನಾಡಿನೊಳು ವೆಸರಾದ ಮೂಡಲಾದ್ರಿಗೆ ಪೋಪ
ಮೂಡಲಬಾಗಿಲ ಕಾಯ್ವ ಪ್ರಾಣನಾಶ್ರಯಿಸೀ
ಮೂಡಬಾಗಿಲ ಪುರದಿ ನರಸಿಂಹ ಕ್ಷೇತ್ರದಲಿ
ಈಡು ಇಲ್ಲದೆ ಮೆರೆವ ಯತಿಸಾರ್ವಭೌಮಾ ||೧||

ಹತ್ತಾರು ನಾಲ್ಕಾದ ಶಾಖ ಪ್ರತಿದಿನದಲ್ಲಿ
ಉತ್ತಮೋತ್ತಮನಿಗಿತ್ತು ಉಂಬ ಮಹಿಮಾ
ಕೃತ್ರಿಮಸ್ವಭಾವ ನೃಪ ಪರಿಕಿಸಲು ಪೋಗೆ ಹರಿ
ಮತ್ತೊದಗಿಸಿದ ವ್ಯಾಳ್ಯಕ್ಕೆ ಹರಿಕೃಪಾಪಾತ್ರ ||೨||

ವಿಪ್ರಬ್ರಹ್ಮಹತ್ಯವನು ಶಂಖದುದಕದಿ ಕಳೆಯೆ
ಅಪ್ರಬುದ್ಧರು ನಗಲು ಗೇರೇಣ್ಣೆ ವಸನಾ
ಕ್ಷಿಪ್ರಶುದ್ಧಿಯಗೈದೆ ಪ್ರೋಕ್ಷಿಸುತ ಶಂಖದಲಿ
ಅಪ್ರಮೇಯನ ಕರುಣ ನಿನ್ನೊಳೆಂತುಂಟೋ ||೩||

ಅಹವುರಾತ್ರಿಗಳಭಿಧ ಆದಿತ್ಯಸಂಸ್ಥಿತನು
ಅಹರ್ನಿಶೀ ನರನಾಡಿಸ್ಥಿತನಾಗಿಹಾ
ಬೃಹತಿ ನಾಮಕಗನ್ನ ಋಗ್ರಹಸ್ಯ ನರುಪಿ
ಬೃಹತಿ ಸಾಸಿರಗಳಿಪ ಸಂಧಾನವಿತ್ತು ||೪||

ವಾದಿಗಳ ಎದೆಶೂಲವಾದ ಗ್ರಂಥದಿ ಪೂರ್ಣ
ಬೋಧ ಶಿಷ್ಯರ ಹಿತವ ಕಾದು ಜಗದೀ
ವೇದವೇದ್ಯನು ಗುರುಗೋವಿಂದವಿಠ್ಠಲನ
ಪಾದದ್ವಯಧ್ಯಾನದಲಿ ಮರೆಯುತಿಹ ಗುರುವೇ ॥೫॥



|| ಶ್ರೀಃ ಹರಿಃ ಓಂ ||

# ಯತಿಪೀಳಿಗೆ

## ಭಾಗ ೬

## ಶ್ರೀಬ್ರಹ್ಮಣ್ಯತೀರ್ಥರಪರವಾದ ಕೀರ್ತನೆಗಳು

# ಶ್ರೀ ಬ್ರಹ್ಮಣ್ಯತೀರ್ಥ ಶ್ರೀಪಾದಂಗಳವರು

(ಜನನ–ಸುಮಾರು ೧೫ನೆಯ ಶತಮಾನದ ಮಧ್ಯೆ.
ನಿರ್ಯಾಣ-ಕ್ರಿ.ಶ. ೧೪೬೭)

(ವೃಂದಾವನ ಸ್ಥಳ:—ಅಬ್ಬೂರು ಗ್ರಾಮ-ಚೆನ್ನಪಟ್ಟಣದ ಸಮೀಪ.
ಆರಾಧನಾ ದಿನ :– ವೈಶಾಖ ಬಹುಳ ದ್ವಾದಶೀ)

ಧ್ಯಾನಶ್ಲೋಕ :—

ಕಂಸಧ್ವಂಸಿಪದಾಂಭೋಜಸಂಸಕ್ತೋ ಹಂಸಪುಂಗವಃ ।
ಬ್ರಹ್ಮಣ್ಯತೀರ್ಥಗುರುರಾಜಾಖ್ಯೋ ವರ್ತತೇ ಮಮಮಾನಸೇ ||



೧೪೬

(ಅಂಕಿತ–ಹನುಮನಯ್ಯ)

ರಾಗ–ಬಿಲಹರಿ ಆಟತಾಳ

ಪಾಲಿಸು ಬ್ರಹ್ಮಣ್ಯ–ಗುರುವರಾ-
ಪಾಲಿಸು ಬ್ರಹ್ಮಣ್ಯ ||ಪ||

ಬಾಲಕನಾದನ ಪೇಳುವ ಮೊರೆಯನು
ಲಾಲಿಸಬೇಕಯ್ಯಾ-ಹೇ ಜೀಯ್ಯಾ ||ಅ||

ಅಂದು ಮೃತದೇಹ ಇಂದಿರೇಶನ ದಯ
ದಿಂದುದ್ಧರಿಸಿದ ಮಂದಹಾಸದಿ ತವ

ಕಂದನೆಂದು ಎನ್ನ ಕುಂದುಗಳೆಣಿಸದೆ
ಚೆಂದದಿ ಕಾಪಾಡೋ-ದಯಮಾಡೋ ||೧||

ಪುರುಷೋತ್ತಮತೀರ್ಥ ಕರಸಂಜಾತನೆ
ಪುರುಷಯೋಜನ ಜನ ಹರಿಪಾದಭೃಂಗನೆ
ಹರುಷದಿ ಬಾಲಗೆ ಗುರುಪದವಿಯನಿತ್ತೆ
ಸಿರಿಪಾದರ ಅಗ್ರಜಾ–ಗುರುರಾಜಾ ||೨||

ಅನುದಿನ ಸ್ಮರಿಪೆನೋ ಅನಘ ನಿನ್ನಯಪಾದ
ಘನಮಹಿಮೆಗಳೆಲ್ಲ ಮನದಲಿ ನಿಲ್ಲಿಸೋ
ಘನಮಹಿಮನೆ ಎನ್ನ ಬಿನ್ನಪ ಲಾಲಿಸೋ
ಹನುಮನಯ್ಯನ ದಾಸಾ–ಯತೀಶಾ ||೩||

*

## ೧೪೭

(ನರಸಿಂಹವಿಠ್ಠಲಾಂಕಿತ)

ರಾಗ–ನವರೋಜು ಆದಿತಾಳ

ನಿನ್ನ ನಂಬಿದೆನೋ ಬ್ರಹ್ಮಣ್ಯತೀರ್ಥಾರ್ಯಾ
ಸನ್ನುತಚರಣಪಾವನ ಸುಚರ್ಯಾ ||ಪ||

ಘನ್ನಭವದ ಭಯವನ್ನು ಕಳೆದು ಯತಿ
ರನ್ನ ಎನ್ನನು ಧನ್ಯನಮಾಡೋ ||ಅ||

ಪುರುಷೋತ್ತಮ ಸುತೀರ್ಥರ ಪ್ರಿಯ ಸುಕುಮಾರ
ದುರಿತೌಘಜೀಮೂತ ಚಂಡಸಮೀರ

ಸುರಚಿರ ತುಳಸಿ ಪಂಕಜಮಣಿಹಾರ
ಧರಿಸಿ ಮೆರೆವೋ ದಿನಕರನವತಾರ ||
ಕರುಣದಿ ತವ ಶ್ರೀಕರಚರಣಾಂಬುಜ
ದರುಶನವನು ಕೊಡು ಗುಣಗಣನಿಧಿಯೇ ||೧||

ಸೇವಕಜನರಿಗೆ ದೇವತರುವೆನಿಪ
ಶ್ರೀವಿಠ್ಠಲನಪಾದತಾವರೆ ಮಧುಪ
ಕೋವಿದಜನರು ಸಂಭಾವಿಸಿ ಸ್ತುತಿಪ
ಪಾವನ್ನ ಪಾದಾರ್ಚಿತ ಭಾವಜಮುನಿಪ ||
ಪಾವನ ಸುಮತಸ ಜೀವರ ಚಂದ್ರನೆ
ಪಾವನಮತಿ ಕೊಡು ನೀ ಒಲಿದೆನಗೆ ||೨||

ಹರಿಭಕ್ತಿವೈರಾಗ್ಯ ಪರ ತತ್ವಜ್ಞಾನ
ವರವ ಪಾಲಿಸು ಸರ್ವವಿದ್ಯಾಪ್ರವೀಣ
ನರಸಿಂಹವಿಠ್ಠಲ ಶ್ರೀಹರಿಸನ್ನಿಧಾನ
ಕರುಣಾಪಾತ್ರನೆ ದಿವ್ಯವರಪೂರ್ಣಜ್ಞಾನ ||
ಹರಿಗುರುಭಜನ ತ್ವತ್ಪದ ವ್ಯಾಸಾರ್ಯರ
ಗುರುವೆಂದೆನಿಸಿದೆ-ಧರೆಯೊಳು ಮೆರೆದೆ ||೩||



## ೧೪೮

(ನರಸಿಂಹವಿಠ್ಠಲಾಂಕಿತ)

**ರಾಗ–ಮೋಹನ** **ಅಟತಾಳ**

ಬ್ರಹ್ಮಣ್ಯತೀರ್ಥರ ಚರಣಾಬ್ಜಯುಗ್ಮವ
ಸಂಭ್ರಮದಲಿ ಸೇವಿಪೆ ||ಪ||

ಅಂಬುಜಬಂಧು ಸನ್ನಿಭಸಾಧುವೆನುತ ಶ್ರೀ
ಕುಂಬಿಣಿ ಮುನಿವರ್ಯರಾ–ಆರ್ಯರಾ ||೮||

ತಿದ್ದಿದ ಶ್ರೀಪುಂಡ್ರ ಮುದ್ರೆಗಳಿಂದಲಿ ಸಂ-
ಶುದ್ಧಿ ಮಂಗಳಗಾತ್ರರ ।
ರುದ್ರಗಳೊಲಿದು ಸದ್ವಿದ್ಯೆಗಳನಿತ್ತು
ಉದ್ಧಾರಮಾಡಲೆಂದೂ–ನಾ ಬಂದೂ ||೧||

ಶಿಷ್ಯರುಗಳು ತಂದ ಭಿಕ್ಷಾನ್ನಂಗಳನಂದು
ಆಕ್ಷಣ ಮಂತ್ರದಿಂದ ।
ತಕ್ಷಣ ಕಲ್ಪಿಸಿದಂತೆ ಗೈದಾ ಧೀರ
ರಕ್ಷಸೆಂದೆರಗುವೆ-ನಾ ಬೇಡುವೆ ||೨||

ಕಾಂತೆಯೋರ್ವಳು ತನ್ನ ಕಾಂತ ಸ್ವರ್ಗವನೈದೆ
ಚಿಂತಿಸುತತಿಶೋಕದಿ ||
ಕಾಂತೆ ವಂದಿಸಲು ಸೌಮಾಂಗಲ್ಯವರವನಿತ್ತು
ಕಾಂತನ ರಕ್ಷಿಸಿದ-ಕೋವಿದರಾದ ||೩||

ಕುಂದದೆ ಸನ್ಮುನಿವೃಂದದೊಡನೆ ಬಹು
ವೃಂದಾವನದಿ ಶೋಭಿಪ ।
ಇಂದಿರೆಯರಸನ **ನರಸಿಂಹವಿಠ್ಠಲನ**
ಸನ್ನಿಧಿವರಪಾತ್ರರಾ–ಪೂತಾತ್ಮರಾ ||೪||



(**ಸೂಚನೆ**—ಮೇಲಿನ ಕೀರ್ತನೆಯನ್ನು ಹಳೇವಹಿಗಳಿಂದ ಸಂಗ್ರಹಿಸಲಾಗಿದೆ. ಕೆಲವು ಪದಪ್ರಯೋಗಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ನಾಲ್ಕು ನುಡಿಗಳು ಮಾತ್ರ ದೊರೆತಿವೆ. ಕನಿಷ್ಠಪಕ್ಷ ಐದು ನುಡಿಗಳಾದರೂ ಇರಬೇಕೆಂದು ತೋರುತ್ತದೆ. **ಶ್ರೀ ನರಸಿಂಹವಿಠ್ಠಲಾಂಕಿತ** ದಾಸವರ್ಯರ ವಂಶೀಕರಲ್ಲಿ ಮೂಲಕೀರ್ತನೆ ಇದ್ದರೆ, ತಿಳಿಸಬೇಕಾಗಿ ವಿನಂತಿ)

## ೧೪೯

## (ತಂದೆವೆಂಕಟೇಶವಿಠ್ಠಲಾಂಕಿತ)

ರಾಗ–ಖರಹರಪ್ರಿಯ ಆದಿತಾಳ

ಧನ್ಯ ವಿದ್ವಜ್ಜನಶರಣ್ಯ । ಶ್ರೀಬ್ರ । ಹ್ಮಣ್ಯಾಭಿಧಾ । ಗುರುವರೇಣ್ಯಾ ॥ಪ॥

ಕಣ್ವತಟಿನೀಜ್ಞಾನಮಂಟಪ । ಸನ್ನಿಧಾತೃಬ್ರಹ್ಮಣ್ಯವಿಠಲಾ
ಭಿನ್ನ ನೃಹರಿ ಕಾರುಣ್ಯಪಾತ್ರಾ । ಪನ್ನಪಾಲನರತ ಮಹಾತ್ಮಾ ॥ಅ॥

ಪೂಗಾರಾಮಾನ್ವಯ ದೀಪ । ಜತು । ರಾಗಮವಿದ್ವತ್ಪ್ರತಾಪ ।
ಭಾಗವತಾಧರ್ಮ । ದಾಗರ ಸೌಮ್ಯೋಪ
ಭೋಗ ವಿಷಯದಿ ವೈ । ರಾಗ್ಯಶೀಲನೆ ಮಧ್ವ ॥
ಶ್ರೀಗುರು ಸ್ವರ್ಗಾಪವರ್ಗ ಪ್ರ । ದಾಗಮಾರ್ಥ ಪ್ರದೀಪ್ತದರ್ಶನ
ಯೋಗಸಾಗರ ಮದ್ಗುರಾದ್ವೈತ । ತಾಗಮೋ । ಘತುಷಾರಮಿಹಿರ ॥೧॥

ಜ್ಞಾನ ಸದ್ಭಕ್ತಿ ಪ್ರದಾನಾ । ಶೀಲ । ಆನಮಿಸುವೆ ವಿವಸ್ವಾನ ।
ದಾನವಾಂತಕನಂಘ್ರಿ । ಧ್ಯಾನಾನುಸಂಧಾನ
ಮಾನಸಾಂತರದಿ ನಿ । ರ್ಮಾಣ ಮಾಡುತಲೆನ್ನ ॥
ಜ್ಞಾನ ಕರ್ಮೇಂದ್ರಿಯಗಳಿಂದೇ । ನೇನು ನಡೆಯುವುದೆಲ್ಲ ಶ್ರೀಹರಿ
ತಾನೆ ಮಾಡುವನೆಂಬ ಈ ಸು । ಜ್ಞಾನ ಕರುಣಿಸೊ ಗ್ಲಾನಿ ಹರಿಸೋ ॥೨॥

ಪ್ರತ್ಯರ್ಥಿಪಾಟನಚತುರಾ । ಪುರು । ಷೋತ್ತಮತೀರ್ಥಾಯ ಕುವರಾ ।
ಅರ್ಥಿಕಲ್ಪಿತಕಲ್ಪ । ಪೃಥ್ವೀಜರಹ ವ್ಯಾಸ
ತೀರ್ಥಗೆ ಮಠರಾಜ್ಯ । ವಿತ್ತು ವತ್ಸರ ಸರ್ವ
ಜಿತ್ತಿನೆರಡನೆಯ ಬಹುಳ ದ್ವಾದಶಿ । ಉತ್ತರಾಯಣದಲ್ಲಭೀಪುರ
ಕ್ಷೇತ್ರ ತಂದೆವೆಂಕಟೇಶವಿಠ್ಠಲನ । ನೇತ್ರಧಾಮ ಸೇರುತ್ತ ಮೆರೆದೇ ॥೩॥

❈

## ೧೫೦

### (ಗುರುಗೋವಿಂದವಿಠ್ಠಲಾಂಕಿತ)

ರಾಗ–ಕಲ್ಯಾಣಿ ಝಾಪುತಾಳ

ವೃಂದಾವನವ ನೋಡಿರೋ–ನೀವೆಲ್ಲಾ
ನಂದವನ್ನೇ ಪೊಂದಿರೋ ||ಪ||

ರಾಮಾಚಾರ್ಯರ ಪುತ್ರರೊ–ಅವರು
ಮಾಮನೋಹರ ಸ್ವಹರಿದಾತರೋ ।
ಜನ್ಮಅಷ್ಟಕೆ ಬ್ರಹ್ಮಚರ್ಯ–ಪೊಂದಿ
ಬ್ರಹ್ಮವಿದ್ಯೆಯ ಪಡೆದರೋ ।
ಪ್ರೇಮದಿಂದಲಿ ಬಂದು ತಾವ್ ಪುರು
ಷೋತ್ತಮತೀರ್ಥರ ಸಾರ್ದರಾ ||೧||

ಕಾಯಜಪಿತನ ತಾನ್ವಲಿಸೀ ।–ದೇಶಂಗಳ
ಪ್ರೀಯದಿಂದಲಿ ಸಂಚರಿಸೀ ।
ಮಾಯಾರಮಣನು ಜೀವನೂ–ಒಂದೆಂಬ
ಮಾಯಾವಾದಿಗಳ ತರಿದೂ ।
ವಾಯುಮತಪ್ರೀತಿಯಲಿ ಆರುಹುತ
ಪ್ರೀಯ ಅಬ್ಬೂರಲ್ಲಿ ನೆಲೆಸಿದ ||೨||

ವಿಠ್ಠಲನೃಹರಿ ಪೂಜೆಗೇ–ನೇಮಿಸಿ ತಮ್ಮ
ಪಟ್ಟಶಿಷ್ಯರು ವ್ಯಾಸತೀರ್ಥರ |
ಅಟ್ಟಹಾಸದಿ ಸರ್ವಜಿತೂ–ಸಂವತ್ಸರ
ಕೃಷ್ಣೈಕಾದಶೀ ವೈಶಾಖ ।
ದಿಟ್ಟ ಗುರುಗೋವಿಂದವಿಠ್ಠಲನ
ದೃಷ್ಟಿಸೀ ತನು ಬಿಟ್ಟು ಪೊರಟನ ||೩||



|| ಶ್ರೀಃ ಹರಿಃ ಓಂ ||

# ಭಾಗ-೭

# ಯತಿ ಪೀಳಿಗೆ

## ಶ್ರೀಜಯತೀರ್ಥರು

## (ಶ್ರೀ ಟೀಕಾಕೃತ್ಪಾದರು)

ಮಿಥ್ಯಾವಾದಾಪವಾದಪ್ರಕಟಿತವಿಮತಧ್ವಾಂತ ಸಂತಾನಭಾನುಃ |
ಜೀಯಾದಸ್ಮದ್ಗುರಜಯ್ಯ ತ್ರಿಭುವನವಿದಿತಾಶ್ಚರ್ಯಚರ್ಯೋ
ಜಯಾರ್ಯಃ ||೫

ಶ್ರೀವಾದೀಂದ್ರರು- ಗುರುಗುಣಸ್ತವನ-ಶ್ಲೋಕ ;



# ಶ್ರೀ ಜಯತೀರ್ಥರ ಪರವಾದ ಕೀರ್ತನೆಗಳ ಸಂಗ್ರಹ

೧೫೧

(ಅಂಕಿತ-ಶ್ರೀಕೃಷ್ಣ-ಶ್ರೀವ್ಯಾಸರಾಜ ವಿರಚಿತ)

ರಾಗ–ಆನಂದಭೈರವಿ ಆದಿತಾಳ

ಎದುರಾರೈಗುರುವೆ–ಸಮರಾರೈ ॥ ||ಪ||

ಮದನಗೋಪಾಲನ ಪ್ರಿಯ ಜಯರಾಯಾ ||ಅ||

ಕಡುಗರ್ಜಿಸುವ ಕೇಸರಿಯಂತೆ ನಿಮ್ಮ ವಾದ
ಗಡಣೆಯ ಕೇಳುತ ನುಡಿಯೊಂದಾಡವೆ
ಗಡಗಡ ನಡುಗುವ ಮಾಯಿಗೋಮಾಯ್ಗಳು
ಅಡವಿಯಲ್ಲಡಗೋರು ನಿಮ್ಮ ಭೀತಿಯಲಿ ||೧||

ಕುಟಿಲಮತಗಳೆಂಬೊ ಪಟಲಾಂಧಕಾರಕೆ
ಪಟುತರತತ್ವಪ್ರಕಾಶಿಕೆ ಎಂಬೊ
ಚಟುಲಾತಪದಿಂದ ಖಂಡಿಸಿ ತೇಜೋ
ತ್ಕಟದಿ ಮೆರೆದ್ಯೊ ಬುಧಕಟಕಾಬ್ಜಮಿತ್ರ ||೨||

ಮಿಥ್ಯಾವಾದಾಪವಾದಪ್ರಕುಪಿತಮಿತಧ್ವಾಂತ ಸಂತಾನಭಾನುಃ ।
ಜೀಯಾದನ್ಯೈರಜಯ್ಯಃ ತ್ರಿಭುವನ ವಿದಿತಾಶ್ಚರ್ಯಚರ್ಯೋ
ಜಯಾರ್ಯಃ ॥೫॥

(ಶ್ರೀವಾದೀಂದ್ರರು–ಗುರುಗುಣಸ್ತವನ-ಶ್ಲೋಕ ೫)



೧೯೧

## ಶ್ರೀ ಜಯತೀರ್ಥರ ಪರವಾದ ಕೀರ್ತನೆಗಳ ಸಂಗ್ರಹ

ಅಂಕಿತ–ಶ್ರೀಕೃಷ್ಣ–ಶ್ರೀವ್ಯಾಸರಾಜ ವಿರಚಿತ

ರಾಗ–ಆನಂದಭೈರವಿ ಆದಿತಾಳ

ಎದುರಾರೈ ಗುರುವೆ-ಸಮರಾರೈ ॥ಪ॥

ಮದನಗೋಪಾಲನಪ್ರಿಯ ಜಯರಾಯಾ ॥ಅ॥

ಕಡುಗರ್ಜಿಸುವ ಕೇಸರಿಯಂತೆ ನಿಮ್ಮ ವಾದ
ಗಡಣೆಯ ಕೇಳುತ ನುಡಿಯೊಂದಾಡದೆ
ಗಡಗಡ ನಡುಗುವ ಮಾಯಿಗೋಮಾಯುಗಳು
ಅಡವಿಯಲ್ಲಡಗೋವು ನಿಮ್ಮ ಭೀತಿಯಲಿ ॥೧॥

ಕುಟಿಲಮತಗಳೆಂಬೊ ಪಟಲಾಂಧಕಾರಕೆ
ಪಟುತರತತ್ವಪ್ರಕಾಶಿಕೆ ಎಂಬೊ
ಚಟುಲಾತಪದಿಂದ ಖಂಡಿಸಿ ತೇಜೋ
ತ್ಕಟದಿ ಮೆರೆದ್ಯೋ ಬುಧಕಟಿಕಾಬ್ಜಮಿತ್ರ ॥೨॥

ಅಮಿತದ್ವಿಜಾವಳಿ ಕುಮುದಗಳರಳಿಸಿ
ವಿಮತರ ಮುಖಕಮಲಂಗಳ ಬಾಡಿಸಿ
ಸ್ವಮತರ ಹೃತ್ಸಂತಾಪಗಳೋಡಿಸಿ
ವಿಮಲಸುಕೀರ್ತಿಯ ಪಡೆದೆಯೊ ಚಂದ್ರ ||೩||

ವನಜನಾಭನ ಗುಣಮಣಿಗಳು ಸರ್ವಜ್ಞ
ಮುನಿಕೃತಗ್ರಂಥವನಿಯೊಳಡಗಿರೆ ಸು
ಜ್ಞಾನರಿಗೆ ಟೀಕಾಂಜನದಿಂದ ತೋರಿಸಿ
ಘನಸುಖಸಾಧನ ಮಾಡಿದ್ಯೊ ಧೀರಾ ||೪|

ವ್ಯಾಸಸೂತ್ರಗಳೆಂಬೊ ಮಂದರವನು ವೇದ
ರಾಶಿಗಳೆಂಬೊ ಕ್ಷೀರವಾರಿಧಿಯೊಳಿಟ್ಟು
ಶ್ರೀಸರ್ವಜ್ಞರ ವಾಕ್ಪಾಶದಿಂದ ಸುತ್ತಿ
ಭಾಸುರ ನ್ಯಾಯಸುಧೆ ಪಡೆದೆ ಯತೀಂದ್ರ ||೫||

ವೇದ ಶಾಸ್ತ್ರಗಳೆಂಬೊ ಶೃಂಗಗಳಿಂದ
ಸುಧಾದಿ ಗ್ರಂಥಗಳೆಂಬೊ ಸ್ತನಗಳಿಂದೊಪ್ಪುತ ತತ್ವ
ಬೋಧನೆಯೆಂಬೊ ದುಗ್ಧ ಶಿಷ್ಯವತ್ಸಂಗಳಿಗೆ
ಆದರದಲಿ ಕೊಟ್ಟ ಯತಿಸುರಧೇನು ||೬||

ಅರ್ಥಿಮಂದಾರ ವೇದಾರ್ಥವಿಚಾರ ಸ
ಮರ್ಥ ಶ್ರೀಕೃಷ್ಣ ಪದಾಬ್ಜಭೃಂಗ ಪ್ರ
ತ್ಯರ್ಥಿ ಮತ್ತೇಭಕಂಠೀರವಾಕ್ಷೋಭ್ಯ
ತೀರ್ಥಕರಜ ಜಯತೀರ್ಥ ಯತೀಂದ್ರ ||೭||



೧೯೨

## ಶ್ರೀವಿಜಯವಿಠ್ಠಲಾಂಕಿತ

## ಸುಳಾದಿ

॥ಧ್ರುವತಾಳ॥

ಜಯರಾಯ ಜಯರಾಯ ಜಯದೇವಿ ಅರಸನ್ನಾ
ಶ್ರಿಯಮಾಡಿಕೊಂಡಿಪ್ಪ ತಪೋವಿತ್ತಪ
ಭಯವ ಪರಿಹರಿಸಿ ಭವದೂರರ ಹರಿಭ
ಕ್ತಿಯ ಕೊಡು ಜ್ಞಾನ ವೈರಾಗ್ಯದೊಡನೆ
ದಯದೃಷ್ಟಿಯಿಂದ ನೋಡು ಕಾಪಾಡು ಮಾತನಾಡು
ಲಯವಿವರ್ಜಿತವಾದ ವೈಕುಂಠಕೆ
ಸ್ವಯವಾಗಿ ಮಾರ್ಗತೋರು ಸಜ್ಜನರೊಳಗಿಟ್ಟು
ಜಯವ ಪಾಲಿಸು ಎನಗೆ ಯತಿಕುಲರನ್ನ
ಆಯುತಕ್ಕಾದರು ನಾನು ಐಹಿಕ ಸೌಖ್ಯವನೊಲ್ಲೆ
ಬಯಸುವೆನು ಸತತದಲಿ ಹರಿಯನಾಮ
ತ್ರಯಗಳೆ ನಾಲಿಗೆಯಲಿ ನೆನೆನೆನೆದು ಕರ್ಮ
ಕ್ಷಯವಾಗುವಂತೆ ಕ್ಷಿಪ್ರದಲಿ ಬಿಡದೆ
ಪ್ರಯತ್ನವೆಂಬೋದಿದಕೆ ಸಾರ್ಥಕವಾಗಲಿ
ಪಯೋನಿಧಿಸುತೆರಮಣ ಮನದೊಳು ನಿಲ್ಲಲು
ಪಯಃಪಾನದಿಂದಧಿಕ ನಿಮ್ಮ ದರುಶನ ಎನಗೆ
ಪ್ರಿಯ ಮತ್ತೊಂದಾವದಿಲ್ಲ ಇದೇ ಬಲು ಲಾಭ
ಗಯ ಕಾಶಿ ತ್ರಿಸಂಗಮ ಮೊದಲಾದ ತೀರ್ಥಕ್ಷೇತ್ರ
ನಯದಿಂದ ಮಾಡಿದ ಫಲವೊಪ್ಪದು
ಪಯೆ ೀಧರಗಳ ತೆರದಂತೆ ಮೊಳ್ಪದ ಹೃ
ದಯದೊಳಗಿಪ್ಪ ಇದೆನಗೆ ಏಕಾಂತ

ಶ್ರೇಯಕೃದ್ಭಯನಾಶ ವಿಜಯವಿಠ್ಠಲನ ಸೇ
ವೆಯ ಮಾಡುವ ಸದ್ಗುಣ ಶೀಲಾ-ಸುಜನಪಾಲಾ ॥೧॥

॥ ಮಟ್ಟತಾಳ ॥

ಆವ ಜನುಮದ ಪುಣ್ಯ ಫಲಿಸಿತು ಎನಗಿಂದು
ಆವೃತರಾಗಿದ್ದ ಜಯತೀರ್ಥರ ಕಂಡೆ
ದೇವಾಂಶರು ಇವರು ಇವರ ಸ್ವರೂಪವನ್ನು
ಭಾವದಿಂದಲಿ ತಿಳಿದು ಕೊಂಡಾಡುವ ಬಲು ಧನ್ಯ
ಪಾವನಪರಿಯನ್ನು ಇಲ್ಲಿ ಇರುತಿಪ್ಪ
ಕಾವೃತ ಭಕುತರ ಪಾವನಗೈಸುವ
ದೇವ ದೇವೇಶ ಸಿರಿ ವಿಜಯವಿಠ್ಠಲನಂಘ್ರಿ
ಕಾವರೆ ಭಜಿಸುವ ನಿಷ್ಕಾಮುಕ ಮೌನಿ ॥

॥ ತ್ರಿವಿಡಿತಾಳ ॥

ವೈಷ್ಣವಜನುಮ ಬಂದುದಕಿವೇ ಸಾಧನ
ವಿಷ್ಣುವಿನ ಭಕುತಿ ದೊರಕಿದುದಕೆ
ನಷ್ಟವಾಯಿತು ಎನ್ನ ಸಂಚಿತಗಾಮಿಕರ್ಮ
ಕಷ್ಟ ದಾರಿದ್ರ್ಯಗಳು ಹಿಂದಾದವೋ
ತುಷ್ಟನಾದೆನು ಎನ್ನ ಕುಲಕೋಟಿ ಸಹಿತ ಅ
ದಿಷ್ಟ ಮಾರ್ಗಕೆ ಇನ್ನು ಪೋಗೆ ನಾನು
ಸೃಷ್ಟಿಯೊಳಗೆ ಇವರ ದರ್ಶನವಾಗದಲೆ
ಸ್ಪಷ್ಟವಾದ ಜ್ಞಾನ ಪುಟ್ಟದಯ್ಯಾ
ಇಷ್ಟಕಾಲ ಬಿಡದೆ ಮುಂದೆ ಮಾಡುವ ಬಲು
ನಿಷ್ಠೆಗೆ ಅನುಕೂಲ ತಾತ್ವಿಕರಿವರು

ಶಿಷ್ಟಾಚಾರವನು ಮೀರದಲೆ ನಿಮ್ಮ
ಇಷ್ಟಾರ್ಥ ಬಯಸುವದು ಉಚಿತದಲ್ಲಿ
ವೈಷ್ಣವಾಚಾರ್ಯರ ಮತ ಉದ್ಧಾರಕರ್ತಾ
ಭ್ರಷ್ಟವಾದಿಗಳನ್ನು ಸುಗ್ಗಲೊತ್ತಿ
ಕೃಷ್ಣವಂದಿತ ನಮ್ಮ ವಿಜಯವಿಠ್ಠಲರೇಯನ
ಅಷ್ಟಕರ್ತೃತ್ವವನು ಸ್ಥಾಪಿಸಿದ ಧೀರಾ ॥೩॥

॥ ಅಟ್ಟತಾಳ ॥

ಕುಶರಾಯ ಇಲ್ಲಿ ತಪಸು ಮಾಡಿದಂಥ
ವಸತಿಯ ನೋಡಿ ದಿಗ್ದೇಶ ಜಯಿಸಿ ಮಾ
ವಸದಲಿ ತಿಳಿದು ಅಕ್ಷೋಭ್ಯತೀರ್ಥರು ಇಲ್ಲಿ
ನಸುನಗುತಲೆ ವಾಸವಾದರು ಬಿಡದೆಲೆ
ಋಷಿಕುಲೋತ್ತಮರಾದ ಜಯರಾಯರು ನಿತ್ಯ
ಬೆಸನೆ ಬೆಸನೆ ಬಂದು ಗುಪ್ತದಲಿ ಪೂ
ಜಿಸುವರು ಪ್ರೀತೀಲಿ ಏನೆಂಬೆನಾಚಾರ್ಯ
ಶಶಿವರ್ಣದಂತೆ ಪೊಳೆವ ದರುಶನಗ್ರಂಥ
ರಸಪೂರಿತಮಾಗಿ ವಿಸ್ತರಿಸಿದರು ವಿ
ಕಸಿತವಮಾಡಿ ಕರದ ಕನ್ನಡಿಯಂತೆ
ಕುಶಲ ಮಾನವರಿಗೆ ಜ್ಞಾನಹೆಚ್ಚುವಂತೆ
ವಸುಧೆಯೊಳಗೆ ನಮ್ಮ ವಿಜಯವಿಠ್ಠಲರೇಯನ
ವಶವಾಗುವುದಕ್ಕೆ ಪ್ರಸಾದ ಮಾಡಿದರು ॥೪॥

॥ಆದಿತಾಳ॥

ಈ ಮುನಿ ಒಲಿದರೆ ಅವನೆ ಭಾಗ್ಯವಂತ
ಭೂಮಿಯೊಳಗೆ ಮುಕ್ತಿಯೋಗ್ಯನೆಂದೆನಿಸುವನು

ಭೀಮ ಭವಾಂಬುಧಿ ಬತ್ತಿ ಪೋಗುವುದು ನಿ
ಸ್ಸೀಮನಾಗುವನವ ಪಂಚಭೇದಾರ್ಥಪ್ರಮೇಯದಲ್ಲಿ
ತಾಮಸಜನರಿಗೆ ಭಕ್ತಿ ಪುಟ್ಟದು ದುಃ
ಖಮಹೋದಧಿಯೊಳು ಸೂಸುತಲಿಪ್ಪರು
ಸ್ವಾಮಿ ಈಗಲೇ ಬಂದು ದಾರುಳ ಮನುಜನ ನೋಡಿ
ನಾಮೊರೆಯಿಡುವೆನು ಕಾಯೋ ಕರುಣದಲಿ
ಯಾಮಯಾಮಕೆ ನಿಮ್ಮ ಸ್ಮರಣೆ ಪಾಲಿಸಿ ಉ
ತ್ತಮ ಬುದ್ಧಿಯನಿತ್ತು ಕೃತಾರ್ಥನ್ನ ಮಾಡು
ರಾಮ ಸುಗುಣಧಾಮ ವಿಜಯವಿಠ್ಠಲರೇಯನ್ನ
ನಾಮ ಕೊಂಡಾಡುವ ಟೀಕಾಚಾರ್ಯ-ಗುರುವರ್ಯಾ ||೩||

||ಜೊತೆ||

ಮೇಘನಾಥಪುರ ಕಕುರವೇಣಿವಾಸ
ಶಾಖೆವೇಶ ವಿಜಯವಿಠ್ಠಲನ್ನ ನಿಜದಾಸ ||

## ೧೯೩

(ವಿಜಯವಿಠ್ಠಲಾಂಕಿತ)

(ವೃಂದಗಾನದಲ್ಲಿ)

ಹರಿಭಜಿಸರೋ ಟೀಕಾಚಾರ್ಯರಂಘ್ರಿಯಾ ||ಪ||

ಘೋರಪಾತಕಾಂಬುಧಿಯ ದೂರ ಮಾಳ್ಪರಾ ||ಅ||

ಬೋಧತೀರ್ಥರ-ಮತವ ಸಾಧಿಸುವರ
ವಾದಿಸೌಖ್ಯರ-ದುರ್ಬೋಧ ಕಳೆವರ ||೧||

ಭಾಷ್ಯತತ್ತ್ವವ–ಸುವಿಶೇಷ ಮಾಳ್ಪರ
ದೋಷದೂರರ-ವಾಸವಾದಿ ರೂಪರ ॥೨॥

ಶ್ಯಾಮಸುಂದರ-ಹರಿಗೆ ಪ್ರೇಮಪೂರ್ಣರ
ನೇಮನಿತ್ಯರ-ನಿಷ್ಕಾಮನಾವರ ||೩||

ಮೋಕ್ಷದಾತರ ಅಕ್ಷೋಭ್ಯತೀರ್ಥರ
ಶಿಕ್ಷಿತಾದರ–ಅಪೇಕ್ಷರಹಿತರ ॥೪॥

ವಿಜಯವಿಠ್ಠಲನ–ಅಂಘ್ರಿ ಭಜನೆಮಾಳ್ಪರ
ಕುಜನಭಂಜರ–ದಿಗ್ವಿಜಯರಾಯರ ॥೫॥



## ೧೯೪

(ವಾಸುದೇವವಿಠ್ಠಲಾಂಕಿತ) (ಶ್ರೀವ್ಯಾಸತತ್ತ್ವಜ್ಞ ವಿರಚಿತ)

**ರಾಗ–ಜಂಜೂಟಿ** **ಅಟತಾಳ**

ನೋಡು ನೋಡು ಟೀಕಾಚಾರ್ಯರ ॥ಪ॥

ಮಾಡು ವಂದನೆಗಳನ್ನು ಬೇಡು ವರಗಳನ್ನು ॥ಅ॥

ದುರ್ಮಾದಿಮತಗಳ ಮರ್ಮಭೇದಿಸಿ ಸುಧಾ
ನಿರ್ಮಾಣ ಮಾಡಿದ-ಆರ್ಯರ ॥೧॥

ಲಲಿತೋರ್ಧ್ವಪುಂಡ್ರ ಶ್ರೀತುಲಸೀ ಭೂಷಿತಕರ್ಣ
ವಿಲಸಿತಕಾಷಾಯಧಾರ್ಯರ–ಆರ್ಯರ ॥೨॥

ಯಾವಾಗಲೂ ವಾಸುದೇವವಿಠ್ಠಲನ್ನ
ಸೇವಿಸುವರ ಭಜಿಸುವರ–ಆರ್ಯರ ॥೩॥

## ೧೯೫

### (ಹಯವದನ–ಅಂಕಿತ) (ಶ್ರೀವಾದಿರಾಜಕೃತ)

ರಾಗ ಗೌಳೀಪಂತು ಆದಿತಾಳ

ಜಯರಾಯಾ ಜಯರಾಯ ‖ಪ‖

ಜಯರಾಯ ನಿನ್ನ ದಯವುಳ್ಳ ಜನರಿಗೆ
ಜಯವಿತ್ತು ಜಗದೊಳು ಭಯವ ಪರಿಹರಿಸುವ ‖ಅ‖

ಖುಲ್ಲರಾದ ಮಾಯ್ಗಳ ಹಲ್ಲು ಮುರಿದು
ವಲ್ಲಭ ಜನಕೆ ಶ್ರೀನಲ್ಲವೆಂದರುಹಿದಿ ‖೧‖

ಮಧ್ವರಾಯರ ಮತ ಶುದ್ಧ ಶರಧಿಯೊಳು
ಉದ್ಭವಿಸಿದ ಗುರುಸಿದ್ಧಾಂತಸ್ಥಾಪಕ ‖೨‖

ಸಿರಿಹಯವದನನ ಚರಣಕಮಲವನು
ಭರದಿ ಭಜಿಸುವರ ದುರಿತಗಳ ಹರಿಸುವ ‖೩‖



## ೧೯೬

### ವ್ಯಾಸವಿಠ್ಠಲಾಂಕಿತ

ರಾಗ–ಯದುಕುಲಕಾಂಬೋಧಿ ಆದಿತಾಳ

ದಯದಿ ಪಾಲಿಸೋ ಜಯತೀರಥರಾಯ ಅಕ್ಷೋಭ್ಯರ ತನಯಾ ‖ಪ‖

ಅತ್ಯಂತ್ಹ ರುಷದಿ ಎತ್ತಾಗಿರುತಿರಲೂ-ಶ್ರೀಆನಂದತೀರಥರೂ
ನಿತ್ಯಪಠಿಸುವ ಪುಸ್ತಕ ಹೊರುತಿರಲೂ-ಗುರುರಾಯರು ಪೇಳಿದ
ತತ್ತ್ವಗ್ರಂಥವನೆ ಕಿವಿಯಲಿ ಕೇಳುತಲೀ-ತಲೆಯನು ತೂಗುತಲಿ
ಮತ್ತೆ ಪುಟ್ಟಿದ್ಯೋ ಮಂಗಳವೇಡಿಯಲೀ-ಅತಿಮಂತವರಲೀ ॥೦॥

ದೇಶಪಾಂಡೇರ ಕೂಸಾಗಿ ಜನಿಸೀ-ಘನರಾವುತನೆನಿಸೀ
ದೇಶ ದೇಶದೊಳ್ ಸೈನ್ಯವನೆ ಚರಿಸೀ-ಹಣವನ್ನೇ ಗಳಿಸೀ
ವಾಸವಿಯೆಂಬೋ ಗುರುತನೆ ತಪ್ಪಿಸೀ-ನದಿಗೆ ನೀರಡಿಸೀ
ಶ್ರೀಶನಾಜ್ಞೆಯೊಳು ಇವರನೆ ಕರೆತರಿಸೀ-ಶಿಖಿಸೂತ್ರವ ತೆಗಿಸೀ ॥೨॥

ಹಿಂಡು ಹಿಂಡು ಜನ ಅಂಡಲೆಯುತ ಬಂದೂ-ಅಕ್ಷೋಭ್ಯತೀರಥರಾ
ಕಂಡೂ ಭೇಟಿಯ ಮಾಡುತಲೆ ನಿಂದೂ-ಧೊಂಡೋರಘುನಾಥನ
ಹೆಂಡತಿ ಗಂಡನ ಕೂಡಿಸಬೇಕೆಂದೂ-ಸುಮ್ಮನೆ ಕರೆತಂದೂ ಪ್ರ
ಚಂಡಸರ್ಪನಾ ರೂಪವ ತಾಳ್ದಂದೂ-ಭಯವ ಪಟ್ಟರಂದೂ ॥೩॥

ಮಧ್ವಶಾಸ್ತ್ರಗಳನುದ್ಧರಿಸುತಲದನಾ-ಟೀಕೆಯನೆ ಮಾಡಿ
ವಿದ್ವಜ್ಜನರಿಗೆ ತಿದ್ದಿಯೆ ಪೇಳುತಲೀ-ನಾನಾ ಬಗೆಯಿಂದಲೀ
ಪದ್ಧತಿ ತಿಳಿಸಿದ ಗುರುರಾಯರು ನೀವು-ಯತಿವರಸುರಧೇನು
ಅದ್ವೈತರ ಗುರುವಿದ್ಯಾರಣ್ಯರ-ಗೆದ್ದಸಿಂಹ ನೀನೂ ॥೪॥

ಆಷಾಢ ಬಹುಳ ಪಂಚಮಿಯು ಬರುತಾ-ಕಳೇಬರವನೆ ಬಿಡುತಾ
ವ್ಯಾಸವಿಠ್ಠಲನ ಪಾದದಲೆ ನಿರುತಾ-ಮಳಖೇಡದೊಳು ಸತತಾ
ವಾಸಿಪನೆಂಬೋ ಬಲು ಪ್ರಖ್ಯಾತಾ-ನಿಜಗುಣಗಣ ನೀತಾ
ಬ್ಯಾಸರದಲೆ ಕೊಂಡಾಡಿದರೆ ನಿತ್ಯಾ-ಇಷ್ಟಾರ್ಥವನಿತ್ತಾ ॥೫॥



## ೧೯೭

## (ಜಗನ್ನಾಥವಿಠ್ಠಲಾಂಕಿತ)

## (ವೃಂದಗಾನದಲ್ಲಿ)

**ರಾಗ–ಪೂರ್ವಿ** **ಆದಿ ತಾಳ**

ಜಯರಾಯ ಜಯರಾಯ
ದಯವಾಗೆಮಗನುದಿನ ಸುಪ್ರೀಯಾ ||ಪ||

ಸುರನಾಥನೆ ನೀ ನರನವೇಷದಿ
ಧರಣಿಯೊಳಗೆ ಅವತರಿಸಿದಿ ದಯದಿ ||೧||

ವಿದ್ವನ್ಮಂಡಲಿ ಸದ್ವಿನುತನೆ ಪಾ
ದದ್ವಯಕೆರಗುವೆ ಉದ್ಧರಿಸೆನ್ನನು ||೨||

ವಿದ್ಯಾರಣ್ಯನಾವಿದ್ಯಮತದ ಕು
ಸಿದ್ಧಾಂತಗಳ ಅಪದ್ಧವೆನಿಸಿದೆ ||೩||

ಅವಿದಿತನ ಸತ್ಕವಿಗಳ ಮಧ್ಯದಿ
ಸುವಿವೇಕಿಯ ಮಾಡವನಿಯೊಳೆನ್ನನು ||೪||

ಗುರುಪೂರ್ಣಪ್ರಜ್ಞರ ಸನ್ಮತವನು ಉ
ದ್ಧರಿಸಿ ಮೆರೆದೆ ಭೂಸುರವರವರದಾ ||೫||

ಸಭ್ಯರ ಮಧ್ಯದೊಳಭ್ಯಧಿಕ ವರಾ
ಕ್ಷೋಭ್ಯ ಮುನಿಕರಾಬ್ಜಾಭ್ಯುದಿತ ಗುರು ||೬||

ನಿನ್ನ ವರವನಾನನ್ಯಗನಲ್ಲ ಜ
ಗನ್ನಾಥವಿಠ್ಠಲನೆನ್ನೊಳಗಿರಿಸೋ ||೭||



# ೧೯೮

## (ಪ್ರಾಣೇಶವಿಠ್ಠಲಾಂಕಿತ)

ರಾಗ-ಶಂಕರಾಭರಣ ಏಕತಾಳ

ಜಯರಾಯರಂಘ್ರಿಜಲಜವ
ಭಜಿಸಿ ಜನರು ತಡೆಯದಲೆ-ಗುರು ॥ಪ॥

ಕುತರ್ಕಿಗಳ ಹತರ್ಗೈಸಿದ
ಶತಕ್ರತಾಖ್ಯರ ಸುತರಾದ-ಗುರು ॥೧॥

ವಸುಧಿಯೊಳಗನ್ಯವೇಷದಿಂ ಚ
ರಿಸಿದ ಲೇಸಾಗಿ ಸಾರಥಿ ಶ್ರೀಶನಾದ-ಗುರು ॥೨॥

ಖ್ಯಾತಿಯಿಂ ಲೋಕದಿ ವಾತಜನ್ನೊಲಿಸಿದ
ದಾತನ ಅರಿಯು ಜಗನ್ನಾಥನುಳಿದು-ಗುರು ॥೩॥

ದುಷ್ಟರ ಜರಿದ ವಿಶಿಷ್ಟರ ಪೊರೆದ ಶ್ರೀ
ಕೃಷ್ಣನ ಸಖನೋರ್ವ ಸೃಷ್ಟಿಯೊಳಗೆ-ಗುರು ॥೪॥

ಈಶಗೊಲಿದ ತುರುಗಾಸ್ಯನಾಳುಗಳೊಳು
ಈ ಸುಗುಣಿಗೆ ಕಾಣೆ ನಾ ಸರಿಯಾ-ಗುರು ॥೫॥

ತಾತನಾಲಯಕ್ಕೈದಿ ನೂತನ ವಿದ್ಯಂಗ
ಳಾತುರದಲಿಯ್ದೈದಿ ದಾತ ನೀತ-ಗುರು ॥೬॥

ಪ್ರಾಣೇಶವಿಠ್ಠಲನು ತಾ ನುಡಿಸದೆ ತುಟಿ
ಯನು ಹೊಂದಿ ಸರಜಸ್ಥಾಣುವೆನುವ-ಗುರು ॥೭॥



**ಕಠಿಣ ಶಬ್ದಗಳ ಅರ್ಥ :—**

ಶತಕ್ರತು—ನೂರು ಅಶ್ವಮೇಧಯಾಗಗಳನ್ನು ಮಾಡಿದ ದೇವೇಂದ್ರ.
ತುರುಗಾಸ್ಯ=ಹಯಗ್ರೀವನಾಮಕ ಶ್ರೀಪರಮಾತ್ಮ.
ತಾತ=ತಂದೆ
ಅಜ=ಬ್ರಹ್ಮ
ಸ್ಥಾಣು=ರುದ್ರ



## ೧೯೯

### (ಶ್ಯಾಮಸುಂದರಾಂಕಿತ)

ರಾಗ–ಬಹರ ತ್ರಿಪುಟತಾಳ

ದಯದಿ ಸಲಹೋ–ಜಯರಾಯ ||ಪ||

ಕಾಗಿನೀನಿಲಯ ಕವಿಜನಗೇಯ
ಯೋಗಿವರಿಯ ಕೃಪಾಸಾಗರ ಸತತ ||೧||

ಮರುತಸುಶಾಸ್ತ್ರಕೆ ವಿರಚಿಸಿ ಟೀಕೆಯ
ಮುರಿದು ಕುಭಾಷ್ಯವ ಮೆರೆದ ಮಹಾತ್ಮ ||೨||

ಭೀಮಭವಾಟವಿಧೂಮಧ್ವಜ ಸು
ತ್ರಾಮಜಸಖ ಸಿರಿಶಾಮಸುಂದರ ಪ್ರಿಯ ||೩||



## ೨೦೦

(ಅಂಕಿತ-ಕಾರ್ಪರ ನರಸಿಂಹ)

ರಾಗ-ಮೋಹನ ಆದಿತಾಳ

ರಥವೇರಿ ಬರುತಿಹ ಗುರುವರನ್ಯಾರೆ । ಪೇಳಮ್ಮಯ್ಯ ॥ಪ॥

ಕ್ಷಿತಿಯೊಳು ಮುದಮುನಿಕೃತ ನಿಕೃತಗ್ರಂಥಕೆ ವಿ-
ಶ್ರುತ ಟೀಕಾಕೃದ್ಯತಿವರನಮ್ಮ ॥ಅ॥

ಕ್ಷಿತಿಯೊಳು ರತಿಪತಿಪಿತನಾಜ್ಞೆಯ ಸ್ವೀಕರಿಸಿ-ಮಾರುತನವತರಿಸಿ
ಶ್ರುತಿಸಮ್ಮತ ಶ್ರೀಮದ್ಭಾಷ್ಯವತಾ ರಚಿಸಿ-ಛಾತ್ರರಿಗೆ ವಿವರಿಸೆ
ಸ್ತುತಿಸಿಹರು ಫಣಿಪತಿಮುಖ ಸುರರಾಗಸದಿ-ಕೇಳುತಲನುದಿನದಿ ॥
ಅತಿಹಿತದಲಿ ಗೋಪತಿರೂಪದಿ ಕೇಳ್ದತುಲಮಹಿಮ
ಸುರಪತಿಯು ಕಾಣಮ್ಮ ॥೧॥

ಚಾರು ತುರುಂಗಮವೇರಿ ನಡೆಸಲತಿಚತುರ ದೇಶಪಾಂಡೇರ ಕುವರ
ವಾರಿಮಧ್ಯ ಹಯವೇರಿ ಮಾಡಲು ಜಲಪಾನ-ಕೇಳಲು ಗುರುವಚನ
ಮೀರಗೊಡದೆ ತಲೆದೋರಿತಾಗಲೆ ಸುಜ್ಞಾನ-ಸಂಸಾರ ಸುಖವನ
ದೂರಮಾಡಿ ಯತಿಸೂರಿ ಅಕ್ಷೋಭ್ಯಕು
ಮಾರರೆನಿಪ ಜಯತೀರಥರಮ್ಮ ॥೨॥

ಮಧ್ವಶಾಸ್ತ್ರ ವಿಜಯ ಧ್ವಜಯೂಪವ ಜಗದಿ-ಸ್ಥಾಪಿಸಿದರು ಮುದದಿ
ಶುದ್ಧಮಾಯಿ ಸುಭಟಧ್ವಜನಿಯ-ಓಡಿಸಿದ ವಾಕ್ಸಾಯಕದಿಂದ
ಮಧ್ವರಾಜಕೃತ ಸದ್ಗ್ರಂಥಗಳ ವಿಸ್ತಾರ-ಮಾಡಿದ ಯತಿಧೀರಾ ॥
ವಿದ್ಯಾರಣ್ಯಾಖ್ಯಾದ್ವೈತಿಯ ವಾ
ಗ್ಯುದ್ಧದಿ ಗೆಲಿದ ಪ್ರಸಿದ್ಧ ಕಾಣಮ್ಮ ॥೩॥

ಚಾಮೀರಕೃತ ಚಾಮರ ಛತ್ರಗಳಿಂದ ಸೇವಿಪ ದ್ವಿಜರಿಂದ
ನೇಮದಿ ಪಠಿಸುವ ಸಾಮಾದಿ ಶ್ರುತಿಘೋಷ—ಶ್ರವಣ ಪೀಯೂಷ
ಭೂಮಿಸುರರಿಗತಿ ಪ್ರೇಮದಿ ಸುಧೆಯುಣಿಸಿದ-ಭವಭಾಧೆ ಬಿಡಿಸಿದ
ಭೂಮಿಜಾವರಶ್ರೀರಾಮಪದಾರ್ಚಕ
ಶ್ರೀಮಣಿಪೀಠಸುಧಾಮ ಕಣಮ್ಮ ॥೪॥

ನಿರುತ ಶಿಷ್ಯರಿಗೆ ಮರುತಶಾಸ್ತ್ರ ಬೋಧಿಪರತೋಷಿತ—ಬುಧನಿಕರ
ಗುರು ಸತ್ಯಪ್ರಮೋದತೀರ್ಥ ಸಂಸೇವ್ಯ—ಪಾವನತರಚರಿಯ
ಶರಣಜನಕೆ ಸುರತರುವೆನಿಸಿದ ಜಯರಾಯ—ವಿದ್ವಜ್ಜನಗೇಯ
ಧರೆಯೊಳು ಸಿರಿ ಕಾರ್ಪರ ನರಸಿಂಹನೆ
ಪರನೆಂದರುಹಿದ ಗುರವರನಿವನಮ್ಮಾ ॥೫॥



## ೨೦೧

(ತಂದೆ ವೆಂಕಟೇಶವಿಠ್ಠಲಾಂಕಿತ)

ಉದಯರಾಗ ವಾರ್ಧಿಕಷಟ್ಪದಿ

ಶ್ರೀಮಜ್ಜಯಾರ್ಯ ನಮಃ ॥ಪ॥

ಶ್ರೀಮಜ್ಜಯಾರ್ಯಸನ್ನಾಮ ಓಂಕಾರ ಸಹ
ನೇಮದಲಿ ಪಠಿಸೆ ನಿರ್ಧೂಮ ಭವಕಾನನವು
ಧೀಮಂತರಾಗಿ ವಿದ್ಯಾಯಶೋದ್ದಾಮತೆಯು
ಧಾಮರೆಹರ್ದ್ದರಿಬಲದಲೀ ॥೧॥

ಧರೆಯೊಳಸುರರು ಧರಾಸುರವೇಷದಿಂದುಸಿ
ಹರಿದ್ವೇಷದವಿವೇಕಸರಣಿ ದುರ್ಭಾಷ್ಯದಲಿ
ಪರಮವಿಷ್ಣುರಹಸ್ಯ ಪ್ರಚ್ಛನ್ನನಾಸ್ತಿಕಾರಣ್ಯದೊಳು ಕುರುಹುಗೆಡಿಸೇ ॥

ಸುರರು ಪ್ರಾರ್ಥಿಸೆ ಹರಿಯಕಾರುಣ್ಯಬಲದೊಳವ
ತರಿಸಿ ವಾಯ್ವಾನಂದತೀರ್ಥಾಭಿಧಾನದಲಿ
ಸರುವ ದುರ್ಮತ ಮುರಿದು ಮೆರೆದ ಸಚ್ಛಾಸ್ತ್ರಗಳ
ಟೀಕಾನುವ್ಯಾಜದಿಂದ ॥೧॥

ಶ್ರೀಮದಾಚಾರ್ಯರ ಸಮಗ್ರಸದ್ಗ್ರಂಥ ಶಿರ
ಸಾಮಾನ್ಯವೆಂದವರ ವೃಷವಪುವಾಶ್ರೈಸಿ
ಆಮನೋಜ್ಞಪ್ರಮೇಯಾರ್ಥಮಯರಾಹಸ್ಯ ಶ್ರೀಮುಖದಿ ಶ್ರವಣಮಾಡಿ ॥
ಸೋಮಪಾಧಿಪ ಮತ್ತೆ ಭೂಮಿಯೊಳು ಮಹರಾಷ್ಟ್ರ
ಸೀಮೆಯೊಳು ಮಂಗಳಸುವೇಡಿಯಲಿ ರಘುನಾಥ
ನಾಮಕ ಭಟೋತ್ತಮ ಶ್ರೀಮಂತನಲಿ ಧೋಂಡೋನಾಮದಲಿ ಜನ್ಮ ಪಡೆದಾ
॥೨॥

ಕಾಲಕರ್ಮಗಳಾನುಕೂಲವಾಗಿರೆ ಭಿಕ್ಷು
ಭಾಳಾಕ್ಷನಕ್ಷೋಭ್ಯ ಪಶುವಿನಂತಲ್ಲಿಯು
ಶ್ಲೀಲಭಾವದಿ ಜಲವ ಮೊಗೆಯುತಿಹ ಸಾದಿವರಗಾಹ್ವಾನವಿತ್ತು ಕರೆಸಿ ॥
ಮೇಲಾದ ಸ್ವಪ್ನಾರ್ಥಮೂಲಗಳ ಸೂಚಿಸಲು
ಬಾಲಭಾವವ ಬಿಟ್ಟು ಧೋಂಢೋರಘುನಾಥ ಶ್ರ
ದ್ಧಾಳುತನದಲಿ ಮೆರೆದ ಜಯತೀರ್ಥನಾಮದಿ ಸಭಾಳಕನ ಕರಜನೆನಿಸೀ
॥೩॥

ಶೋಕಮಹದಾಕ್ರೋಶವ್ಯಾಕುಲಿತ ಬಾಂಧವಾ
ನೀಕಕತಿಕೃದ್ಧ ಸರ್ಪಾಕಾರ ತೋರಿ ಪರ
ಮೇಕಾಕಿತನದಿ ಭಕ್ತೈಕಲಭ್ಯನ ಮಂಗಳಾಕಾರವನು ಕಾಣುತ
ಭೀಕರಾದ್ವೈತಾದಿ ಏಕವಿಂಶತಿ ದುಷ್ಟ
ವ್ಯಾಖ್ಯಾನಗಳ ಮುರಿದು ಸುಖತೀರ್ಥಕೃಚ್ಛಾಸ್ತ್ರ
ಟೀಕಿಸಲು ವಾಣ್ಯೋಪಲಬ್ಧ ಕಂಟ ಕ್ರಮುಕ ಸ್ವೀಕರಿಸಿ ಪ್ರಕಟಿಸಿದನು ॥೪॥

ಈಶಷಟ್ಪ್ರಶ್ನ ವಿಧಿಸೂತ್ರಾನುವ್ಯಾಖ್ಯಾನ
ಭಾಸುರ ನ್ಯಾಯಗೀತಾ ಕಥಾಲಕ್ಷಣವು
ಆ ಸುಋಗ್ಭಾಷ್ಯ ಮಿಥ್ಯೋಪಾದಿ ಮಾಯ ತತ್ತ್ವೋದ್ಯೋತ ಸಂಖ್ಯಾನವೂ
ಲೇಸು ಕರ್ಮವಿವೇಕ ತತ್ತ್ವನಿರ್ಣಯ ಜ್ಞಾನ
ಕೋಶ ಪ್ರಮಾಣಲಕ್ಷಣಗ್ರಂಥಂಗಳಲ್ಲಿ ಮ
ಧ್ವಾಶಯವ ನಿಷ್ಕೃಷ್ಟಗೊಳಿಸಿ ವಸುಧಾಸುರಪ್ರವರ ಟೀಕಾರ್ಯ ಮೆರೆದಾ ॥೫॥

ಪದ್ಯಮಾಲಾ ಶತಾಪರಾಧಸ್ತೋತ್ರ ಪ್ರಮಾಣ
ಪದ್ಧತಿಯು ವಾದಾವಳೀ ಪ್ರಮುಖ ಸ್ವಾತಂತ್ರ್ಯ
ಶುದ್ಧ ಸದ್ಗ್ರಂಥಗಳ ರಚಿಸಿ ಸ್ವಮತಸತ್ಸಿದ್ಧಾಂತ ದಿಗ್ವಿಜಯಿಸಿ
ಸಿದ್ಧಾತ್ಮಜ್ಞಾನ ಸದ್ವಿದ್ವತ್ಪ್ರವಾಹದಲಿ
ಮೂರ್ಧನ್ಯನಾಗಿ ದುರ್ಬೋಧಕಳೆದಖಿಳಗುಣ
ಸದ್ಧಾಮ ಜಯತೀರ್ಥ ಮಧ್ವಮತದುಗ್ಧಾಬ್ಧಿ ಗುದ್ಧಾಮಚಂದ್ರನಾದ ॥೬॥

ಧರೆಯೊಳಿದ್ದಖಿಳ ತೀರ್ಥಕ್ಷೇತ್ರಗಳನೆಲ್ಲ
ಚರಿಸಿ ಮತಸಾಮ್ರಾಜ್ಯ ಹರಹಿ ದಿಗ್ದೆಸೆಗೆ ಸ
ಚ್ಚರಿತರುದ್ಧರಿಸಿ ದಶಪ್ರಮತಿಮತತತ್ತ್ವಪ್ರತಾಪಾತಪತ್ರನೆನಿಸಿ
ಯರಗೋಳದಲಿ ತಪವಚರಿಸಿಯಾನಂತರದಿ
ಗುರುಗಳ ಸಮೀಪವನು ಸಾರಿ ಮಳಖೇಡದಲಿ
ವರವಿಭವದಾಷಾಢಕೃಷ್ಣ ಪಂಚಮಿ ಕಳೇಬರವನಿಟ್ಟ್ಹರಿಯ ಸೇರ್ದ ॥೭॥

ಜಯಜಯ ಜಯಾಖ್ಯಮುನಿ ಜಯತಾಗಮಾರ್ಥಖನಿ
ಜಯ ಚಿತ್ರವಾಕ್ಸರಣಿ ಜಯ ಭವಾಂಬುಧಿತರಣಿ
ಜಯ ಜಯಾತ್ಮಜ್ಞಾನಿ ಅದ್ವೈತಮತಹಾನಿ ಜಯ ಜಯತು ಗುಣಸಂದಣಿ ॥
ಜಯ ಸೋಮರಸಪಾನಿ ಜಯತತ್ತ್ವರಭಿಮಾನಿ
ಜಯತಾಗಮವ್ಯಸನಿ ಜಯತು ನಿರ್ಗತಗ್ಲಾನಿ
ಜಯಜಯತು ಜಯತೀರ್ಥ ಪ್ರಾಪ್ತ ಸತ್ಪುರುಷಾರ್ಥ ಜಯಜಯತು
ಜಯಕೃತಾರ್ಥ ॥೮॥

ಶ್ರೀಮದಾಚಾರ್ಯಮತತಾಮರಸ ಸೂರ್ಯರೆನಿ
ಪೀ ಮಹಾಮುನಿಯು ಸನ್ನಾಮ ಸ್ಮರಿಸಲು ಸಕಲ
ತಾಮಸವು ಕಳೆದು ಹೃದ್ಧಾಮದಲಿ ಸದಮಲಜ್ಞಾನಾರ್ಕಬಿಂಬೋದಯ॥
ಪ್ರೇಮದಲಿ ಜಯಗುಣಸ್ತೋಮವೆಂಬೀ ರತ್ನ
ದಾಮವನು ತಂದೆ ವೆಂಕಟೇಶವಿಠ್ಠಲಗಾದಿ
ಯಾಮದೊಳಗರ್ಪಿಸೆ ಸ್ವಧಾಮಮುಕ್ತರ ಮಾಳ್ಪನಾವುದಿದಕನುಮಾನವೂ॥
॥೯॥



## ೨೦೨

### (ಗುರುಗೋವಿಂದವಿಠ್ಠಲಾಂಕಿತ)

**ರಾಗ-ಮೋಹನ** **ಅಟ್ಟತಾಳ**

ವಾದಿವದನ ಕುಮುದ ಸೂರ್ಯ-ತತ್ತ್ವ
ವಾದಿವದನ ಕುಮುದಚಂದ್ರಾ ॥ ॥ಪ॥

ಬಾದರಾಯಣ ವೇದಸೂತ್ರವ-ಮೋದದಲಿ ಪ್ರಕಾಶಗೊಳಿಸುತ
ಸಾಧುಜನ ಸಂತೋಷಕಾರಣ-ಸಾಧು ಟೀಕಾಚಾರ್ಯ ನಮಿಸುವೆ ॥ಅ॥

ದೇಶ ಪಾಂಡ್ಯರ ಶಿಶುವೆನಿಸೀ—ಸೈನ್ಯ। ದೇಶದೇಶದಿ ಸಂಚರಿಸೀ
ಭಾಸುರ ಕೀರ್ತಿಯ ಗಳಿಸೀ—ಒಂದು। ಮಾಸರ ತಾನು ನೀರಡಿಸೀ ॥
ಆಶುಗತಿ ಅಶ್ವವನು ಏರಿರ—ಲಾ ಸರಿತು ಕಾಗಿನಿಯ ಜಲವನು
ಲೇಸು ಪಶುವಂದದಲಿ ಕುಡಿದು ಪಿ। ಪಾಸೆ ಕಳೆದ ಸುಯೋಧ ಕಾಯೋ ॥೧॥

ಈಕ್ಷಿಸುತೀಚರ್ಯದವನಾ-ಮುನಿ। ಅಕ್ಷೋಭ್ಯತೀರ್ಥ। ಶ್ರೀಚರಣಾ
ಪಕ್ಷಿವಾಹನನಾ ತೈಜಸನಾ-ಮಾತ। ಲಕ್ಷಿಸಿ ತಾನೋರ್ವ ಶಿಷ್ಯನಾ ॥
ತಕ್ಷಣದಿ ಕಳಿಸ್ಯವನನಲ್ಲಿಗೆ ಪ್ರೇಕ್ಷಿಸಲು ಬರಬಂದು ಇಲ್ಲಿಗೆ
ದೀಕ್ಷೆಯನು ಕೈಕೊಂಡು ದಶಮತಿ। ಪಕ್ಷಸಾಧಿಸಿ ಗತಿಯ ತೋರ್ದರೆ
॥೨॥

ತೀರ್ಥಕ್ಷೇತ್ರಗಳ ಸಂಚರಿಸೀ– ಮಧ್ವ। ತೀರ್ಥದಲ್ಲವಗಾಹಿಸೀ
ಪಾರ್ಥಸಾರಥಿ ಕೃಷ್ಣನೊಲಿಸೀ–ಜಯ।ತೀರ್ಥ ಕಾಗಿನಿತಟದಿ ನೆಲೆಸೀ ॥
ಕಾರ್ತಸ್ವರಮಂದುಲೋಷ್ಠ ಸಮವೇನು। ತಾರ್ತಸಜ್ಜನಕೊರ್ವೆದು ಪ್ರೀತಿಲಿ
ಮೂರ್ತಿ ಗುರುಗೋವಿಂದವಿಠ್ಠಲನ। ವಾರ್ತೆ ಸಚ್ಚರಿತೆಯನು ಪೇಳಿದ ॥೩॥



## ೨೦೩

(ಉರಗಾದ್ರಿವಾಸವಿಠ್ಠಲಾಂಕಿತ) (ಪೂರ್ವಾಂಕಿತ-ಶ್ರೀವೆಂಕಟೇಶ)

ರಾಗ–ಕಲ್ಯಾಣಿ ಆದಿತಾಳ

ಜಯತೀರ್ಥ ಮುನಿವರ್ಯ
ದಯತೋರಿ ಪೊರೆಯಯ್ಯ ವಿಜಯಸಾರಥಿ ಪ್ರಿಯಾ ॥ಪ॥

ಶ್ರೀಶಯುನನಾವೇಶ ಮಹೇಶಪ್ರತಿಬಿಂಬ ಸು
ರೇಶ ಯತಿಕುಲಾಧೀಶ ಪಾಲಿಸಯ್ಯ
ಏನು ನಿನ್ನಯ ಕರುಣರಾಶಿ ಎಂತಿಹುದಯ್ಯಾ
ಆಸೆ ಸಲಿಸಲು ಮನೆಗೆ ಲೇಸಾಗಿ ನೀ ಬಂದೆ ॥೧॥

ಪಶುಪತಿಯ ಮತ ದಹಿಸಿ  ಅಸುಪತಿಯ ಮತ ಮೆರೆಸಿ
ವಸುಮತಿಯ ಸುರನಾಗಿ ಬಂದು ನಿಂದೆ
ಪಶುಪ್ರಾಯನೆಂದೆನ್ನ ಉದ್ಧರಿಸಲೋಸುಗದಿ
ಬಿಸಜಪದಪಾಂಸವನಿತ್ತೆ ॥೨॥

ಜಯಗುರುವೆ ಶ್ರೀವಿಜಯದಾಸರಲ್ಲೆನ್ನ ಮನೋ
ಜಯವು ಪುಟ್ಟಿಸಿದ ನಿನ್ನ ಕರುಣವೆಂತೋ
ಸೃಜಿಸಿ ತೋರಿದ ಸ್ವಪ್ನ ನಿಜವು ಆಗಲಿ ಎಂದು
ಬಿಜಯ ಮಾಡಿದೆ ನಿನ್ನ ನಿಜದಾಸರೊಡನೆ ॥೩॥

ಜಯಗುರುವೆ ನಿಮ್ಮ ಹೃದ್ಗುಹದಲ್ಲಿ ನ
ಲಿಯುತಿಹ ವಾಯ್ವಂತರ್ಗತ ಕೃಷ್ಣನ್ನ ತೋರೋ
ಜಯತು ಶ್ರೀವೇಣುಗೋಪಾಲಕೃಷ್ಣಮೂರ್ತೇ
ಜಯತು ಶ್ರೀವೇಣುಗೋಪಾಲನೆಂದೆನಿಸಯ್ಯ ॥೪॥

ಸೃಷ್ಟಿಗೆ ಬಂದು ನಾನೆಷ್ಟು ಜನ್ಮ ಕಳೆದೆ
ಪುಟ್ಟಿದೆನೊ ನಾನೀಗ ಈ ಜನ್ಮದೀ
ಪುಟ್ಟಲಿಲ್ಲವೊ ಜ್ಞಾನ-ಹರಿಗುರುಸ್ಮರಣೆಯ
ಲ್ಲಿಟ್ಟು-ಕಡೆಗಣ್ಣನೊಳಿಟ್ಟು ನೋಡಯ್ಯ ॥೫॥

ವಾದಿಮಸ್ತಕಭೇದಿ ಮೋದತೀರ್ಥರ ತತ್ತ್ವ
ಸಾಧಿಸಿದ ಸಾಧುವೆ ಸುಧೆಯನುಣಿಸಿ
ಭೇದಿಸಿ ವಾಗ್ಯುದ್ಧ ಯೂಥಪಗಳನೆಲ್ಲ
ಗೆದ್ದು ಸತ್ತತ್ತ್ವದಾ ಸಿಂಹನಾದವ ಮಾಡ್ದೆ ॥೬॥

ಮಧ್ವರಾಯರಿಗೆ ನೀ ಮುದ್ದು ಮೊಮ್ಮಗನಯ್ಯ
ಸದ್ವಿದ್ಯಗ್ರಂಥ ಭಾರವನೆ ವಹಿಸಿ
ಮುದ್ದು ತೊತ್ತನಿಸೀ-ಎತ್ತಾಗಿ ಸೇವಿಸಿ
ಯತಿಯಾಗಿ ನಿಂದ ತತ್ತ್ವಮುತ್ತಿನ ಖಣಿಯೇ ॥೭॥

ಇಳೆಯೊಳಗೆ ನಿನ್ನಂಥ ಕರುಣಾಳುಗಳ ಕಾಣೆ
ಅಳವಲ್ಲ ವರ್ಣಿಸಲು ನಿನ್ನ ಗುಣಗಳನು
ಕಳವಳಿಸಿ ಕ್ಷುದ್ರಾನ್ಯಕುಲಗಳನೆ ಕಳೆಯೊ
ಪಶ್ಚಿಮೋದಧಿವಾಸ ಯತಿಕುಲಾಧೀಶಾ ||೮||

ಸಲಹುವೆ ನಿನ್ನಯ ಕರುಣಕವಚ ತೊಟ್ಟವರ
ಪಾದಕಮಲದೊಳು ಇಹ ಮಧುಪನೆಂದೆನಿಸೂ
ನಿರುತ ದೃಢಭಕುತಿ ಶ್ರೀವೆಂಕಟೇಶನೊಳಿತ್ತು
ಪೊರೆಯೊ ಶ್ರೀಗುರುವರಾಗ್ರಣಿಯೆ ನಮೋ ಎಂಬೆ ||೯||

❀

## ೨೦೪

### (ರಮಾಕಾಂತವಿಠ್ಠಲಾಂಕಿತ)

ರಾಗ: ಶಂಕರಾಭರಣ ಛಾಪುತಾಳ

ಜಯರಾಯ–ಸದ್ಗುರುವರ್ಯ–ಜಯರಾಯ ||ಪ||

ಜಯರಾಯ ಜಾಯಾಪತಿ ಪ್ರಿಯಾ–ನೀ ಸ
ದ್ದಯದಿ ಪಾಲಿಸೋ ಕವಿಗೇಯಾ–ಪಾದ
ದ್ವಯಕ್ಕೆ ಮಣಿವೆ ಶುಭಕಾಯ-ಅನು
ನಯದಿ ಪಾಲಿಸೋ ಎನ್ನ ಜೀಯಾ ||ಅಹಾ||
ಜಯಿಸಿ ಮಾಯ್ಮತವನು ಭಯವ ಹರಿಸಿ ನೀ ಅ
ಭಯವಿತ್ತು ದ್ವಿಜರ ನಿಚಯವನ್ನು ಪೊರೆದೆಯೊ ||೧||

ಪ್ರಖ್ಯಾತ ಮಳಖೇಡಿಯಲ್ಲೀ–ಸಲೆ
ದಿಟ್ಟ ಟೀಕಾಕಾರನಾಗಿ ಅಲ್ಲೀ–ಮನ

ಸಿಟ್ಟಿಲೋಕದ ಕಾರ್ಯದಲ್ಲೀ-ಶ್ರಮ
ಪಟ್ಟು ಬಾಳುತಲಿರಲಲ್ಲೀ ||ಆಹಾ||
ಗುಟ್ಟತಿಳಿದ ಗುರುಶ್ರೇಷ್ಠ ಅಕ್ಷೋಭ್ಯರಿಂ
ಥಟ್ಟನಾಶ್ರಮಗೊಂಡು ಸೃಷ್ಟಿಯೊಳಗೆ ಮೆರೆದೇ ||೨||

ವಿದ್ಯಾರಣ್ಯರ ಕುವಿದ್ಯವನೂ-ಮುದದಿ
ಗೆದ್ದು ಅರಣ್ಯಕ್ಕೆ ಅದನೂ-ಅಟ್ಟಿ
ಅದ್ವೈತಮತವಾದಿಗಳನೂ-ಸದೆದು
ಶುದ್ಧವೈಷ್ಣವ ಜನಗಳನೂ ||ಆಹಾ||
ಶ್ರದ್ಧೆಯಿಂ ಪೊರೆಯಲು ಮಧ್ವಮುನಿಗಳ ಗ್ರಂಥಕ್ಕೆ
ಶುದ್ಧಟೀಕೆಯ ಮಾಡಿ ಉದ್ಧರಿಸಿದ ಮಹಿಮ ||೩||

ಮಧ್ವರಾಯರ ಅಂತರಂಗ-ಅರಿತ
ಶುದ್ಧಯತಿಯೆ ಕರುಣಾಪಾಂಗ-ನಿಮ್ಮ
ಪೊದ್ದಿಹ ಭಕುತರ ಸಂಗ-ಇತ್ತು
ಉದ್ಧರಿಸಲು ಭವಭಂಗ ||ಆಹಾ||
ಬುದ್ಧಿವಂತರೆ ನಿಮ್ಮ ಸದ್ದಯವಿದ್ದೊಡೆ
ಗೆದ್ದು ಅಜ್ಞಾನವ ಪದ್ಮನಾಭನ ಕಾಂಬೆ ||೪||

ತುತಿಸಲಾಪನೆ ನಾನು ನಿನ್ನ-ವರ
ಅತುಳಚರಿತೆ ಗುರುರನ್ನ-ಇನ್ನೀ
ಕ್ಷಿತಿಯೊಳು ಪಡಲಾರೆ ಬನ್ನ-ಮೇಲು
ಗತಿಯ ತೋರಿಸಿ ಪಾಲಿಸೆನ್ನ ||ಆಹಾ||
ಯತಿಶಿರೋಮಣಿ ಎನ್ನ ಹಿತದಿ ಕೈಪಿಡಿದೆತ್ತು
ತುತಿಪೆ ರಮಾಕಾಂತವಿಠ್ಠಲನ್ನ ನಿಜಭೃತ್ಯ ||೫||

*

೨೦೫

(ಶ್ರೀ ಕೃಷ್ಣವಿಠ್ಠಲಾಂಕಿತ)

ರಾಗ ಆದಿತಾಳ

(ವೃಂದಗಾನದಲ್ಲಿ)

ನಂಬಿ ಭಜಿಸಿರೋ–ಜನರೆಲ್ಲರೂ ನಂಬಿ–ಭಜಿಸಿರೋ ॥ಪ॥

ಅಂಬುಜಾಕ್ಷಪ್ರಿಯ–ನಮ್ಮ ಜಯರಾಯರಾ ॥ಅ॥

ಕಾಶಿ ಯಾತಕೇ–ಬಲು ಕ್ಲೇಶ–ಯಾತಕೇ
ಕಾಸು ಕಳೆದು ಕೊಂಡು ಅತಿಘಾಸಿ ಯಾತಕೇ
ಶ್ರೀಶನಂಘ್ರಿಭಜಕರಾದ–ವಾಸವೇಶರಿವರ ಪಾದ
ಆಶೆಯಿಂದ ಭಜಿಸಲು–ವಾಸುದೇವನೊಲಿವನು ॥೧॥

ನೇಮ ಯಾತಕೇ–ನಿಷ್ಠೆ ಯಾತಕೇ
ಹೋಮ ಯಾತಕೇ–ಕಷ್ಟ ಯಾತಕೇ
ಪ್ರೇಮದಿಂದಲಿ–ಇವರ ಭಜಿಸಲು
ತಾಮಸಗುಣಾ–ತಾನೇ ಓಡೋದು ॥೨॥

ಮಧ್ವಶಾಸ್ತ್ರದ–ಚಂದ್ರರಿವರು
ಅದ್ವೈತವಾದವ–ಗೆದ್ದ ಸಿಂಹರು
ಮಧ್ವರಾಯರ–ಮುದ್ದು ಮೊಮ್ಮಗ
ಸಿದ್ಧ ಸೇವಕರು–ಸುಧೆಯ ಕರ್ತರು ॥೩॥

ಇವರೆ ಧ್ಯಾನವು–ಜ್ಞಾನದಾಯಕ
ಇವರ ಪೂಜೆಯು–ಪಾಪನಾಶವು

ಇವರ ಸ್ಮರಣೆ-ಕಲಿಯುಭಂಜನೆ
ಇವರ ಸೇವೆಯು-ಮುಕ್ತಿ ಸೋಪಾನವು ||೪||

ಶ್ರೀಕಳತ್ರನಾ-ಆಜ್ಞೆಯಿಂದಲೀ
ನಾಕದಿಂದಲೀ-ಇಲ್ಲಿ ಬಂದರೂ
ಏಕಮನದಿ ಶರಣು ಹೋಗಲೂ
ಪಾಕಿನಾಶನಾ-ಪುಣ್ಯವೆಗ್ಗಳಾ ||೫||

ಮಳಖೇಡದೀ-ನೆಲೆಸಿ ಇಪ್ಪರೂ
ನಳಿನ ನಾಭನಾ-ಒಲಿಸುತನನುದಿನಾ
ನಲಿಸಿ ಮನದೊಳು-ವಲಿಸುವಾತನೆ
ಶೀಲವಂತನು-ಧನ್ಯಮಾನ್ಯನು ||೬||

ನರನ ವೇಷದೀ-ಸುರರ ಒಡೆಯನು
ಹರಿಯ ಕರುಣದಿ-ಮೆರೆಯುತಿರ್ಪರೂ
ಶರಣಜನರ ದುರಿತರಾಶಿಯ
ತರಿದು ಶೀಘ್ರದಿ-ಪೊರೆಯುತಿಪ್ಪರು ||೭||

ಎತ್ತಿನ್ವೇಷದೀ-ವಾತದೇವನಾ
ಪ್ರೀತಿ ಪಡೆದು-ಖ್ಯಾತರಾದರು
ಮತ್ತೆ ಯತಿಯಾಗಿ-ಕೀರ್ತಿಯಿಂದಲಿ
ಬಿತ್ತರಿಸಿದರು-ತತ್ವಶಾಸ್ತ್ರವ ||೮||

ಕಾಗಿಣೀನದೀ-ತೀರವಾಸರು
ವಿಗತರಾಗರು-ನಿತ್ಯತೃಪ್ತರು
ಜಾಗರೂಕದೀ-ಪೊಗಳಿ ಪಾಡಲು
ನಿಗಮವೇದ್ಯನು-ಬೇಗ ಪೊರೆವನು ||೯||

ಶೇಷಾವೇಶದೀ-ವಾಸಿಸುವರು
ಶೇಷಶಯನನಾ-ದಾಸರೀವರು

ಬೇಸರಿಲ್ಲದೇ–ಆಸೆ ತೊರೆದು
ದಾಸನೆನ್ನಲು–ಪೋಷಿಸುವರು ॥೧೦॥

ಕೆರೆಯ ಏರಿಯೂ-ಬಿರಿದು ಪೋಗಲೂ
ಮರುತ ದೇವನಾ–ಕರುಣದಿಂದಲೀ

ಮೊರೆಯ ಇಟ್ಟರೂ-ಇವರ ಅಡಿಗೇ
ಭರದಿ ಕರುಣದೀ–ಹರಿಯಸ್ತುತಿಸಿ
ಕರದಿ ಮುಟ್ಟಲೂ–ಏರಿ ನಿಂತಿತು ॥೧೧॥

ಯರಗೋಳದಾ–ಗುಹೆಯ ಒಳಗೇ
ಮರತದೇವನಾ–ಕರುಣದಿಂದಲೀ

ಪರಿಪರಿಯಲಿ-ಬರೆದು ಟೀಕೆಯ
ಕರೆದು ಸುರಿದರು-ತತ್ತ್ವಕ್ಷೀರವಾ ॥೧೨॥

ಇವರ ನಾಮವು-ವಿಜಯಸೂಚಕ
ಇವರ ಕೀರ್ತನೆ–ಭವಕೆ ಔಷಧ

ಇವರ ಕರುಣದಿ–ಅನಿಲನೊಲಿವನು
ಇವರ ಶಿಷ್ಯರೇ-ಅವನಿಶ್ರೇಷ್ಠರು ॥೧೩॥

ಸರ್ವಕ್ಷೇತ್ರದ-ಯಾತ್ರೆಯಾ ಫಲ
ಸರ್ವದಾನವ–ಮಾಡಿದ ಫಲ

ಇವರ ಪಾದವ-ನಂಬಿ ಭಜಿಸಲು
ತವಕದಿಂದಲಿ-ತಾನೆ ಬರುವುದು ॥೧೪॥

ಜಯತೀರ್ಥರ-ಹೃದಯವಾಸಿಯು
ವಾಯುಹೃದಯಗ–ಕೃಷ್ಣವಿಠ್ಠಲನು

ದಯದಿ ನುಡಿಸಿದಾ-ಪರಿಯ ಪೇಳಿದೆ
ಜೀಯ ಕೃಷ್ಣನೆ-ಸಾಕ್ಷಿ ಇದಕೆ ||೧೫||



೨೦೬

(ತಂದೆಶ್ರೀಪತಿವಿಠ್ಠಲಾಂಕಿತ)

(ವೃಂದಗಾನದಲ್ಲಿ)

ರಾಗ-ಯದುಕುಲಕಾಂಬೋಧಿ ಆದಿತಾಳ

ಟೀಕಾಕೃಜ್ಜಯರಾಯರ ಸೇವಿಸಿರೋ-ಸೌಖ್ಯದಿ ಜೀವಿಸಿರೋ ||ಪ||

ಆಕೈವಲ್ಯಾಪೇಕ್ಷಿಪ ಜನರುಗಳೂ-ಮರೆಯದೆ ಹಗಲಿರುಳೂ ||ಅ||

ಮಧ್ವಶಾಸ್ತ್ರಪೂರ್ಣಾಂಬುಧಿಸೋಮ-ಸದ್ಗುಣಗಣಧಾಮ
ವಿದ್ವಜ್ಜನಮನಕಮಲಕೆ ರವಿರಾಜ-ಅಕ್ಷೋಭ್ಯ ಕರಕಮಲಜ
ಅದ್ವೈತಮತ ಧ್ವಾಂತ ದಿವಾಕರನು-ರಾಮನ ಪಾದವನು
ಶುದ್ಧಧ್ಯಾನದಲ್ಲಿರುತಿಹ ಸುಖದಿಂದಾ-ಭಕುತೀಲಿ ತ್ವರದಿಂದಾ ||೧||

ವೃಂದಾವನ ಸಂದರುಶನ ಮಾತ್ರದಲೀ-ಅಘಗಳು ದೂರದಲೀ
ನಿಂದಿರದೆ ಓಡುವುವು ಸುಖವನ್ನೂ-ಸಾಗರದಂತಿನ್ನೂ
ಕುಂದದೆ ಕೊಡುವನು ಈ ನುಡಿ ಪುಸಿಯಲ್ಲ-ಕೇಳೆನ್ನ ಸೊಲ್ಲಾ
ಇಂದಿರೇಶನ ಸನ್ನಿಧಾನಪಾತ್ರಾ-ಅತಿ ಚಿತ್ರ ವಿಚಿತ್ರಾ ||೨||

ತಾಪಸಾರ್ಯಸುತಚರಣ ವಂಶಜಾತ -ಲೋಕವಿಖ್ಯಾತಾ
ಆಪತ್ತಾದರೂ ಇವರ ಪಾದಗತಿಯಾ-ಮಾಡಲು ನಿಜಗತಿಯಾ
ಆ ಪರಮಾತ್ಮನು ಕೊಡುವ ಅವಗೆ ಮುಂದೇ-ಎನ್ನನು ನೀ ತಂದೆ
ಶ್ರೀಪತಿವಿಠ್ಠಲನ ಪರಮಪ್ರಿಯರೆಂದೂ-ಮರೆಯದೆ ಎಂದೆಂದೂ ||೩||



|| ಶ್ರೀಃ ಹರಿಃ ಓಂ ||

# ಯತಿಪೀಳಿಗೆ

## ಭಾಗ ೮

## ಶ್ರೀಮದಾನಂದತೀರ್ಥಭಗವತ್ಪಾದರ ಶಿಷ್ಯರಾದ

## ಯತಿಚತುಷ್ಟಯರು

# ಶ್ರೀಅಕ್ಷೋಭ್ಯತೀರ್ಥರು

(ಕ್ರಿ. ಶ. ೧೩೫೦—೧೩೬೫)

ಪುಣ್ಯದಿನ : ಮಾರ್ಗಶೀರ ಬಹುಳ ಪಂಚಮೀ

ವೃಂದಾವನ ಸ್ಥಳ: ಮಳಖೇಡ

ಧ್ಯಾನಶ್ಲೋಕ:

ಶ್ರೀಮದ್ರಮಾರಮಣ ಸದ್ಗುರಿಪಾದಸಂಗೀ ವ್ಯಾಖ್ಯಾ
ನಿನಾದದಲಿತಾಖಿಲ ದುಷ್ಟದರ್ಪಂ
ದುರ್ವಾದಿವಾರಣ ವಿದಾರಣ ದಕ್ಷದೀಕ್ಷ
ಮಕ್ಷೋಭ್ಯತೀರ್ಥಮೃಗರಾಜಮಹಂ ನಮಾಮಿ ||೧||

(ಶ್ರೀಜಯತೀರ್ಥರು)

ಪದವಾಕ್ಯಪ್ರಮಾಣಜ್ಞಾನ್ ಪ್ರತಿವಾದಿಮದಚ್ಛಿದಃ ।
ಶ್ರೀಮದಕ್ಷೋಭ್ಯತೀರ್ಥಾಖ್ಯಾನುಪತಿಷ್ಠೇ ಗುರೂನ್ಮಮ ||

(ಶ್ರೀಜಯತೀರ್ಥರು)



೨೦೭

(ಪ್ರಾಣೇಶವಿಠ್ಠಲಾಂಕಿತ)

ರಾಗ–ಶಂಕರಾಭರಣ ಅಟತಾಳ

ರಕ್ಷಿಸೆನ್ನನು–ದಯಾಂಬುಧೇ–ರಕ್ಷಿಸೆನ್ನನು ||ಪ||

ರಕ್ಷಿಸೆನ್ನನು ಪಾಪ ಶಿಕ್ಷಿಸು ಕರುಣದಿ
ಪಕ್ಷಿವಾಹನಪ್ರಿಯ ಅಕ್ಷೋಭ್ಯಮುನಿಪ ||ಅ||

ಅನುಮಾನವಿಲ್ಲದೆ ಮಣಿದೆ ತವಾಂಘ್ರಿಗೆ
ಅನಘ ಶ್ರೀಮಾಧವಮುನಿಕರಜಾತ || ||೧||

ಜಯಮುನಿವಂದಿತ ಜಯವಂತ ನೀನೇವೆ
ದಯಮಾಡು ದುಃಖ ಬಯಲಾಗಲರಿಯೆ ||೨||

ಪ್ರಾಣೇಶವಿಠ್ಠಲನ ಧ್ಯಾನದೊಳಗೆ
ಮನ ತಾನಿರುವಂದದಿ ಪ್ರೇರಿಸು ಜವದಿ ||೩||



## ೨೦೮

### (ಅಂಕಿತ-ಕಾರ್ಪರನರಹರಿ)

**ರಾಗ-ಕಾಂಬೋಧಿ** **ಝಂಪೆತಾಳ**

ಶ್ರೀಮದಕ್ಷೋಭ್ಯತೀರ್ಥರ ದಿವ್ಯಚರಿತಂ
ಕಾಮಿತ ಪ್ರದವಹುದು ಶೃಣ್ವತಾಂ ಸತತವ್ ||ಪ||

ಈ ಮಹಿಯೊಳವತರಿಸಿ ಭೂಮಿಜಾ ಸಹಿತ ಶ್ರೀ
ರಾಮನಂಘ್ರಿದ್ವಯವ ಪೂಜಿಸುತಲಿ
ಭೂಮಿನಿರ್ಜರಜರಸ್ತೋಮವಂದಿತರಾಗಿ
ವ್ಯೋಮಕೇಶಾಂಶರೆಂದೆನಿಸಿ ಮೆರೆದಂಥ ||೧||

ಮೋದತೀರ್ಥರ ಮತಮಹೋದಧಿಗೆ ಪೂರ್ಣನು
ದೀಧಿತಿಯರೆಂದೆನಿಸಿ ದಿಗ್ವಲಯದಿ

ಭೇದಬೋಧಕ ಸೂತ್ರವಾದದಿಂದಲಿ ಮಹಾ
ವಾದಿ ವಿದ್ಯಾರಣ್ಯ ಯತಿವರನ ಜಯಿಸಿದ ||೨||

ವಿಠ್ಠಲನ ಪದಪದುಮಪಟ್ಟದರೆಂದೆನಿಸಿ
ಸ್ವಪ್ನಸೂಚಿತ ಚಂದ್ರಭಾಗತಟದಿ
ಶ್ರೇಷ್ಠ ಕುದುರೆಯನೇರಿ ನದಿಯ ಜಲ ಕುಡಿದವರ
ಇಷ್ಟರೆಸ್ಮುತ ಕರೆದುಕೊಟ್ಟರಾಶ್ರಮವ ||೩||

ಸೃಷ್ಟಿಯೊಳು ಮಧ್ವಮತ ಪುಷ್ಟಿಗೈಸುವರೆಂಬ
ದೃಷ್ಟಿಯಿಂದಿವರಿಗೆ ಸುಮುಹೂರ್ತದಿ
ಪಟ್ಟಗಟ್ಟಿದರು ಜಯತೀರ್ಥನಾಮವನಿಡುತ
ಕೊಟ್ಟರಾಜ್ಞೆಯನು ದಿಗ್ವಿಜಯ ಮಾಡಿರಿ ಎಂದು ||೪||

ದೇಶ ದೇಶದಿ ಬರುವ ಭೂಸುರೋತ್ತಮರ ಅಭಿ
ಲಾಷೆಗಳನೆಲ್ಲ ಪೂರೈಸಿ ಪೊರೆವ
ಶ್ರೀಶ ಕಾರ್ಪರ ಕ್ಷೇತ್ರವಾಸ ಅಶ್ವತ್ಥ ನರ-
ಕೇಸರಿಯ ನೊಲಿಸಿದ ಯತೀಶರಿವರೆಂದು ||೫||



## (೨) ಶ್ರೀಮಾಧವತೀರ್ಥರು

(ಕ್ರಿ.ಶ. ೧೩೩೩-೧೩೫೦)

ಪುಣ್ಯದಿನ-ಭಾದ್ರಪದ ಬಹುಳ ಅಮಾವಾಸ್ಯೆ

ವೃಂದಾವನ ಸ್ಥಳ-ಮಣೂರು

ಧ್ಯಾನಶ್ಲೋಕ :—

ಮಾಧವಾಂಘ್ರಿಯುಗಾಸಕ್ತಾ ಮಾಧವಾಖ್ಯಮುನೀಶ್ವರಾಃ ।
ಅಭ್ರಮರ್ಮಧ್ವತೀರ್ಥಂ ಯೇ ದುದುಸ್ತೇಽಭೀಷ್ಟಸಂತತಿಮ್ ॥



## ೨೦೯

## (ಪ್ರಾಣೇಶವಿಠ್ಠಲಾಂಕಿತ)

**ರಾಗ-ಸೌರಾಷ್ಟ್ರ** **ಏಕತಾಳ**

ನೋಡಿದೆ-ನಾ ಧನ್ಯನಿಂದಿಗೆ
ನೋಡಿದೆ ಗುರುಮಾಧವತೀರ್ಥರ ವೃಂದಾವನವನು ॥ಪ॥

ಗಂಗೇನು ಪ್ರಯೋಜನ ಏಳೆಯೊಳಗೆ ಬಾಹದಕೆ
ಪಿಂಗಳಗೇನು ಜ್ಞಾನಿಗಳಿಗೇನು
ತುಂಗಮಹಿಮೆಯಿಂದ ಅಜ್ಞಜನರ ಪಾಪ
ಹಿಂಗಿಸಬೇಕೆಂಬುದಲ್ಲದೆ-ಮನವೆ ॥೧॥

ನರಹರಿಗುರುಸುತವರದ ಅಕ್ಷೋಭ್ಯಮುನಿ
ಕರಪೂಜಿತಾರವಿಂದನಾಭರಲ್ಲಿ
ಧರಾಧರಜತೀರದಿ ಸತ್ಯಮುನಿಗಳಿಂದ
ನಿರುತಾರಾಧನೆ ಕೊಳುತಿರ್ಪರು-ಮನವೆ ॥೨॥

ಏನು ಇವರ ಬಣ್ಣಿಸಲು ಎನ್ನಿಂದೊಶವಲ್ಲ
ಆನತಜನರಿಗೆ ಕರುಣಿಸಿ
ಪ್ರಾಣೇಶವಿಠ್ಠಲನ ಧಾಮ ತೋರಿಸುವರು
ಕ್ಷೋಣಿಯೊಳಗಪ್ರತಿಮಮಹಿಮರು ॥೩॥



೨೧೦

(ಅಂಕಿತ - ಕಾರ್ಪರ ನರಕೇಸರಿ)

ರಾಗ–ಆನಂದಭೈರವಿ ಅಟ್ಟತಾಳ

ಪಾದಪದುಮವ ಭಜಿಸೋ–ಮಾಧವತೀರ್ಥರ ||ಪ||

ಮೇದಿನಿಯೊಳು ನಾಲ್ಕು ವೇದಗಳಿಗೆ ಭಾಷ್ಯ
ಸಾದರದಲಿ ರಚಿಸಿದ ಮೋದತೀರ್ಥರ ಸುತರ ||೧||

ಸೂರಿಜನರ ಪರಿವಾರ ಸೇವೆಯ ಕೊಳುತ
ಧಾರುಣಿಯೊಳಗೆ ಮಣೂರು ಪುರದಲಿ ಮೆರೆವರ ||೨||

ವೀಶಗಮನ ಚೆನ್ನ ಕೇಶವಾತ್ಮಕನಾದ
ಶ್ರೀಶ ಕಾರ್ಪರ ನರಕೇಸರಿಯನೊಲಿಸಿದವರ ||೩||



## (೩) ಶ್ರೀನರಹರಿತೀರ್ಥರು

(ಕ್ರಿ.ಶ. ೧೩೨೪–೧೩೩೩)

ಪುಣ್ಯದಿನ :-ಪುಷ್ಯಬಹುಳ ಸಪ್ತಮೀ

ವೃಂದಾವನ ಸ್ಥಳ :- ಹಂಪೆ (ಚಕ್ರತೀರ್ಥ)

ಧ್ಯಾನಶ್ಲೋಕ :

ಭೂದೇವಿತನಯಾಸ್ತ್ರರಕ್ಷ್ವೀಶ ಪದಮಾನಸಃ
ಸ್ವಹಯರ್ಾಖ್ಯ ಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ||

# ೨೧೧

## (ಪುರಂದರವಿಠ್ಠಲಾಂಕಿತ)

**ರಾಗ-ಮುಖಾರಿ** **ಝಂಪೆತಾಳ**

ನರಹರಿತೀರ್ಥರ ಮಹಿಮೆ ಕೇಳಿರೋ
ನರದೇಹವನ್ನು ಸಾರ್ಥಕ ಮಾಡಿರೋ ||ಪ||

ಕಾರ್ಯಸ್ಥಬ್ರಹ್ಮ ಮಾಡಿಸಿ ಪೂಜಿಸಿ ಕೊಡಲು
ಆರ್ಯ ಜಾಬಾಲಮುನಿಗೆ ಪ್ರಸನ್ನನಾಗಿ
ಭಾರ್ಯಾಸಹಿತ ಶರ್ಮಪೂಜಿಸಿ ಸೌಭರಿಗೆ ಕೊಡಲು
ಸೂರ್ಯವಂಶಕೆ ರಾಮಸೀತೆ ಬರಲು ||೧||

ಜಾಂಬುವಂತನು ಪೂಜಿಸಿ ವೇದಗರ್ಭಗೆ ಕೊಡಲು
ಕುಂಭೇಶ್ವರನ ಕೋಶದಲ್ಲಿ ಇರಲು
ಅಂಬುಜೋದ್ಭವನಲ್ಲಿ ನಿತ್ಯ ಪೂಜಿಸುತಿರಲು
ಜಂಭಾರಿಪುರವನೈದಿದನು ಅಜನಿಪ ||೨||

ಗುರುಆನಂದತೀರ್ಥರಿಂದ ಚತುರಾಶ್ರಮ ಸ್ವೀಕರಿಸಿ
ವರ ಗಗನನದಿ ತೀರದಿ ಗುಹ್ಯದೊಳಿರಲು
ಕರಿ ಬಂದು ಕೂಗುತಿರೆ ಕೇಳಿ ಹೊರಗೆ ಬರಲು
ಭರದಿ ಪಟ್ಟಾಭಿಷಿಕ್ತನಾಗಿ ರಾಷ್ಟ್ರದೊಳೊಪ್ಪಿದ ||೩||

ಆ ದೇಶಪದವಿ ಹನ್ನೆರಡುವರ್ಷ ಮೂರು ಮಾಸ
ಮೋದದಿಂದನುಭವಿಸಿ ರಾಜಪದವ
ಸಾದರದಿ ಪಿಂಗಾಶ್ವಿಜ ಶುದ್ಧ ಸಪ್ತಮಿ
ಆ ಧರಿಯ ರಾಜಪುತ್ರಗೆ ಇತ್ತ ಮಹಿಮ ||೪||

ರಾಜಪುತ್ರ ಪತ್ನಿ ನಿಮಗೆ ಬೇಕಾದ ವಸ್ತುವೈವುದೆನಲು
ಆ ಜನಪನ ಕೋಶದಲ್ಲಿ ಮಂದಾಸನದೊಳು
ರಾಜಿಸುತಿಪ್ಪ ಸೀತಾರಾಮಮೂರ್ತಿಗಳನು ತೆಗೆದುಕೊಂಡು
ವಾಜಿಯನೇರಿ ಕೂರ್ಮಕ್ಕೆ ಬಂದು ಪದ್ಮನಾಭರಿಗಿತ್ತನು ॥೫॥

ಪದುಮನಾಭಯತಿ ತಾನು ದಶಮತಿಗೆ ಅರ್ಪಿಸಲು
ಮುದದಿ ಮೂರು ಮಾಸದಿ ಹದಿಮೂರು ದಿನವು
ಮದನನಯ್ಯನ ಪೂಜಿಸಿ ಕೊಡಲು ತಾವು ಪೂಜಿ-
ಸಿದ ಆರು ವರುಷ ಇನ್ನೂರುತೊಂಭತ್ತುದಿನ ॥೬॥

ಗುರುಪದ್ಮನಾಭರಾಜ್ಞದಿಂದಲಿ ಒಂಭತ್ತು
ವರುಷ ಮ್ಯಾಲೈವತ್ತುಮೂರುದಿನವು
ಧರಣಿ ಜಯ ಮೂಲರಾಮನಂಘ್ರಿಯ ಭಜಿಸಿ
ಪುರಂದರವಿಠ್ಠಲನ ಪ್ರೀತಿ ಪಡೆದ ॥೭॥



## ೨೧೨

(ಅಂಕಿತ–ಕಾರ್ಪರನರಕೇಸರಿ)

ರಾಗ-ತೋಡಿ ಝಂಪೆತಾಳ

(ಯತಿಕುಲಾಂಬುಜ ನಿಜತರಣೀ-ಎಂಬಂತೆ)

ನರಿಹರಿತೀರ್ಥಯತಿವರ್ಯ–ಇಷ್ಟೆಂದೊರ್ಣಿಸಲೊಶವೆ
ನಿಮ್ಮಯ ದಿವ್ಯ ಚರಿಯ ॥ಪ॥

ಸುರವಿನುತಪದ ಹರುಪತೀರ್ಥರ
ಕರಕಮಲಸಂಜಾತರೆನಿಸುತ

ಧರೆಯೊಳಗೆ ಸಿರಿಸಹಿತ ರಾಮನ
ಕರೆದು ಧರೆಸುರಜನಕೆ ತೋರಿದ ॥೮॥

ಚರಿಸುತ ಬರಲು ಗಜಪುರದಿ ಪುರ
ದರಸನಿಲ್ಲದಿರೆ ಯೋಜಿಸುತ ಕರಿಕರದಿ
ವರಮಾಲಿಕೆಯ ಕೊಡಲಾಕ್ಷಣದೀ ಯತಿ
ವರರ ಕಂಠದಲಿ ಹಾಕಲು ಜವಸಭದಿ ॥

ಪುರಜನರ ಪ್ರಾರ್ಥನದಿ ದ್ವಾದಶ
ವರುಷ ಪ್ರಜನರನು ಪೊರೆದು ಕೋಶದೊ
ಳಿರುವ ಧರೆಜಾಸಹಿತ ರಾಮನ
ತರಿಸಿ ಪೊರಟರು ಕುದುರೆಯೇರುತ ॥೧॥

ಆ ಮಹಾಮುನಿವರು ತ್ವರದಿ ಬಂದು
ಶ್ರೀಮದಾನಂದತೀರ್ಥರ ಪದಯುಗದಿ
ಪ್ರೇಮವಂದನ ಪೂರ್ವಕದಿ ಸೀತಾ–
ರಾಮಮೂರ್ತಿಯನೊಪ್ಪಿಸಿದರು ಕರದೀ ॥

ಶ್ರೀಮನೋಹರನಂಘ್ರಿಯುಗಲವ
ಪ್ರೇಮದಿಂದಲಿ ಪೂಜಿಸುತಲಿರೆ
ಆ ಮಹಾತ್ಮರ ಕರೆದು ಕೊಟ್ಟರು
ನೇಮದಿಂದರ್ಚಿಸಿರಿ ಎನುತಲೀ ॥೨॥

ಭಾಸುರ ಹೇಮಮಂಟಪದಿ ನಿತ್ಯಾ
ಶ್ರೀಸೀತಾರಾಮನರ್ಚಿಪರು ವೈಭವದೀ
ಭೂಸುರಕೃತ ವೇದಘೋಷದಿ ಮತ್ತೆ
ವ್ಯಾಸಸೂತ್ರಗಳ ನಾಮಾವಳಿ ಪಠಣದಿ ॥

ದೇಶದೇಶಗಳಲ್ಲಿ ಚರಿಸುತ
ತೋಷತೀರ್ಥರ ಮತವ ಬೋಧಿಸಿ
ಶ್ರೀಶ ಕಾರ್ಪರವಾಸ ಸಿರಿನರ-
ಕೇಸರಿಗೆ ಪ್ರಿಯದಾಸರೆನಿಸಿದ ॥೩॥



## ೪- ಶ್ರೀ ಪದ್ಮನಾಭತೀರ್ಥರು

(ಕ್ರಿ.ಶ. ೧೩೧೭-೧೩೨೪)

**ಪುಣ್ಯದಿನ :—ಕಾರ್ತೀಕ ಕೃಷ್ಣ ಚತುರ್ದಶೀ**

**ವೃಂದಾವನ ಸ್ಥಳ :—ನವವೃಂದಾವನ**

**ಧ್ಯಾನಶ್ಲೋಕ :—**

ಶ್ರೀಮಧ್ವಸಂಸೇವನಲಬ್ಧಶುದ್ಧ ।
ವಿದ್ಯಾಸುಧಾಂಭೋನಿಧಯೋಽಮಲಾಯೇ ।
ಕೃಪಾಲವಃ ಪಂಕಜನಾಭತೀರ್ಥಾಃ ।
ಕೃಪಾಲವಸ್ಯಾನ್ಮಯಿ ನಿತ್ಯಮೇಷಾಮ್ ॥



೨೧೩

(ಪ್ರಾಣೇಶವಿಠಲಾಂಕಿತ)

**ರಾಗ-ವರಾಳಿ** **ಆಟತಾಳ**

ಒದಗಿ ಪಾಲಿಸೋ-ಭವಾಂಬುಧಿಯ ದಾಟಿಸೋ ॥ಪ॥

ಮದನಜಿತ ಭೂಸುರಶರಣ್ಯ
ಪದುಮನಾಭ ಯತಿವರೇಣ್ಯ ॥೬॥

ಸದ್ಯ ದೊಡ್ಡ ಮಾತು-ಅಪ್ರ-
ಬುದ್ಧ ನಾನು ನುಡಿಯ ಕೇಳಾ
ಮಧ್ವದ್ವೇಷಿಗಳಲಿ ಎನ್ನ
ವಿದ್ಯೆ ತೋರಿ ಬದುಕದಂತೆ ॥೧॥

ಒಡಲಿನಾಸೆಗಾಗಿ ಕಂಡ
ಕಡೆಗೆ ತಿರುಗಿ ಪ್ರಾಪ್ತಿಯೆಂಬು-
ದುಡುಗಿ ಪೋದಿ ಕೊನೆಗೆ ಮನೆಗೆ
ಮಿಡಿಕಿಕೊಳುತ ಬರುವಧಮನ ॥೨॥

ಹಾನಿ ಲಾಭ ಕ್ಲೇಶ ಮೋದ
ವೇಸು ಆವಕ್ಷಣಕೊದಗಲು
ಪ್ರಾಣೇಶವಿಠ್ಠಲ ಕರುಣೆಯಿಂದ
ತಾನೆ ಕೊಟ್ಟನೆಂಬ ಸುಮತಿ ॥ ಒದಗಿ ಪಾಲಿಸೋ ॥೩॥



## ೨೧೪

(ಅಂಕಿತ–ಶಾರ್ಪರನರಹರಿ)

ರಾಗ–ಕಮಾಚ್ ಆದಿತಾಳ

(ಮೂರುತಿಯನೆ ನಿಲಿಸೋ–ಎಂಬಂತೆ)

ಪದ್ಮನಾಭರ ಭಜಿಸೋ–ಹೇ ಮನುಜಾ ನೀ ॥ಪ॥

ಮಧ್ವರಾಯರ ಕರಪದ್ಮಸಂಭವರಾದ ॥ಅ॥

ಮತ್ತಮಾಯಿಗಳೆಂಬೊ ಹಸ್ತಿಗಣಕೆ ಪಂಚ-
ವಕ್ತ್ರರೆಂದೆನಿಸಿದ ಪೃಥ್ವೀಸುರಸೇವಿತ ॥೦॥

ಪ್ರೀತಿಯಿಂದಲಿ ಗೋಪೀನಾಥನರ್ಚಿಸಿ ಸುಖ-
ತೀರ್ಥಗ್ರಂಥಕೆ ಸುವ್ಯಾಖ್ಯಾತ್ರರೆಂದೆನಿಸಿದ ॥೨॥

ಧರೆಯೊಳು ಶರಣರ ಪೊರೆವ ಕಾರ್ಪರನರ-
ಹರಿಯನೊಲಿಸಿದಂಥ ಪರಮಮಹಿಮರಾದ ॥೩॥

॥ ಶ್ರೀ ಮಧ್ವೇಶಾರ್ಪಣಮಸ್ತು ॥



॥ ಶ್ರೀಃ ಹರಿಃ ಓಂ ॥

# ಯತಿಪೀಳಿಗೆ

## ಭಾಗ ೬

## ಶ್ರೀಮದಾನಂದತೀರ್ಥಭಗವತ್ಪಾದರು

# ಶ್ರೀಮನ್ಮಧ್ವಮುನಿ ಸ್ಮರಣೆ

**ಧ್ಯಾನ ಶ್ಲೋಕಗಳು :**

ಶ್ರೀಮದಾನಂದತೀರ್ಥಾಖ್ಯಾನ್ ಗುರೂನ್ವಿದ್ಯಾದಿವಾಕರಾನ್ ।
ವಂದೇ ಕುದೃಷ್ಟಿ ದುರ್ಭೋಧವ್ಯಾಸಸಿದ್ಧಾಂತದೀಪಕಾನ್ ॥೧॥

—(ಶ್ರೀಪದ್ಮನಾಭತೀರ್ಥರು-ಸನ್ನ್ಯಾಯರತ್ನಾವಲೀ)

ಸೋಽಯಂ ಗುಣಾಮೃತಮಹಾಬ್ಧಿರಿಹಾವತೀರ್ಣ ।
ಆನಂದತೀರ್ಥ ಭಗವಾನ್ ಪರಮೋ ಗುರುರ್ಮೇ ॥
ಯತ್ಪಾದಪದ್ಮರಜಸಾ ಶಿರಸಾಧೃತೇನ
ಸದ್ಯಃ ಪ್ರಯಾತಿ ಪರಿಶುದ್ಧಮಶೇಷಲೋಕಾಃ ॥೨॥

— (ಶ್ರೀತ್ರಿವಿಕ್ರಮಪಂಡಿತಾಚಾರ್ಯರು-ತತ್ತ್ವಪ್ರದೀಪ)

ಭೂತ್ವಾ ಕ್ಷೇತ್ರೇ ವಿಶುದ್ಧೇ ದ್ವಿಜಗಣನಿಲಯೇ ರೌಪ್ಯಪೀಠಾಭಿಧಾನೇ ।
ತತ್ರಾಪಿ ಬ್ರಹ್ಮಜಾತಿಸ್ತ್ರಿಭುವನ ವಿಶದೇ ಮಧ್ಯಗೇಹಾಖ್ಯಗೇಹೇ ॥
ಪಾರಿವ್ರಾಜಾಧಿರಾಜಃ ಪುನರಪಿ ಬದರೀಂ ಪ್ರಾಪ್ಯ ಕೃಷ್ಣಂ ಚ ನತ್ವಾ ।
ಕೃತ್ವಾ ಭಾಷ್ಯಾಣಿ ಸಮ್ಯಗ್ ವ್ಯತನುತ ಚ ಭವಾನ್
ಭಾರತಾರ್ಥಪ್ರಕಾಶಮ್ ॥೩॥

—(ಶ್ರೀತ್ರಿವಿಕ್ರಮಪಂಡಿತಾಚಾರ್ಯರು-ಶ್ರೀಹರಿವಾಯುಸ್ತುತಿ-
-ಶ್ಲೋಕ ೩೯)

ವ್ಯಾಪ್ತಿರ್ಯಸ್ಯ ನಿಜೇನಿಜೇನ ಮಹಸಾ ಪಕ್ಷೇ ಸಪಕ್ಷೇಸ್ಥಿತಿಃ ।
ವ್ಯಾವೃತ್ತಿಶ್ಚ ವಿಪಕ್ಷತೋಽಥ ವಿಷಯೇ ಸಕ್ತಿರ್ನವೈಬಾಧಿತೇ ॥
ನೈವಾಸ್ತಿ ಪ್ರತಿಪಕ್ಷಯುಕ್ತಿರತುಲಂ ಶುದ್ಧಂ ಪ್ರಮಾಣಂ ಸಮೇ ।
ಭೂಯಾತ್ತತ್ತ್ವವಿನಿರ್ಣಯಾಯ ಭಗವಾನಂದತೀರ್ಥೋಮುನಿಃ ॥೪॥

—(ಶ್ರೀಜಯತೀರ್ಥರು-ಶ್ರೀಮನ್ನ್ಯಾಯಸುಧಾ)

ಅಭ್ರಮಂ ಭಂಗರಹಿತಂ ಅಜಡಂ ವಿಮಲಂ ಸದಾ ।
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ॥೫॥
—(ಶ್ರೀವ್ಯಾಸರಾಜರು-ನ್ಯಾಯಾಮೃತ)

ಯೋ ವಿಪ್ರಲಂಭವಿಪರೀತಮತಿ ಪ್ರಭೂತ ।
ವಾದಾನ್ನಿರಸ್ಯ ಕೃತವಾನ್ಭುವಿ ತತ್ತ್ವವಾದಮ್ ॥
ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತಂ ।
ಆನಂದತೀರ್ಥಮುನಿವರ್ಯಮಹಂ ನಮಾಮಿ ॥೬॥

ತಂ ಪಾಣಿಪಲ್ಲವಂ ಬಾಹುಶಾಖಂ ಸದ್ದ್ವಿಜಸೇವಿತಂ ।
ವಿದ್ಯಾಹಾಸಲತಾಪುಷ್ಪಂ ಮಧ್ವಕಲ್ಪದ್ರುಮಂಭಜೇ ॥೭॥
—(ಶ್ರೀವಿಜಯೀಂದ್ರರು-ನ್ಯಾಯಮೃತಾಮೋದ)

ವಿಶ್ವಂ ಯಸ್ಯ ವಶೇ ಸರ್ವಮನಿಶಂ ಶಂಕರಾದಿಕಂ ।
ತಸ್ಯ ವ್ಯಾಯೋಸ್ತೃತೀಯಾಂಶಮಾಶ್ರಯೇ ಶಮವಾಪ್ತಯೇ ॥೮॥
—(ಶ್ರೀರಾಘವೇಂದ್ರತೀರ್ಥರು-ಶ್ರೀಮನ್ನ್ಯಾಯಸುಧಾಪರಿಮಳ)

ಉದ್ವೇಲವ್ಯಾಸತಂತ್ರವ್ಯವಸಿತನಿಖಿಲಾಭಿಜ್ಞ ಹೃದ್ಯಾನವದ್ಯಾ ।
ನಂತತ್ರಯ್ಯಂತಭಾವಪ್ರಕಟನಘಟನಾ ಸರ್ವತಂತ್ರ ಸ್ವತಂತ್ರೇ ॥
ಸಂವರ್ಣ್ಯೇ ಮಂತ್ರವರ್ಣ್ಯೈರನಿತರವಿಷಯಸ್ಪರ್ಶಭಿಃ ಪಾವಮಾನೇ ।
ರೂಪೇ ಲೋಕೈಕದೀಪೇ ಪ್ರಸರತು ಹೃದಯಂ ಮಾಮಕಂ
ಮಧ್ವನಾಮ್ನಿ ॥೯॥
—(ಶ್ರೀವಾದಿರಾಜತೀರ್ಥರು-ಗುರುಗುಣಸ್ತವನಮ್-ಶ್ಲೋಕ, ೪)

ಅಜ್ಞಾನೋತ್ಸಾದನಾರ್ಥಂ ಸುರವರವಚಸಾ ಸೂಚಿತೋ ರೂಪ್ಯಭರ್ತ್ರಾ ।
ಜಾತೋ ಮಧ್ಯಾಲಯಾರ್ಯಾದ್ಗುರುಮತಿತಪಸೋ ವಾಸುದೇವಾಭಿಧಾನಃ ॥

ಗೋದಾತ್ರೀ ಮೋಕ್ಷದಾತಾ ರಜತಪತಿಪಾದಸೇವಕೋ ಭೂತಭರ್ತ್ರಾ ।
ಮಾನ್ಯಃ ಪ್ರಾಣಃ ಕುಲಿತ್ಥೈರಪಿ ನಿಜಸಹಜಾರ್ಪಿತಃ ಪ್ರೀಯತಾಂ ಮೇ॥೧೦॥

(ಶ್ರೀಮನ್ನಾರಾಯಣಪಂಡಿತಾಚಾರ್ಯರು-ಶ್ರೀಮದಣುಮಧ್ವವಿಜಯ
-ಪ್ರಮೇಯನವಮಾಲಿಕಾ-ಶ್ಲೋಕ-೩)

ಬ್ರಹ್ಮಾಂತಾಗುರುವಃ ಸಾಕ್ಷಾದಿಷ್ಟಂ ದೈವಂ ಶ್ರಿಯಃಪತಿಃ ।
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ॥೧೧॥

ಕ್ಷಿತಿಯೊಳಗೆ ಮಣಿಮಂತ ಮೊದಲಾ ।
ದತಿ ದುರಾತ್ಮರು ಒಂದಧಿಕಏಿಂ ।
ಶತಿ ಕುಭಾಷ್ಯವ ರಚಿಸೆ ನಡುಮನೆಯೆಂಬ ಬ್ರಾಹ್ಮಣನ ॥
ಸತಿಯ ಜಠದೊಳವತರಿಸಿ ಭಾ ।
ರತಿರಮಣ ಮಧ್ವಾಭಿಧಾನದಿ ।
ಚತುರದಶಲೋಕದಲಿ ಮೆರೆದಪ್ರತಿಮಗೊಂದಿಸುವೆ ॥೧೨॥

(ಶ್ರೀಮದ್ಹರಿಕಥಾಮೃತಸಾರ-ಮಂಗಳಾಚರಣಸಂಧಿ-ಪದ್ಯ ೮)

ಪಂಚಭೇದಾತ್ಮಕ ಪ್ರಪಂಚಕೆ ।
ಪಂಚರೂಪಾತ್ಮಕನೆ ದೈವಕ ।
ಪಂಚಮುಖ ಶಕ್ರಾದಿಗಳು ಕಿಂಕರರು ಶ್ರೀಹರಿಗೆ ॥
ಪಂಚವಿಂಶತಿ ತತ್ತ್ವ ತರತಮ ।
ಪಂಚಿಕೆಗಳನು ಪೇಳ್ದ ಭಾವಿ ವಿ ।
ರಿಂಚಿಯೆನಿಪಾನಂದತೀರ್ಥರ ನೆನೆವೆನನುದಿನವು ॥೧೩॥

(ಶ್ರೀಮದ್ಧರಿಕಥಾಮೃತಸಾರ-ಮಂಗಳಾಚರಣ ಸಂಧಿ-ಪದ್ಯ ೯)

ಏಕವಿಂಶತಿಮತ ಪ್ರವರ್ತಕ ।
ಕಾಕುಮಾಯ್ಗಳ ಕುಹಕಯುಕ್ತಿ ನಿರಾ ।
ಕರಿಸಿ ಸರ್ವೋತ್ತಮನು ಹರಿಯೆಂದು ಸ್ಥಾಪಿಸಿದ ॥

ಶ್ರೀಕಳತ್ರನ ಸದನ ದ್ವಿಜಪ ಪಿ।
ನಾಕಿಸನ್ನುತಮಹಿಮ ಪರಮ ಕೃ।
ಪಾಕಟಾಕ್ಷದಿ ನೋಡು ಮಧ್ವಾಚಾರ್ಯ ಗುರುವರ್ಯ ॥೧೪॥

(ಶ್ರೀಮದ್ಹರಿಕಥಾಮೃತಸಾರ-ಕಲ್ಪಸಾಧನಸಂಧಿ-ಪದ್ಯ-೧)

॥ ಶ್ರೀಮಧ್ವೇಶಾರ್ಪಣಮಸ್ತು ॥

# ಶ್ರೀಮನ್ಮಧ್ವಾಚಾರ್ಯರು

(ಕ್ರಿ.ಶ. ೧೨೩೮-೧೩೧೭)

ಬದರಿಕಾಶ್ರಮಕ್ಕೆ ಪ್ರಯಾಣ :—ಶ್ರೀಪಿಂಗಲನಾಮಸಂವತ್ಸರದ ಮಾಘ ಶುದ್ಧ ನವಮೀ (೧೧-೧-೧೩೧೭)

## ಶ್ರೀಮದಾನಂದತೀರ್ಥಭಗವತ್ಪಾದರ ಪರವಾದ ಕೀರ್ತನೆಗಳ ಸಂಗ್ರಹಮಾಲೆ

೨೧೫

(ಅಂಕಿತ–ರಂಗವಿಠ್ಠಲ–ಶ್ರೀಪಾದರಾಜ ವಿರಚಿತ)

ರಾಗ–ನಾದನಾಮಕ್ರಿಯೆ ಅಟತಾಳ

ಮರುದಂಶರ ಮತ ಪಿಡಿಯದೆ ಇಹ
ಪರದಲ್ಲಿ ಸುಖವಿಲ್ಲವಂತೆ ॥ಪ॥

ಅರಿತು ವಿವೇಕದಿ ಮರೆಯದೆ ನಮ್ಮ
ಗುರುರಾಯರ ನಂಬಿ ಬದುಕಿರೋ ॥ಅ॥

ಕ್ಷೀರವ ಕರೆದಿಟ್ಟಮಾತ್ರದಿ ಸಂ-
ಸ್ಕಾರವಿಲ್ಲದೆ ಘೃತವಾಗದಂತೆ

ಸೂರಿಜನರ ಸಂಗವಿಲ್ಲದೆ ಸಾರ
ವೈರಾಗ್ಯಭಾಗ್ಯವುಟ್ಟದಂತೆ ||೧||

ಉಪದೇಶವಿಲ್ಲದ ಮಂತ್ರ ಏಸು
ಜಪಿಸಲು ಫಲಗಳ ಕೊಡದಂತೆ
ಉಪವಾಸವ್ರತಗಳಿಲ್ಲದೆ ಜೀವ
ತಪಸಿಯೆನಿಸಿಕೊಳ್ಳಲರಿಯನಂತೆ ||೨||

ಸಾರ ಮಧ್ವಶಾಸ್ತ್ರವೋದದೆ ಗುರು
ತಾರತಮ್ಯ ಜ್ಞಾನವುಟ್ಟದಂತೆ
ಶ್ರೀರಂಗವಿಠ್ಠಲನ ಭಜಿಸದೆ ಮುಂದೆ
ಪರಮಗತಿ ದೊರಕೊಳ್ಳದಂತೆ ||೩||



೨೧೬

(ಅಂಕಿತ-ಶ್ರೀಕೃಷ್ಣ-ಶ್ರೀವ್ಯಾಸರಾಜ ವಿರಚಿತ)

ರಾಗ-ಕಾಂಬೋಧಿ ಝಂಪೆತಾಳ

ಆರು ನಿನಗಿದಿರಧಿಕ ಧಾರುಣಿಯೊಳಗೆ ||ಪ||

ಸಾರಶಾಸ್ತ್ರವನೊರೆದ ಸರ್ವಜ್ಞಮುರಾಯ ||ಅ||

ಆರೊಂದು ವೈರಿಗಳ ತರಿದು ವೈಷ್ಣವರಿಗೆ
ಆರೆರಡು ಊರ್ಧ್ವಪುಂಡ್ರಗಳನಿಡಿಸಿ
ಆರು ಮೂರರಮೇಲೆ ಮೂರಧಿಕಕುಮತಗಳ
ಬೇರೊರಸೆ ಕಿತ್ತೊಮ್ಮೆ ಬಿಸುಟಂಥ ಧೀರ ||೧||

ಆರುನಾಲ್ಕು ತತ್ತ್ವದಭಿಮಾನಿಗಳಿಗೊಡೆಯ
ಮಾರುತನ ಮೂರನೆಯ ಅವತಾರನೆ
ಆರೈದು ಮೇಲೆರಡು ಅಧಿಕಲಕ್ಷಣವುಳ್ಳ
ಮೂರುತಿಯೊಳೊಪ್ಪುತಿಹ ಮುನಿವರೇಣ್ಯ ॥೨॥

ಆರಾರು ಮೇಲೊಂದು ಅಧಿಕಲೆಕ್ಕದಗ್ರಂಥ-
ಸಾರವನು ರಚಿಸಿ ಸಜ್ಜನರಿಗಿತ್ತು
ಪಾರಮಾರ್ಥಿಕಭೇದ ಪಂಚಕವ ಸ್ಥಾಪಿಸಿದೆ
ಧೀರ ಶ್ರೀಕೃಷ್ಣನ ದಾಸರೊಳು ಧೊರೆಯೆ ॥೩॥

**ಅರ್ಥವಿವರಣೆ :—**

**ಆರೊಂದು ವೈರಿಗಳ**=ಕುಲ, ಯೌವ್ವನ, ಸ್ತ್ರೀ, ಅನ್ನ, ಧನ, ವಿದ್ಯಾ, ಉದ್ಯೋಗವೆಂಬ (೬+೧=೭) ಸಪ್ತಮದಗಳನ್ನು, **ಆರೆರಡು ಊರ್ಧ್ವಪುಂಡ್ರಗಳ** = ದ್ವಾದಶನಾಮಗಳು (೬×೨ = ೧೨), **ಆರು ಮೂರರಮೇಲೆ ಮೂರಧಿಕಕುಮತಗಳ**=ಇಪ್ಪತ್ತೊಂದು ದುರ್ಭಾಷ್ಯಗಳು (ಆರುಮೂರು=೬×೩=೧೮. ಇದರಮೇಲೆ ಮೂರಧಿಕ=೧೮+೩=೨೧) **ಆರುನಾಲ್ಕು ತತ್ತ್ವಗಳ**=೨೪ ತತ್ತ್ವಗಳು(ಆರುನಾಲ್ಕು=೬×೪=೨೪). **ಆರೈದು ಮೇಲೆರಡು ಅಧಿಕಲಕ್ಷಣ**=೩೨ ಲಕ್ಷಣಗಳಿಂದ ಉಪೇತ ರಾದ (ದ್ವಾತ್ರಿಂಶತಿಲಕ್ಷಣಗಳು) (ಆರೈದು=೬×೫=೩೦. ಮೇಲೆರಡು ಅಧಿಕ=೩೦+೨=೩೨), **ಆರಾರು ಮೇಲೊಂದು ಅಧಿಕಲೆಕ್ಕ**=೩೭ ಸಂಖ್ಯಾಕವಾದ ಸರ್ವಮೂಲಗ್ರಂಥಗಳು (ಆರಾರು = ೬ × ೬ = ೩೬ ಮೇಲೊಂದಧಿಕ = ೩೬+೧= ೩೭), **ಭೇದಪಂಚಕವ**=ಪಂಚಭೇಧಗಳು. (ಈಶ-ಜೀವಭೇಧ, ಈಶ-ಜಡಭೇಧ, ಜೀವ-ಜೀವ ಭೇಧ, ಜಡ-ಜಡ ಭೇದ ಮತ್ತು ಜಡ-ಜೀವಭೇದ)



## ೨೧೭

### (ಹಯವದನಾಂಕಿತ-ಶ್ರೀವಾದಿರಾಜ ವಿರಚಿತ)

ರಾಗ–ಮೋಹನ ಮಿಶ್ರಛಾಪುತಾಳ

ಈತನೇ ಕಾಣಿರೊ ಮಧ್ವಮುನಿ ॥ಪ॥

ಪರಿಪರಿ ಶ್ರುತಿಗಳೆಂಬ ಗುಹೆಗಳಲ್ಲಿ ಕೇ–
ಸರಿಯಂತೆ ಚರಿಸುತ್ತ
ಹರಿಯ ಸರ್ವೋತ್ತಮನೆಂಬ ಘೋಷಗಳಿಂದ
ದುರುಳವಾದಿಗಳೆಂಬ ನರಿಗಳೋಡಿಸಿದಾತ ॥೧॥

ಸಕಲಾಗಮಗಳೆಂಬ ಶರಧಿಯೊಳಗೆ
ಯುಕುತಿಯಲಿ ಮಥಿಸಿ
ಅಕಳಂಕ ಶ್ರೀಹರಿಯೆಂಬ ರತ್ನವ ಕಂಡು
ಮುಕುಟದೊಳಗಿಟ್ಟು ಲೋಕದಿ ಮೆರೆದಾತ ॥೨॥

ವೇದಸಾರವೆಂಬ ಈಶತತ್ತ್ವವಾದ–
ಸುಧೆಯ ಕಲ್ಪಿಸಿಕೊಂಡು
ಆದಿಮೂರುತಿ ಶ್ರೀಹಯವದನನ ದಿವ್ಯ–
ಪಾದಸೇವಕನಾದ ಮಧ್ವಮುನಿಯೆಂಬಾತ ॥೩॥



## ೨೧೮

## (ಪುರಂದರವಿಠ್ಠಲಾಂಕಿತ)

ರಾಗ-ಆನಂದಭೈರವಿ ಏಕತಾಳ

ಇದಿರ್ಯಾರೋ ಗುರುವೇ ಸಮರ್ಯಾರೋ ||ಪ||

ಮದನಜನಕಪ್ರಿಯ ಗುರುಮಧ್ವರಾಯಾ ||ಅ||

ಸನ್ನುತಮಹಿಮ ಪ್ರಸನ್ನವದನ ನಿನ-
ಗನ್ಯನಲ್ಲವೋ ನೀನೆನ್ನ ರಕ್ಷಿಸಬೇಕೊ
ನಿನ್ನ ನೋಡಿದವರು ಧನ್ಯರಾಗುವರು
ಎನ್ನ ದಯಾಮೂರ್ತಿ ಮನ್ನಿಸಿ ನೋಡೋ ||೧||

ದುರ್ಜನರನು ಗರ್ಜನದಿಂದ ಓಡಿಸಿ
ಸಜ್ಜನರನು ಸಂರಕ್ಷಿಸಿದಾತನೆ
ಈ ಜಗದಲ್ಲಿ ಮಧ್ಯಗೇಹರ ಪತ್ನಿಯ
ಪೂಜ್ಯ ಜಠರದಿ ಜನಿಸಿದ ಧೀರ ||೨||

ವೇದಶಾಸ್ತ್ರಗಳಿಂದ ಮಾಯಿಗಳ ಖಂಡಿಸಿ
ಸಾಧಿಸಿ ಹರಿಯೆ ಸರ್ವೋತ್ತಮನೆಂದು
ಮೋದಭರಿತವಾದ ದಿವ್ಯಶಾಸ್ತ್ರವ ಮಾಡಿದ
ಮೋದತೀರ್ಥ ಪುರಂದರವಿಠ್ಠಲದಾಸ ||೩||



## ೨೧೯

### (ವಿಜಯವಿಠ್ಠಲಾಂಕಿತ)

ರಾಗ–ಕಾಂಬೋಧಿ ಝಂಪೆತಾಳ

ಮಧ್ವರಾಯರ ಕರುಣ ಪಡೆಯದವ ಧರೆಯೊಳಗೆ
ಇದ್ದರೇನು ಇಲ್ಲದಿದ್ದರೇನು ||ಪ||

ಮಧ್ವಮತವೇ ಮತವು ಸಕಲಶ್ರುತಿಸಮ್ಮತವು
ಮಧ್ವರಾಯರ ಧ್ಯಾನ ಅಮೃತಪಾನ
ಮಧ್ವರಾಯರ ಲೀಲೆ ನವರತುನದಮಾಲೆ
ಮಧ್ವರಾಯರ ಸ್ಮರಣೆ ಕುಲಕೋಟಿ ಉದ್ಧರಣೆ ||೧||

ಮಧ್ವರಾಯರ ಕಥಾ ಕೇಳಲು ದುರಿತಹತ
ಮಧ್ವರಾಯರ ಭಕುತಿ ಮಾಡೆ ಮುಕುತಿ
ಮಧ್ವರಾಯರ ಸ್ತೋತ್ರ ಮಾಡಿದವ ಸತ್ಪಾತ್ರ
ಮಧ್ವರಾಯರ ಭಜನೆ ದುಷ್ಕರ್ಮತ್ಯಜನೆ ||೨||

ಮಧ್ವರಾಯರದಾಸನಾದವನೆ ನಿರ್ದೋಷ
ಮಧ್ವರಾಯರಭಂಟ ಜಗಕೆ ನೆಂಟ
ಮಧ್ವರಮಣ ವಿಜಯವಿಠ್ಠಲ ಕಿಂಕರರಾದ
ಮಧ್ವರ ಕಾರುಣ್ಯ ಪಡೆದವನೆ ಧನ್ಯ ||೩||



## ೨೨೦

### (ಗೋಪಾಲವಿಠ್ಠಲಾಂಕಿತ)

ರಾಗ-ಕಲ್ಯಾಣಿ ಝಂಪೆತಾಳ

ಆದರಿಸೋ ಆದರಿಸೋ ಆಗಮಪ್ರತಿಪಾದ್ಯ
ಮೋದತೀರ್ಥಪೂರ್ಣಬೋಧಾಚಾರ್ಯ ॥ಪ॥

ಮುನಿಕುಲೋತ್ತಮ ಶಿರೋರತುನ ಕಾಂಚನವರ್ಣ
ಘನಜ್ಞಾನ ಪರಿಪೂರ್ಣ ಶುಭಗುಣಾರ್ಣ
ಅನಿಮಿಷರ ಗುರುವೆ ಅನಿಮಿತ್ತಬಂಧೂ ದಯಾಸಿಂಧೂ
ಸನಕಾದಿವಂದ್ಯನೆ ಸರ್ವಜ್ಞರಾಯಾ ॥೧॥

ಶಕುತವ್ಯಕುತಾವ್ಯಾಪ್ತಾ ಭಕುತಜನಕೆ ಆಪ್ತಾ
ಭಕುತಿನಿಧಿ ಎಂಬೋ ಬಹುಭಾಗ್ಯಭರಿತಾ
ಭಕುತಿರಹಿತ ನಾನಲ್ಲ ಭಕುತಕಾಮಧೇನು
ಶುಕುತ ಶೋಣಿತರಹಿತ ಸುಖತೀರ್ಥರಾಯ ॥೨॥

ನಂಬಿದವರಿಗೆ ಮಿತ್ರ ಡಂಭಜನರಿಗೆ ಶತ್ರು
ಹಂಬಲಿಸೋ ಜನಕೆ ಹರುಷಾಂಬುಧಿಯು
ಬಿಂಬಮೂರುತಿ ಗೋಪಾಲವಿಠ್ಠಲನ ಪಾ-
ದಾಂಬುಜಕೆ ಅನುದಿನ ತುಂಬೆ ನಾ ಕಾಂಬೆ ॥೩॥



## ೨೨೧

## (ವೇಣುಗೋಪಾಲವಿಠ್ಠಲಾಂಕಿತ)

ರಾಗ–ನಾಟಿ ಝಂಪೆ ತಾಳ

ನಮೋನಮೋ ಹರಿಪ್ರಿಯ ನಮೊನಮೋ ಸುರಗೇಯ
ನಮೊನಮೋ ಗುರುರಾಯ ಮಧ್ವಮುನಿ ಜೀಯಾ ॥ಪ॥

ಧರೆಗೆ ಭಾರವಾಗಿ ಚರಿಸುತಿರೆ ಮಾಯಿಗಳು
ಧರಿಸಲಾರದೆ ಧರಣಿ ಸರಸಿಜೋದ್ಭವಗೆ
ಮೊರೆಯಿಡಲು ಅಜನಾಗ ಹರಸುರರ ಸಹವಾಗಿ
ಹರಿಯ ಸದನವ ಸಾರಿ ಅರುಹಿದನು ಇದನೆಲ್ಲ ॥೧॥

ಕಾವನಯ್ಯನು ಮಸುಧೆಭಾವವನು ತಿಳಿದನಿಲ
ದೇವನೇ ನಿನಗೆ ಆಜ್ಞೆಯನೀಯಲು
ದೇವ ನೀನವತರಿಸಿ ಪಾವನವ ಮಾಡಿ ಸ
ಜ್ಜೀವಿಗಳ ಪೊರೆದೆ ದುರ್ಜೀವಿಗಳ ನೀ ಮುರಿದೆ ॥೨॥

ಕಾಮವನು ಕಡಿದು ಸನ್ನೇಮವನು ಹಿಡಿದು ಬಹು
ಸೀಮೆಯೊಳು ವಾದಿಗಳ ಸ್ತೋಮ ತರಿದು
ಹೇಮಕಚ್ಚುಲ ವೇಣುಗೋಪಾಲವಿಠ್ಠಲನ
ನಾಮಸುಧೆ ಸುಜನರಿಗೆ ಪ್ರೇಮದಲಿ ಸವಿಯಿತ್ತೆ ॥೩॥



## ೨೨೨

### (ಪ್ರಾಣೇಶವಿಠ್ಠಲಾಂಕಿತ)

# ಶ್ರೀಮಧ್ವರಾಯರಸುವ್ವಾಲೆ

ಸುವ್ವೀಪದ ಏಕತಾಳ

ಸುವ್ವಾಲೆ ಸುವ್ವಿ ಸುವ್ವಾಲೆ ||ಪ||

ಗುರು ಮಧ್ವರಾಯರ ಭಾಗ್ಯ
ಹರಮುಖ್ಯನಿರ್ಜರರಿಂದ ವರ್ಣಿಸಲಸದಳವಮ್ಮ ||ಅ.ಪ||

ಇಂದಿರೆ ಮೂರುರೂಪದಿಂದ ತಾನೆ ಪಡೆದಳು ।
ಎಂದು ಪೇಳುವುದಾವೇದ || ಸುವ್ವಿ ||
ಮಂದಮತಿಗಳಿವರ ಮಂದಿಯಂತೆ ತಿಳಿದು
ಅಂಧಃಕೂಪದೊಳು ಬೀಳುವರೆ || ಸುವ್ವಿ ಸುವ್ವಾಲೆ || ||೧||

ನೂರಾತೊಂಭಂತೆಂಟುಃಕಲ್ಪ ।
ಘೋರ ತಾಪಸುಮಾಡಿ ಮೂರುಃರೂಪವೀಗಾದನೆ || ಸುವ್ವಿ ||
ಮೀರೆ ಈ ಕಲ್ಪವನು ವಾರಿಜಾಸನನಾಗಿ
ಈರೇಳು ಲೋಕವಾಳುವನೆ || ಸುವ್ವಿಸುವ್ವಾಲೆ || ||೨||

ಎಪ್ಪತ್ತೊಂದು ಮಹಾಯುಗ
ಇಪ್ಪ ಒಬ್ಬೊಬ್ಬ ಮನು ಅಪಪ್ಪ ಬಹಳಾಯುಃಪಂಬೋರೊ || ಸುವ್ವಿ ||
ಸುಪ್ರಸಿದ್ಧವಾದಿ ದ್ವಿಸಪ್ತಮನುವು
ಶ್ರುತಸೋಮನಪ್ಪನಿಗೊಂದೇ ದಿವಸವೆ || ಸುವ್ವಿ ಸುವ್ವಾಲೆ || ||೩||

ಈ ರೀತಿನಾಮದಿಂದ ನೂರು ವ-
ತ್ಸರ ಬಾಳಿ ನಾರಾಯಣನ ಭಜಿಸುವಾ ॥ ಸುವ್ವಿ ॥
ಘೋರ ಪ್ರಳಯಕಾಲಕ್ಕು ಮಾರಮಣನ ದಯದಿಂದ
ಬಾರದಜ್ಞಾನವೀತಂಗೆ ॥ ಸುವ್ವಿ ಸುವ್ವಾಲೆ ॥ ॥೪॥

ಈತನಾಳಿಕೆಯೊಳು ಮೂತೊಂಭತ್ತು ಕಲ್ಪಕೆ
ಭೂತನಾಥನಿಗೆ ಅಪರೋಕ್ಷ ॥ ಸುವ್ವಿ ॥
ಆತನಾರಭ್ಯನಾರನಾಗಪರ್ಯಂತಪರೋಕ್ಷ
ನೀತಕಲ್ಪಗಳಲ್ಲಿಹವು ॥ ಸುವ್ವಿ ಸುವ್ವಾಲೆ ॥ ॥೫॥

ಎಲ್ಲ ದೇವರು ನಿತ್ಯದಲಿ ಬಂದು ಬಂದೀತ-
ನಲ್ಲಿ ಉಪದೇಶ ಕೊಂಡಾರೆ ॥ ಸುವ್ವಿ ॥
ಖುಲ್ಲ ಮಾಯಿಸಮೂಹ ಗೆಲ್ದು ವೇದವ್ಯಾಸ-
ನಲ್ಲಿ ಅದ್ಯಾಪಿ ಇಹರೇ ॥ ಸುವ್ವಿ ಸುವ್ವಾಲೆ ॥ ॥೬॥

ಪಾನೀಯಜಾಜಾಂಡದೊಳು
ನಾನಾಜೀವರಿಗೆ ಚೇತನೀತನಿಂದಲೆಯೇ ॥ ಸುವ್ವಿ ॥
ಏನು ಪೇಳಲಮ್ಮಾ ಈ ಪ್ರಾಣಿಯೊಲಿದರೆ ಶ್ರೀ
ಪ್ರಾಣೇಶವಿಠ್ಠಲನೊಲಿದಂತೆ ॥ ಸುವ್ವಿ ಸುವ್ವಾಲೆ ॥ ॥೭॥



## ೨೨೩

### (ವೆಂಕಟೇಶವಿಠ್ಠಲಾಂಕಿತ)

ಭಾರತೀರಮಣ ಸುರವಿನುತ ಚರಣ ॥ಪ॥

ಭಾರತೀರಮಣ ಸುಜನಕುಲಕರುಣ ॥ಅ॥

ನೀರಜಭವಾಂಡದಿ ಸಮೀರ ನಿನ್ನ ಸರಿಯಾದ
ವರಗಾಣೆನೋ ದೇವ ಬಾರಿಬಾರಿಗೆ
ಆರಾಧಿಪ ಬುಧಪರಿವಾರಸೇವ್ಯನು
ಪಾರುಗಾಣೆಸಯ್ಯ ಭೋಗಪುರದೊಳಗಿರುತಿಪ್ಪ ಭಾರತೀರಮಣ ॥೧॥

ಎಂದಿನಾ ಸುಕೃತವೊ ಕಣ್ಣಿಗೆಂದಿಗೋ ನಿಮ್ಮ ಪಾದಾರ
ವಿಂದ ನೋಡಿದೆ ಜ್ಞಾನಾನಂದಚರಿತ
ಮುಂದಾದರಿನ್ನು ಶ್ರೀಮದಾನಂದತೀರ್ಥರ ಮನ
ಪೊಂದಿಸಬೇಕೆಂದು ನಿನಗೊಂದಿಸಿ ಬೇಡುವೆನಯ್ಯ ॥೨॥

ದೇಶದೇಶದಿಂದ ಬಂದ ಭೂಸುರತತಿಗೆ ಮನ
ದಾಸೆಯ ಪೂರೈಪೆನೊಂಬೋ ಸೂಸಿನಿಂದಲಿ
ಈ ಸಮಯದಿ ಬಂದು ಪ್ರಾಣೇಶ ನೀಪೋಷಿಸಯ್ಯ
ವಾಸವಾದಿವಂದ್ಯ ವೆಂಕಟೇಶವಿಠಲನ ದಾಸ ಭಾರತೀರಮಣ ॥೩॥



## ೨೨೪

(ಅಂಕಿತ–ನಾಮಗಿರಿ ನೃಹರಿ) (ಶ್ರೀವಿದ್ಯಾರತ್ನಾಕರತೀರ್ಥರ ಕೃತಿ)

ರಾಗ-ದೇವಗಾಂಧಾರ ರೂಪಕತಾಳ

ನಂದಿತೀರ್ಥರಾ ನಂದದಿ ಭಜಿಸಿರೋ
ಬಂದು ಸಲಹಬೇಕೆಂದು ಬೇಡುತಾ ॥ಪ॥

ಶ್ರದ್ಧಾರಮಣನು ಮಧ್ಯಗೇಹನ
ಶುದ್ಧ ಕುಲದೊಳು ಉದ್ಭವಿಸಿದ ॥ಅ.ಪ॥

ಗೋಪ್ರದಾಯಕ ವಿಪ್ರವರ್ಯಗೆ
ಕ್ಷಿಪ್ರದಲ್ಲಿ ಸುಪ್ರಜ್ಞೆಯಿತ್ತ ಆನಂದತೀರ್ಥರ ॥೨॥

ದೂಷ್ಯವಾದ ದುರ್ಭಾಷ್ಯ ಖಂಡಿಸಿ
ಶಿಷ್ಯರಿಗೆ ಸದ್ಭಾಷ್ಯ ಪೇಳಿದ ॥೩॥

ಅಚ್ಯುತೇಕ್ಷರ ತುಚ್ಛಮತದೊಳು
ಇಚ್ಛೆ ತಪ್ಪಿಸಿ ಸ್ವಚ್ಛರೆನಿಸಿದ ॥೪॥

ಯವನನೃಪತಿಯ ಭವನಕೆ ಪೋಗಿ
ಅವನ ಅರ್ಧರಾಜ್ಯವನೆ ತಂದ ಆನಂದತೀರ್ಥರ ॥೫॥

ದೇವಗಂಗೆಯು ಪವನಾಂಶನ
ಸೇವೆಮಾಡಿ ತಾ ಪಾವನಳಾದ ಆನಂದತೀರ್ಥರ ॥೬॥

ನಾಮಗಿರಿ ಸಿರಿಸ್ವಾಮಿ ನೃಹರಿಯು
ಪ್ರೇಮಬಲದಿ ನಿಸ್ಸೀಮರಾದ ಆನಂದತೀರ್ಥರ ॥೭॥



## ೨೨೫

(ಅಂಕಿತ–ಪ್ರಸನ್ನ) (ಶ್ರೀವಿದ್ಯಾಪ್ರಸನ್ನತೀರ್ಥರ ಕೃತಿ)

ರಾಗ–ತೋಡಿ ರೂಪಕತಾಳ

ಯತಿವರೇಣ್ಯರ ಮನುಜ–ಸತತ ಭಜಿಸೆಲೋ ॥ಪ॥

ಸತತ ವಿಮಲಚರಿತಸತ್ಯವತಿಯ ಸುತರ ಮತವನರಿತ ॥ಅ॥

ಆಜಜನಕನ ಮಹಿಮೆ ಮರೆತು
ಸುಜನರೆಲ್ಲ ಬಳಲುತಲಿರೆ
ಭುಜಗಶಯನನಾಜ್ಞೆಯಿಂದ
ರಜತಪುರದೊಳವತರಿಸಿದ ॥೧॥

ಭೂಸುರವರಕುಲದಿ ಜನಿಸಿ
ವಾಸುದೇವನಾಮದಿಂದ
ಶೈಶವವನು ಕಳೆದು ತುರಿಯ
ಆಶ್ರಮವನ್ನು ಸ್ವೀಕರಿಸಿದ ॥೨॥

ಜೀರ್ಣವಾದ ನಿಗಮಾರ್ಥಗಳ
ನಿರ್ಣಯಿಸಿದ ಜ್ಞಾನಾನಂದ
ಪೂರ್ಣವ್ಯಾಸರೊಳ್ ಶ್ರವಣಮಾಡಿ
ಪೂರ್ಣಪ್ರಜ್ಞರಾಗಿ ಮೆರೆದ ॥೩॥

ಹರಿಯು ಜೀವರು ಸಮರು ಎಂದು
ನರಿಯುಕುತಿಗಳಿಂದ ಬೋಧಿಪ
ದುರುಳವಾದಗಳನು ಮುರಿದು
ಹರಿ ಸರ್ವೋತ್ತಮನೆಂದರುಹಿದ ॥೪॥

ಶುಕ್ತಿರಜತಜ್ಞಾನದಂತೆ
ವಿಶ್ವವೆಲ್ಲ ಮಿಥ್ಯಾವೆಂಬೊ
ಯುಕ್ತಿಗಳನೆ ಖಂಡಿಸಿ ಜಗತ್
ಸತ್ಯವೆಂದು ದೃಢದಿ ತೋರಿದ ॥೫॥

ಬ್ರಹ್ಮನು ಗುಣಶೂನ್ಯನೆಂದು
ದುರ್ಮತಗಳ ಹರಡುವವರ
ಹಮ್ಮು ಮುರಿದು ಜಗದಿ ಶಾಸ್ತ್ರ
ಮರ್ಮಗಳನು ವಿವರಿಸಿದ ॥೬॥

ದೂಷ್ಯವಾದ ಇಪ್ಪತ್ತೊಂದು
ಭಾಷ್ಯಗಳನು ಮುರಿದು ಶುದ್ಧ
ಭಾಷ್ಯಗಳನು ರಚಿಸಿ ತಮ್ಮ
ಶಿಷ್ಯವರ್ಗಕೆ ಸಾರಪೇಳಿದ ॥೭॥

ಶ್ರವಣ ಮನನ ಧ್ಯಾನಗಳಿಂ
ಸಿರಿರಮಣನ ಜ್ಞಾನ ಪೊಂದಿ
ವರಕರುಣವ ಪಡೆಯುವುದೇ
ನಿರುತಸುಖಕೆ ಪಥವೆಂದರುಹಿದ ॥೮॥

ಹನುಮ ಭೀಮ ಮಧ್ವರೂಪದಿ
ರಾಮಕೃಷ್ಣ ವೇದವ್ಯಾಸರ
ನಿರತ ಸೇವೆಮಾಡಿ ಶ್ರೀಹರಿ
ಯೊಲಿಮೆಯಿಂ ಪ್ರಸನ್ನರಾದ ॥೯॥



## ೨೨೬

(ಗುರುಜಗನ್ನಾಥವಿಠ್ಠಲಾಂಕಿತ) (ಕೋಸಗಿ ಸ್ವಾಮಿರಾಯಾಚಾರ್ಯರು)

ರಾಗ–ಮಧ್ಯಮಾವತಿ ಆದಿತಾಳ

ನಂದತೀರಥರಾಯ-ಅಸ್ಮದ್ಗುರೋರ್ಗುರು
ನಂದು ಸುಖಮಯಕಾಯಾ-ಪೊರೆಯಯ್ಯ ಜೀಯ್ಯಾ ॥ಪ॥

ನಂದನಂದನ ಪಾದಕಮಲಕೆ
ನಂದ ಮಧುಕರನಂದದಲಿ ನಿಜ
ಮಂದಜನರಿಗೆ ನಂದ ಕೊಡುವಾ
ನಂದಮೂರುತಿ ಆನಂದಕಾರಿಯೆ ॥ಅ॥

ಮಧ್ಯಮುನಿ ದ್ವಿಜನಲ್ಲೀ–ಉದ್ಭವಿಸಿ ನೀನೂ
ಮಧ್ವಮುನಿ ಪೆಸರಲ್ಲಿ–ಮರ್ವಾದಿಗಳ ಅ-
ಶುದ್ಧ ಭಾಷ್ಯಗಳಲ್ಲೀ–ಜಯಪಡೆದ ನಿನ್ನಾ
ಶುದ್ಧ ಭಾಷ್ಯಗಳಲ್ಲೀ–ಭಕ್ತಿಯಿಂದಲ್ಲೀ ॥
ಶುದ್ಧ ಹರಿಮತದ ಶುಭ
ಸಿದ್ಧಾಂತ ಸ್ಥಾಪಿಸಿ ಜಗದಿ ಜೀವರ
ಸಿದ್ಧಗಣಕಧಿನಾಥನೆಂದೂ ಪ್ರ
ಸಿದ್ಧಗೈಸಿದ ಶುದ್ಧಮೂರುತಿ ॥೧॥

ಬದರಿಕಾಶ್ರಮವನ್ನೂ-ಐದಿದ್ಯೋ ಮುದದಿ
ಪದುಮನಾಭನನ್ನೂ–ಜಲಗೈಸಿ ನಿನ್ನ
ಬದಿಗ ಜನರಿಗಿನ್ನೂ-ಸುವಾಕ್ಯ
ದಿಂದಲಿ ಪೇಳಿದದು ನಿಜವಿನ್ನೂ ॥
ಪದುಮನಾಭನೆ ಪರಮದೈವನು
ಪದುಮೆ ಮೊದಲು ಬ್ರಹ್ಮಾಂತಜೀವರ
ಪದದಿ ಗುಣದ ತಾರತಮ್ಯವ
ಹೃದಯಮಂದಿರದಲ್ಲಿ ಪೇಳಿದ ॥೨॥

ಘನ್ನಮಹಿಮನೆ ಎನ್ನಾ–ಮನವಚನ ಕಾಯದಿ
ಇನ್ನು ಮಾಡುವುದನ್ನಾ–ಸ್ವೀಕರಿಸಿ ಹರಿಗೆ
ಮುನ್ನ ನೀಡೆಲೋ ಚೆನ್ನಾ–ವಾಗಿ ನಿಜಫಲ
ನಿನ್ನ ಜನರಿಗಿನ್ನಾ-ನೀಡಯ್ಯ ಮುನ್ನ॥
ನಿನ್ನ ಒಳಗೆ ನಿರುತ ಇರುವ
ಘನ್ನ ಗುರುಜಗನ್ನಾಥವಿಠ್ಠಲನ
ಎನ್ನಮನದಲಿ ತೋರಿಸೆಂದು
ನಿನ್ನ ಪದಯುಗವನ್ನು ಭಜಿಸಿದೆ ॥೩॥



# ೨೨೭

## (ಶ್ರೀಕೃಷ್ಣವಿಠ್ಠಲಾಂಕಿತ)

ರಾಗ–ಮೋಹನ ಆದಿತಾಳ

ಶ್ರೀಮಧ್ವನುದಿಸಿದನು ಭೂತಳದಲಿ ‖ಪ‖

ಒದ್ದು ದುರ್ಮತ-ತಿದ್ದಿ ಸುಜನರ
ಪದ್ಮನಾಭನ ಪಾದ ಸೇವಿಸೆ ‖ಅ‖

ದೇವ ದುಂಧುಭಿಗಳ್ ಮೊಳಗೆ
ದೇವ ಗಣಗಳು ಕುಣಿದು ಕುಣಿಯೇ
ಗೀರ್ವಾಣಮಾತೆಯು ನಲಿದು ನಲಿಯೆ
ಪೂರ್ವಜಾತರ ಖೇದ ಉಕ್ಕಿ ಹರಿಯೆ ‖
ಸರ್ವಲಕ್ಷಣದಿಂದ ಶೋಭಿಪ
ಸರ್ವತೆರದಲಿ ಪೂರ್ವಕಾಯದಿ
ಸರ್ವಜೀವರ ನಾಥ ನಾಯಕ
ಸರ್ವರೀಶನ ಆಜ್ಞೆ ಧರಿಸುತ ‖೧‖

ವಾಸುದೇವನಲ್ಲಿ ರತನು
ವಾಸುದೇವನ ತೋರಿ ಪೊರೆವ
ದೋಷವಿಲ್ಲದ ಮಹಿಮಾ
ನಾಶವಿಲ್ಲದ ಜ್ಞಾನಸ್ವರೂಪ ‖
ತೋಷಬೀರುತ ಮಧ್ಯಗೇಹಗೆ
ವಾಸುದೇವಸುನಾಮಗೊಳ್ಳುತ
ನಾಶಮಾಡುತ ದೋಷಜ್ಞಾನವ
ಭಾಸಬೀರಲು ವೇದರಾಶಿಯ ‖೨‖

ವನಜಜಾಂಡವ ಪೊತ್ತಿಹ ಧೀರ
ವನಜನಾಭನ ಮುಖ್ಯದೂತ
ಅನಿಲದೇವನ ತೃತೀಯರೂಪ
ವನಜಸಂಭವಪದಕೆ ಬರುವ ||

ಅನಘ ಜಯಮುನಿ ವಾಯುಹೃದಯದಿ
ಕುಣಿವ ಶ್ರೀಕೃಷ್ಣವಿಠ್ಠಲ ದಯದೊಳ್
ಮಣಿವ ಸುಜನರ ಬಂಧ ನೀಗಿಸಿ
ದಣಿವು ಕಾಣದೆ ವೇದವತಿಯಲಿ || ||೩||



೨೨೮

(ತಂದೆ ವೆಂಕಟೇಶವಿಠ್ಠಲಾಂಕಿತ)

**ರಾಗ-ಕಾನಡ/ಜುಂಜೂಟಿ** **ಆದಿತಾಳ**

ಶ್ರೀಸರ್ವಜ್ಞಾಚಾರ್ಯಂ ಭಜಾಮ್ಯಹಂ । ಶ್ರೀ ಸರ್ವಜ್ಞಾಚಾರ್ಯಂ
ದ್ವೈಸಿಕಾರ್ಯಂ । ಕೀಶಾಧಿನಾಯಕಂ । ಶ್ವಾಸಾಧಿಪಂ ॥ ॥ಪ॥

ಶ್ರೀಶಪಾದ ಸರಸೀರುಹಭೃಂಗಂ । ವ್ಯಾಸರಾಜಯತಿ ಪೂಜ್ಯ ಶುಭಾಂಗಂ ।
ಈಶ್ವರಾದ್ವರಂ । ಭೃತ ಚರಾಚರಂ । ವಿಶ್ವಸೃಡ್ಸಮಂ । ಸದಾ ಭಜಾಮ್ಯಹಂ।
॥ಅ॥

ಸದಾ । ಶ್ರೀಹರಿ । ಪದಾಂಭೋರುಹ । ಸುಧಾ । ರಸಾಸ್ವಾದಸವಿದಂ ।
ಮುದಾಂಕಿತ ಸಮಯು । ಪ್ರದಾನಶೀಲಂ । ವದಾನ್ಯ ಜನಕುಲಶೇಖರಾನಿಲಂ ।
ಸದಯಂ । ಆಗಮಹೃದಯಂ । ಕೃತಾವತಾರತ್ರಿತಯಂ ।
ಅಕುತೋಭಯಂ ॥ ||೧||

ಸುರಾ । ಮರೇತರ । ಚರಾನೀಕಶ್ವಾ । ಸರೋಣ್ಮಹೋದಯು ।
ಕ್ಷರೋತ್ತಮಂ ।
ಧರಾಸುತಾಂಕಿತ । ಶಿರೋಧಾರ ಕೌ । ರವಾರಂಭವನ ಮದೋತ್ಕಟಂ ॥
ಮರುತಂ । ಕೃತಾರ್ಥಚರಿತಂ । ಶ್ರೀತಾಮರೋಪಲ ಪೃಥಾತ್ಮಜಂ ।
ಪ್ರಥಿತಂ ॥ ॥೨॥

ಅನಾ । ಲೋಚನಯ । ವಿನಾ ಲಕ್ಷ್ಮೀ ಚಿ। ನ್ಮನಾನಂತಗುಣ । ವಿಜ್ಞೇಯಂ ।
ಕ್ಷಣಾಂತರಪಿ ಹರಿ । ಗುಣಾನವಿಜ್ಞೇಯು । ಗಣಾಧಿಪತಿ ಆಖಿಣಾಶ್ಮ ಚರಣಂ ।
ನಿರುತಂ । ಸ್ಮರಾಮಿ ಭರತಂ । ಶ್ರೀತಂದೆವೆಂಕಟೇಶವಿಠ್ಠಲಾನೆಗಂ ।
ಜ್ಞಾನ ದಂ ॥೩॥



# ಪರಿಶಿಷ್ಟ

೧. ಶ್ರೀಮದಾನಂದತೀರ್ಥಭಗವತ್ಪಾದರಿಂದ ವಿರಚಿತ "ಸರ್ವ ಮೂಲ ಗ್ರಂಥಗಳು" :—

೧. ಸೂತ್ರ ಪ್ರಸ್ಥಾನ–

೧. ಶ್ರೀಮದ್ಬ್ರಸೂತ್ರ ಭಾಷ್ಯ
೨. ಅನುವ್ಯಾಖ್ಯಾನ
೩. ನ್ಯಾಯವಿವರಣ
೪. ಅಣುಭಾಷ್ಯ

೨. ವೇದ ಪ್ರಕಣ–

೫. ಋಗ್ಭಾಷ್ಯ

## ೩. ದಶೋಪನಿಷದ್ಭಾಷ್ಯಗಳು

೬. ಈಶಾವಾಸ್ಯೋಪನಿಷದ್ಭಾಷ್ಯ
೭. ಷಟ್ಪ್ರಶ್ನೋಪನಿಷದ್ಭಾಷ್ಯ
೮. ಐತರೇಯೋಪನಿಷದ್ಭಾಷ್ಯ
೯. ತೈತ್ತಿರೇಯೋಪನಿಷದ್ಭಾಷ್ಯ
೧೦. ಛಾಂದೋಗ್ಯೋಪನಿಷದ್ಭಾಷ್ಯ
೧೧. ಬೃಹದಾರಣ್ಯಕೋಪನಿಷದ್ಭಾಷ್ಯ
೧೨. ತಲವಕಾರೋಪನಿಷದ್ಭಾಷ್ಯ
೧೩. ಕಾಠಕೋಪನಿಷದ್ಭಾಷ್ಯ
೧೪. ಅಥರ್ವಣೋಪನಿಷದ್ಭಾಷ್ಯ
೧೫. ಮಾಂಡೂಕ್ಯೋಪನಿಷದ್ಭಾಷ್ಯ

## ೪. ಗೀತಾ ಪ್ರಸ್ಥಾನ–

೧೬. ಗೀತಾಭಾಷ್ಯ
೧೭. ಗೀತಾತಾತ್ಪರ್ಯ

## ೫. ಪುರಾಣ ಪ್ರಸ್ಥಾನ–

೧೮. ಮಹಾಭಾರತತಾತ್ಪರ್ಯ ನಿರ್ಣಯ
೧೯. ಭಾಗವತತಾತ್ಪರ್ಯ ನಿರ್ಣಯ
೨೦. ಯಮಕ ಭಾರತ

## ೬. ದಶಪ್ರಕರಣ ಗ್ರಂಥಗಳು–

೨೧. ತತ್ತ್ವಸಂಖ್ಯಾನ
೨೨. ತತ್ತ್ವೋದ್ಯೋತ
೨೩. ತತ್ತ್ವ ವಿವೇಕ

೨೪. ಮಾಯಾವಾದ ಖಂಡನ
೨೫. ಪ್ರಪಂಚಮಿಥ್ಯಾತ್ವಾನುಮಾನ ಖಂಡನ
೨೬. ಉಪಾಧಿ ಖಂಡನ
೨೭. ಕರ್ಮನಿರ್ಣಯ
೨೮. ಶ್ರೀವಿಷ್ಣುತತ್ತ್ವ ವಿನಿರ್ಣಯ
೨೯. ಪ್ರಮಾಣ ಲಕ್ಷಣ
೩೦. ಕಥಾಲಕ್ಷಣ

೭. ತಂತ್ರಆಚಾರ–

೩೧. ಸದಾಚಾರಸ್ಮೃತಿ
೩೨. ತಂತ್ರಸಾರ
೩೩. ಕೃಷ್ಣಾಮೃತ ಮಹಾರ್ಣವ
೩೪. ಯತಿಪ್ರಣವ ಕಲ್ಪ
೩೫. ಜಯಂತಿ ಕಲ್ಪ

೮. ಸ್ತೋತ್ರವಿಭಾಗ

೩೬. ದ್ವಾದಶ ಸ್ತೋತ್ರ
೩೭. ನಖಸ್ತುತಿ

ಅನುಬಂಧ–

ಬಾಲ್ಯದಲ್ಲಿಯೇ ವಿರಚಿತ ಅಂಬರ ಗಂಗಾ (ಕಂದುಕಸ್ತುತಿ)
ಈಚೆಗೆ ತರ್ಕಿಸಲಾದ ನ್ಯಾಸಪದ್ಧತಿ ಮತ್ತು ತಿಥಿನಿರ್ಣಯ.



## ೨. ಗ್ರಂಥ ಮಾಲಿಕಾಸ್ತೋತ್ರ

### (ಶ್ರೀವ್ಯಾಸರಾಜವಿರಚಿತ)

ಕೃಷ್ಣಂ ವಿದ್ಯಾಪತಿಂ ನತ್ವಾ ಪೂರ್ಣಬೋಧಾರ್ಯ ಸದ್ಗುರೂನ್ ।
ಗ್ರಂಥಾನ್ವಕ್ಷ್ಯೇ ನಂದತೀರ್ಥಮುಖಾಂಬುಜ ವಿನಿಸ್ಸೃತಾನ್ ॥ ॥೧॥

ನಾರಾಯಣೇನ ವ್ಯಾಸೇನ ಪ್ರೇರಿಸ್ತತ್ತ್ವಸಂವಿದೇ ।
ಗ್ರಂಥಾನ್ಮಧ್ವಶ್ಚಕಾರಾಸೌ ಸಪ್ತತ್ರಿಂಶದ ಮಂದಧೀಃ ॥ ॥೨॥

ಗೀತಾಭಾಷ್ಯಂ ಚಕಾರಾದೌ ಪ್ರಥಮಂ ತುಷ್ಟಿದಂ ಹರೇಃ ।
ಭಾಷ್ಯಾಣುಭಾಷ್ಯೇ ಚಕ್ರೇಽಥ ಹ್ಯನುವ್ಯಾಖ್ಯಾನಮುತ್ತಮಮ್ ॥ ॥೩॥

ಪ್ರಮಾಣಲಕ್ಷಣಂ ನಾಮ ಕಥಾಲಕ್ಷಣ ಸಂಜ್ಞಿತಮ್ ।
ಉಪಾಧಿಖಂಡನಂ ಚಕ್ರೇ ಮಾಯಾವಾದಸ್ಯ ಖಂಡನಮ್ ॥ ॥೪॥

ಚಕ್ರೇ ಪ್ರಪಂಚಮಿಥ್ಯಾತ್ವನುಮಾನ ಖಂಡನಮೇವಚ ।
ಚಕಾರ ತತ್ತ್ವಸಂಖ್ಯಾನಂ ಸಾಧನಂ ವಿಷ್ಣುದರ್ಶನಮ್ ॥ ॥೫॥

ಗ್ರಂಥಂ ತತ್ತ್ವವಿವೇಕಾಖ್ಯಂ ತತ್ತ್ವೋದ್ಯೋತಂ ಹರೇಃ ಪ್ರಿಯಮ್ ।
ಕರ್ಮನಿರ್ಣಯ ನಾಮಾನಂ ಗ್ರಂಥಂ ನ್ಯಾಯಾರ್ಥಬೃಂಹಿತಮ್ ॥ ॥೬॥

ಸುಖತೀರ್ಥಯತಿಶ್ಚಕ್ರೇ ವಿಷ್ಣುತತ್ತ್ವವಿನಿರ್ಣಯಮ್ ।
ಋಗ್ಭಾಷ್ಯಂ ಚ ಚಕಾರಾಸೌ ಸರ್ವವೇದಾರ್ಥನಿರ್ಣಯಮ್ ॥೭॥

ಐತರೇಯಂ ತೈತ್ತಿರೀಯಂ ಬೃಹದಾರಣ್ಯಮೇವ ಚ ।
ಈಶಾವಾಸ್ಯಂ ಕಾಠಕಂ ಚ ಛಾಂದೋಗ್ಯಾಥರ್ವಣೇ ತಥಾ ॥೮॥

ಮಾಂಡೂಕ್ಯಂ ನಾಮ ಷಟ್ಪ್ರಶ್ನಂ ಕಥಾ ತಲವಕಾರಕಮ್
ಚಕ್ರೇ ಭಾಷ್ಯಾಣಿ ದಿವ್ಯಾನಿ ದಶೋಪನಿಷದಾಂ ಗುರುಃ ॥೯॥

ನಿರ್ಣಯಂ ಸರ್ವಶಾಸ್ತ್ರಾಣಾಂ ಗೀತಾತಾತ್ಪರ್ಯ ನಿರ್ಣಯಮ್ ।
ಸನ್ನ್ಯಾಯವಿವೃತಿಂ ನಾಮ ನ್ಯಾಯಶಾಸ್ತ್ರ ನಿಕೃಂತನಮ್ ॥೧೦॥

ನರಸಿಂಹನಖಸ್ತೋತ್ರಂ ಚಕ್ರೇ ಯಮಕಭಾರತಮ್
ದ್ವಾದಶಸ್ತೋತ್ರಮಕರೋತ್ಕೃಷ್ಣಾಮೃತಮಹಾರ್ಣವಮ್ ॥೧೧॥

ತಂತ್ರಸಾರಂ ಚಕಾರಾಸೌ ಸದಾಚಾರಸ್ಮೃತಿಂ ಸುಧೀಃ ।
ಶ್ರೀಮದ್ಭಾಗವತಸ್ಯಾಪಿ ತಾತ್ಪರ್ಯಂ ಜ್ಞಾನಸಾಧನಮ್ ॥೧೨॥

ಮಹಾಭಾರತತಾತ್ಪರ್ಯನಿರ್ಣಯಂ ಸಂಶಯಚ್ಛಿದಮ್ ।
ಯತಿಪ್ರಣವಕಲ್ಪಂ ಚ ಪ್ರಣವಾರ್ಥಪ್ರಕಾಶಕಮ್ ॥ ॥೧೩॥

ಜಯಂತೀನಿರ್ಣಯಂ ಚಕ್ರೇ ದೇವಕೀಗರ್ಭಜನ್ಮನಃ ।
ಕೃಷ್ಣಸ್ಯ ಕೃಷ್ಣಭಕ್ತೋಯಂ ದ್ವೈಪಾಯನಕರಾಬ್ಜಭೂಃ ॥೧೪॥

ತ್ರಿಂಶತ್ಸಹಸ್ರಸಂಖ್ಯಾಕಂ ದ್ವ್ಯಧಿಕಂ ತುಷ್ಟಿದಂ ಹರೇಃ ।
ಏತೇಷಾಂ ಪಾಠಮಂತ್ರೇಣ ಮಧ್ವೇಶಃ ಪ್ರೀಯತೇ ಸದಾ ॥೧೫॥

॥ಇತಿ ಶ್ರೀವ್ಯಾಸರಾಜಕೃತ ಗ್ರಂಥಮಾಲಿಕಾಸ್ತೋತ್ರಂ ಸಂಪೂರ್ಣಮ್॥

॥ ಶ್ರೀ ಮಧ್ವೇಶಾರ್ಪಣಮಸ್ತು ॥



# ೩. ವಾಯುಗದ್ಯ

## (ಶ್ರೀ ಬಿದರಹಳ್ಳಿ ಶ್ರೀನಿವಾಸತೀರ್ಥರಿಂದ ವಿರಚಿತ)

ರಾಗ-ಆರಭಿ

ಪ್ರಮಾಣ, ಕಥಾಲಕ್ಷಣ, ಮಾಯಾವಾದಖಂಡನ, ಉಪಾಧಿ ಖಂಡನ, ಪ್ರಪಂಚಮಿಥ್ಯಾತ್ವಾನುಮಾನ ಖಂಡನ, ತತ್ತ್ವಸಂಖ್ಯಾನ, ತತ್ತ್ವವಿವೇಕ, ತತ್ತ್ವೋದ್ಯೋತ, ಕರ್ಮನಿರ್ಣಯ, ವಿಷ್ಣುತತ್ತ್ವ ವಿನಿರ್ಣಯಾಖ್ಯ ದಶಪ್ರಕರಣ-ಬ್ರಹ್ಮಸೂತ್ರಭಾಷ್ಯಾಽಣು ಭಾಷ್ಯ, ಅನು ವ್ಯಾಖ್ಯಾನ, ನ್ಯಾಯವಿವರಣ, ತಂತ್ರಸಾರ, ಗೀತಾಭಾಷ್ಯ, ಗೀತಾ ತಾತ್ಪರ್ಯ, ಋಗ್ಭಾಷ್ಯ, ಈಶಾವಾಸ್ಯ, ಷಟ್ಪ್ರಶ್ನ, ಅಥರ್ವಣ ಮಾಂಡೂಕ, ತಲವಕಾರ, ಕಾಠಕ, ಐತರೇಯ, ತೈತರೇಯ, ಛಾಂದೋಗ್ಯ, ಬೃಹದಾರಣ್ಯಕಾಖ್ಯದಶೋಪನಿಷದ್ಭಾಷ್ಯ-ಶ್ರೀಮದ್ಭಾಗವತ ತಾತ್ಪರ್ಯ, ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯ. ಸದಾಚಾರಸ್ಮೃತಿ, ದ್ವಾದಶಸ್ತೋತ್ರ, ಕೃಷ್ಣಾಮೃತಮಹಾರ್ಣವ, ಯಮಕಭಾರತ, ಯತಿ ಪ್ರಣವಕಲ್ಪ, ನಖಸ್ತುತಿ-ಅಂಬರ ಗಂಗಾಖ್ಯ ಗದ್ಯರೂಪೇ-**ಸಪ್ತ ತ್ರಿಂಶತಿ ಗ್ರಂಥಕರ್ತ್ರೇ,** ಪೂರ್ಣಪ್ರಜ್ಞಾಭಿಧ ಶ್ರೀಮದಾನಂದತೀರ್ಥಸ್ವರೂಪಾಯ ॥

ದೋಷರಹಿತ ಶ್ರೀಲಕ್ಷ್ಮೀನಾರಾಯಣ ಪೂರ್ಣಸನ್ನಿಧಾನೋಪೇತ ನರನಾರಾಯಣ ಕರಲಬ್ಧಾಷ್ಟ ಸಂಖ್ಯಾಕ ವೇದವ್ಯಾಸಾಭಿಧ ಶುದ್ಧ ಶಿಲಾತ್ಮಕ ಪ್ರತಿಮಾರ್ಚಕ ಶ್ರೀಮನ್ಮಧ್ವಾಚಾರ್ಯ ಸ್ವರೂಪಾಯ ॥

ತಾಸಾಂ ಪ್ರತಿಮಾನಾಂ ಪೂಜಾಪ್ರವಾಹಸಿದ್ಧ್ಯರ್ಥಂ ವಂಶಪರಂಪರಾಕರ್ತ್ರ ಪದ್ಮನಾಭಾಖ್ಯ ಮುನಿ ನಿರ್ಮಾತೃಕ ಕರಕಮಲೋಪೇತ ಶ್ರೀಮನ್ಮಧ್ವಾ

ಚಾರ್ಯ ಸ್ವರೂಪಾಯ, ಸಕಲೇಂದ್ರಿಯ ದೇವತಾನಿಯಾಮಕಾಯ ॥ ಸ್ವಭಕ್ತಾನಾಂ ಸರ್ವವಿಘ್ನನಿವಾರಕಾಯ ॥ ಸದ್ವಿದ್ಯಾಪ್ರದಾತ್ರೇ ॥ ಸ್ವಸ್ತೋತ್ರೇ ಸುಪ್ರೀತಾಯ ಭಗವದನಂತರಂ ಸರ್ವರಸಾಸ್ವಾದನ ಕರ್ತ್ರೇ ॥ ಭಗವದಾಜ್ಞಯಾ ಮೋಕ್ಷದಾತ್ರೇ ॥ ಶ್ರೀಲಕ್ಷ್ಮೀನಾರಾಯಣಾ ನಂತರಂ ಸಮಸ್ತವೇದ ಪ್ರತಿಪಾದ್ಯಾಯ ॥ ಅನಂತಾನಂತ ವೇದೋಕ್ತ ವೇದಾನುಕ್ತ ಭಾರತೋಕ್ತಾನಂತ ಗುಣಕರ್ಮಭಿರನಂತ ರೂಪೋಪಾಸ ಕಾಯ ॥ ಭಾರತೀರಮಣಾಯ ಸರ್ವಜೀವ ನಿಯಾಮಕಾಯ ॥ ಸಮಸ್ತಾಭೀಷ್ಟಪ್ರದಾತ್ರೇ ॥ ಶ್ರೀಮುಖ್ಯಪ್ರಾಣಾಯ ತುಭ್ಯಂ ನಮಃ ॥

ಶ್ರೀಹನುಮ ಭೀಮ ಮಧ್ವಾಂತರ್ಗತ ಶ್ರೀರಾಮಕೃಷ್ಣ ವೇದವ್ಯಾಸಾ ರ್ಪಿತಮಸ್ತು



೨೨೯

# ಶ್ರೀಮದಾಚಾರ್ಯ ಸದ್ಗ್ರಂಥ ಸನ್ನಾಮಾವಳಿ

## (ತಂದೆ ವೆಂಕಟೇಶವಿಠಲಾಂಕಿತ)

**ಉದಯರಾಗ** **ವಾರ್ಧಿಕಷಟ್ಪದಿ**

ಸ್ಮರಿಸು ನವತ್ರಿಂಶತಗಳಾ ॥

ಸ್ಮರಿಸು ಶ್ರೀಮಧ್ವಪ್ರಣೀತ ಸದ್ಗ್ರಂಥಗಳ
ಸ್ಮರಿಸು ಮುಕ್ತಿಪ್ರದಾಗಮಶಿರೋರತ್ನಗಳ
ಸ್ಮರಿಸುತಾನಂದ ಸುರಿ ಸರ್ವಭುವನಾಶ್ಚರ್ಯ ಸುರಸೇವ್ಯ ದರ್ಶನಗಳ ॥
॥ಅ॥

ಗೀತಾಬ್ಜಭವಸೂತ್ರವೈತರೇಯಾಥರ್ವ
ತೈತರೀಯಾಣು ಖುಖ್ಯಾತ ಛಾಂದೋಗ್ಯೇಶಾ
ಖ್ಯಾತ ಬೃಹದಾರಣ್ಯಕಾತಳವಕಾರ ಷಟ್ಪ್ರಶ್ನ ಮಂಡೂಕಭಾಷ್ಯಾ ॥
ತಾತ್ತ್ವಕರ್ಮ ಜಯಂತಿ ಜಯ ನ್ಯಾಯನಿರ್ಣಯವು
ಶ್ರೀತತ್ತ್ವಸಂಖ್ಯಾನ್ವಿವೇಕ ತತ್ತ್ವೋದ್ಯೋತ
ನೀತಾನುವ್ಯಾಖ್ಯಾನ ಮಿಥ್ಯ ಮಾಯಾವಾದ್ಯುಪಾಧಿ ಖಂಡನತ್ರಯಗಳು ॥
೬ ॥

ಭಾಗವತ ಗೀತಾತ್ಪರ್ಯವಾಚಾರಸ್ಮೃತಿ
ಯೋಗಿಪ್ರಣವಸುಕಲ್ಪ ಯಮಕ ಭಾರತ ಭಕ್ತ
ಭಾಗ್ಯೋದಯವು ಕೃಷ್ಣಮಹಿಮಾಮೃತಾಂಬುನಿಧಿ ತಂತ್ರಸಾರ ವಾಯು
ಸ್ತುತಿ ॥
ರಾಗ ರಸಭಕ್ತಿ ಸಕಲಾಗಮಾರ್ಥಕೆ ಸೊಂಟ
ನಾಗರದ ಸುಮನೋನುರಾಗದ್ವಾದಶ ಸ್ತೋತ್ರ
ವೌಘ ಕೃಷ್ಣಸ್ತುತಿ ಕಥಾ ಪ್ರಮಾಣ ಲಕ್ಷಣ ಬಿಲ್ವಮಂಗಳಾದ್ಯಾ ॥
೭ ॥

ಏಕವಿಂಶತಿಮತಧ್ವಾಂತ ಧ್ವಂಸಕ ನವ್ಯ
ಲೋಕಾಕ್ಷಿ ಭವಿಷ್ಯದ್ವಿಧಾತ ಸುಖತೀರ್ಥಕೃತ
ಏಕೋನನಾಲ್ವತ್ತು ಶ್ರೀಕರಗ್ರಂಥಾಭಿಧೇಕವಾತ್ರವ ಪಠಿಸಲು ॥
ಭೀಕರಾಜ್ಞಾನತಮವ್ಯಾಕುಲಿತ ಜನಕೆ ಪ್ರ-
ಭಾಕರೋಪಮವೆನಿಸಿ ಸಾಕಾರ ಸಂಪೂರ್ಣ
ಶ್ರೀಕೇಶವಾಖ್ಯ ತಂದೆವೆಂಕಟೇಶವಿಠಲ ಹೃದಯಾಕಾಶದಲಿ ಕಾಣುವ ॥
೮ ॥



॥ ಶ್ರೀಃ ಹರಿಃ ಓಂ ॥

ಭಾಗ ೧೦

# ಭಗವಾನ್ ಶ್ರೀ ವೇದವ್ಯಾಸರು

ಬಾದರಾಯಣರು - ಶ್ರೀಕೃಷ್ಣದ್ವೈಪಾಯನರು)

## ೨೩೦

### (ಹಯವದನಾಂಕಿತ)

ರಾಗ-ಅಸಾವೇರಿ ಆದಿತಾಳ

ಮಧ್ವಾಂತರ್ಗತ ವೇದವ್ಯಾಸ-ಕಾಯೊ
ಶುದ್ಧ ಮಾರುತಿಯ ಸರ್ವೇಶ ॥ ॥ಪ॥

ಶ್ರದ್ಧೆಯಿಂದಲಿ ನಿನ್ನ ಭಜಿಸುವ ಭಕ್ತರಿಗೆ
ಬುದ್ಧ್ಯಾದಿಗಳ ಕೊಟ್ಟುದ್ಧರಿಸೊ ದೇವರ ದೇವ ॥ ॥ಅ॥

ದ್ವಾಪರದಲಿ ಒಬ್ಬ ಮುನಿಪ-ತನ್ನ । ಕೋಪದಿಂದಲಿ ಕೊಡಲು ಶಾಪ
ವ್ಯಾಪಿಸಲು ಜ್ಞಾನಲೋಪ । ಅಪಾರ ತತ್ವಸ್ವರೂಪ ॥
ಶ್ರೀಪತಿಯು ಕಾಯೆಂದು ಮೊರೆಯಿಡೆ
ಪಾಪವಿರಹಿತಳಾದ ಯಮುನೆಯ
ದ್ವೀಪದಲಿ ಅಂಬಿಗರ ಹೆಣ್ಣಿನ
ರೂಪಕೊಪ್ಪಲಿದವಳಲ್ಲಿ ಜನಿಸಿದೆ ॥ ॥೧॥

ವೇದವಾದಿಗಳೆಲ್ಲ ಕೆಡಲು- ತತ್ವ । ವಾದಿ ಜನರು ಬಾಯಿ ಬಿಡಲು
ಮೇದಿನಿಸುರರೊಮ್ಮೊರೆಯಿಡಲು-ನಾಲ್ಕು । ವೇದವಿಭಾಗ ರಚಿಸಲು ॥
ಮೋದದಿಂದ ತದರ್ಥಬೋಧಕ
ವಾದ ಸೂತ್ರಪುರಾಣ ರಚಿಸಿ
ವಾದಿಗಳ ನಿರ್ವಾದ ಮಾಡಿದ
ಸಾಧುವಂದಿತ ಬಾದರಾಯಣ ॥೨॥

[illegible]ಗೆ ನೀ ಬೋಧಿಸಿದೆ ಮಿಕ್ಕ । ಕುಮತಿಗಳನ್ನು ಛೇದಿಸಿದೆ
[illegible] ರಾಜ್ಯವಾಳಿಸಿದೆ ಜಗತ್ । ಸ್ವಾಮಿ ನೀನೆಂದು ತೋರಿಸಿದೆ ॥

ವಿಮಲರೂಪನೆ ಕಮಲನಾಭನೆ
ರಮೆಯ ಅರಸನೆ ರಮ್ಯ ಚರಿತನೆ
ಮಮತೆಯಲಿ ಕೊಡು ಕಾಮಿತಾರ್ಥವ
ನಮಿಸುವೆನು ಹಯವದನ ಮೂರುತಿ||

*

**ಅರ್ಥವಿವರಣೆ :—**

**ಶುದ್ಧ ಮೂರುತಿಯೆ** — ಅನಂತಕಲ್ಯಾಣಗುಣ ಧಾಮನೂ, ಸಕಲ ದೋಷವಿದೂರನೂ, ಸದಾನಂದ ಉದ್ರಿಕ್ತನಾದ ಶ್ರೀಪರಮಾತ್ಮನೇ ವೇದವ್ಯಾಸನಾಗಿ ಅವತರಿಸಿದನು. ಇದರಿಂದ, "ವೇದವ್ಯಾಸೋ ಕಶ್ಚನ ಋಷಿಃ" ಎಂದು ಕೆಲವು ತಮೋಯೋಗ್ಯರು ಹೇಳುವ ವಚನವು ಖಂಡನ ವಾಯಿತು.

**ದ್ವಾಪರದಲ್ಲಿ ಒಬ್ಬ ಮುನಿಪ**— ದ್ವಾಪರ ಯುಗದಲ್ಲಿ ಬ್ರಾಹ್ಮಣರು ಮಾಡಿದ ಅಪರಾಧಕ್ಕಾಗಿ **ಗೌತಮಋಷಿಗಳು**, ವಿಪ್ರರ ಜ್ಞಾನ ತಿರೋಧನ ಹೊಂದಲಿ ಎಂದು ಶಾಪವನ್ನಿತ್ತರು. ಅದರಿಂದ ವಿಪ್ರ ಸಂದೋಹದಲ್ಲಿ ಜ್ಞಾನಲೋಪವಾಯಿತು.

**ಯಮುನೆಯ ದ್ವೀಪದಲಿ**—ಯಮುನಾನದಿಯ ಮಧ್ಯಗತವಾದ ನಡುಗಡ್ಡೆಯಲ್ಲಿ. ದ್ವೀಪದಲ್ಲಿ ವೇದವ್ಯಾಸರ ಆವಿರ್ಭಾವ, ಯಮುನಾ ನದಿಯ ನೀರು ಕಪ್ಪು (ಕೃಷ್ಣವರ್ಣಾತ್ಮಕ) ದ್ವೀಪದಲ್ಲಿ ಅವತರಿಸಿದ್ದರಿಂದ. ದ್ವೀಪಸಂಬಂಧ (ದ್ವೈಪ) ಇದರಿಂದ ವೇದವ್ಯಾಸರಿಗೆ **ಕೃಷ್ಣ ದ್ವೈಪಾಯನ ರೆಂದು** ಹೆಸರು.

**ಅಂಬಿಗರ ಹೆಣ್ಣಿನ**— ಸತ್ಯವತಿಯು ಅಂಬಿಗರ ಮನೆತನದಲ್ಲಿ ಹುಟ್ಟಿದವಳು, **ಪರಾಶರಮುನಿಗಳು** ಅವಳ ರೂಪಕ್ಕೆ ಮನಸೋತು, ಸತ್ಯವತಿ

ಯನ್ನು ಲಗ್ನವಾದರು. ಪರಾಶರರಿಂದ ಸತ್ಯವತಿಯಲ್ಲಿ ಪ್ರಕಟರಾದವರೇ ಪರಾಶರಾತ್ಮಜರಾದ ವೇದವ್ಯಾಸರು.

**ನಾಲ್ಕು ವೇದ ವಿಭಾಗ ರಚಿಸಲು—** ವೇದಗಳು ಅನಂತಾನಂತ ಸಂಖ್ಯಾಕವಾಗಿವೆ. ಅನಂತವೇದಗಳ ಸಾರವನ್ನು ತೆಗೆದು, ಅಲ್ಪಾಧಿಕಾರಿಗಳಾದ ಕಲಿಯುಗ ಮಂದಮತಿಗಳ ಉದ್ಧಾರಕ್ಕಾಗಿ ವೇದರಾಶಿಯನ್ನು (೧) ಋಗ್ವೇದ (೨) ಯಜುರ್ವೇದ (೩) ಸಾಮವೇದ (೪) ಅಥರ್ವಣ ವೇದ ಎಂದು ನಾಲ್ಕು ವಿಭಾಗಗಳಾಗಿ ವಿಭಾಗಿಸಿ, ತಮ್ಮ ನಾಲ್ಕು ಮುಖ್ಯ ಶಿಷ್ಯರಿಗೆ ಬೋಧಿಸಿ, ಅವರನ್ನು ಜ್ಞಾನ ಪ್ರಚಾರಕ್ಕೆ ಕಳುಹಿಸಿದರು. ಈ ಕಾರಣದಿಂದ ವೇದವ್ಯಾಸರೆಂದು ಪ್ರಸಿದ್ಧರಾದರು.

**ಬಾದರಾಯಣ —** ಹಿಮವತ್ಪರ್ವತದಲ್ಲಿ ಬದರೀ ವೃಕ್ಷಗಳಿಂದ (ಬೋರೇಗಿಡ) ಮನೋಹರವಾದ ತಾಣದಲ್ಲಿ ವೇದವ್ಯಾಸರ ಆಶ್ರಮವಿದೆ. ಇದರಿಂದ ಬಾದರಾಯಣ ಎಂದು ಹೆಸರು. (ಬದರೀ ವೃಕ್ಷ ತತ್ಸಂಬಂಧ- ಬಾದರೀ)

**ಕ್ರಿಮಿಯಿಂದ ರಾಜ್ಯವಾಳಿಸಿದೆ —** ಈ ಪ್ರಸಂಗವು ಶ್ರೀವೇದವ್ಯಾಸರ ಮಹಾಮಹಿಮೆಯನ್ನು ತಿಳಿಸುವುದು. ತಮ್ಮ ಸಂಸಾರಕಾಲದಲ್ಲಿ ರಾಜ್ಯರಹಿತವಾದ ರಾಷ್ಟ್ರದಲ್ಲಿ ಕ್ರಿಮಿಯಲ್ಲಿ ತಮ್ಮ ವಿಭೂತಿರೂಪವನ್ನಿಟ್ಟು, ಅದನ್ನು ಸಿಂಹಾಸನವನ್ನೇರುವಂತೆ ಮಾಡಿ, ರಾಜ್ಯವಾಳಿಸಿದ ಪ್ರಸಂಗ ವಿಶೇಷ.



೨೩೫

(ವಿಜಯವಿಠ್ಠಲಾಂಕಿತ)

ಸುಳಾದಿ

|| ಧ್ರುವತಾಳ ||

ಯತಿಗಳ ಶಿರೋರತುನ ಸತಿಯು ಅವಿಯೋಗಿ
ರತಿಪತಿ ಜನಕ ಸ್ವರತ ಸ್ವಪ್ರಕಾಶಕ
ಅತೀತಾದ್ಭುತಮಹಿಮ ಪತಿತಪಾವನನಾಮ
ನತಜನಾಶ್ರಯ ಧೇನು ದಿತಿಜತಿಮಿರ ಭಾನು
ಅತಿದೂರಾದ್ದೂರ ಸಂತತ ದಯಾಪಾರವಾರ
ಚತುರಾನನ ಸಿರಿಪತಿ ಕಮಲಾಕರಾ
ರ್ಚಿತಪಾದ ಸುಂದರ ದೀನಜನಮಂದಾರ
ಪ್ರತರ್ದನ ನಾನು ನಮ್ಮ ವಿಜಯವಿಠ್ಠಲ ಸತ್ಯ
ವತಿಸುತ ಜಗದೊಳು ಪ್ರತಿಯಿಲ್ಲದಾತ || ||೧||

|| ಮಠ್ಯತಾಳ ||

ಜ್ಞಾನಮಯಕಾಯ ಜ್ಞಾನಮಯೈಶ್ವರ್ಯ
ಜ್ಞಾನದಯಾನಂದ ಜ್ಞಾನಮಯ ವರ್ಣ
ಜ್ಞಾನಮಯ ತೇಜ ಜ್ಞಾನಮಯ ಶಕ್ತಿ
ಜ್ಞಾನಮಯ ಬುದ್ಧಿ ಜ್ಞಾನಮಯ ವಾಣಿ
ಗಾನ ವಿಲೋಲನಾಮ ವಿಜಯವಿಠ್ಠಲ ರೇಯ
ನೀನೆ ನಿನಗೆ ಸಮ ಮೌನಿವ್ರತ ಧೃತನೆ || ||೨||

## ।। ತ್ರಿಪುಟತಾಳ ।।

ಕಲಿವ್ಯಾಪಾರ ವೆಗ್ಗಳವಾಗಿ ವ್ಯಾಪಿಸಿ
ಸಲೆ ಧರ್ಮಾವಳಿಗಳು ಅಳಿದುಪ್ಪೋಗಿರಲಾಗಿ
ಸುಲಭಜ್ಞಾನವೆಲ್ಲ ಮಲಿನದಿಂದ ಕೆಟ್ಟು
ಇಳೆಯೊಳು ಉತ್ತಮ (ಶುದ್ಧ) ಸಂಪ್ರದಾಯದ
ಸುಳಿವೆ ಕಾಣದೆ ಪೋಗೆ ಬಳಲಿ ಗೀರ್ವಾಣವು
ಜಲಜಸಂಭವನು ಒಂದಾಗಿ ಬಂದು
ತಲೆಬಾಗಿ ಉಸುರಲು ಬಲವಾಗಿ ವಾಸಿಷ್ಠ
ಕುಲದಲ್ಲಿ ಜನಿಸಿದೆ ಖಲು ದೈವವೇ
ನಳಿನಾಕ್ಷ ಮಹಾಋಷಿ ವಿಜಯವಿಠ್ಠಲ ಬದರಿ
ನಿಲಯ ನಿನ್ನಯ ಲೀಲೆಯಾವುದೊ ಜೀಯ ।। ।।೩।।

## ।। ಅಟ್ಟತಾಳ ।।

ಪರಾಶರ ಉದರದಿಂದಲಿ ಬಂದು
ಮೂರಾರುಪುರಾಣ ವಿರಚಿಸಿ ಅದರೊಳು
ಆರು ಸತ್ವವು ಆರು ರಾಜಸ ತರುವಾಯ
ಆರು ತಾಮಸ ಇನಿತಷ್ಟಾದಶವೆಂದು
ಧಾರುಣಿಯೊಳಗಾ ಘೋರತಮಸಿಗಿವ
ಮೂರು ಪರಿಯಲ್ಲಿ ಕಾರಣವೆನಿಸಿ ಪ್ರತಿಷ್ಠಿಸಿ ಕಲಿ ನಿ
ವಾರಣವನು ಮಾಡಿ ಭಾರಕರ್ತನೆ ಸುಜ-
ನರಿಗೆ ಸುಕೃತದ ದಾರಿಯ ತೋರಿದ ದ್ವೈಪಾಯನ ಮುನಿ
ಈರೇಳು ಜಗದೊಳಗಾರು ನಿಮಗೆ ಸರಿ
ಕಾರುಣ್ಯನಿಧಿಪೂರ್ಣ ವಿಜಯವಿಠ್ಠಲ ಮುನಿ-
ವರೇಣ್ಯ ಸುರಾಗ್ರಗಣ್ಯ ಶರಣ್ಯ ।। ।।೩।।

|| ಆದಿತಾಳ ||

ತಾಮಸಾಂಧವ ಕಳೆದು ವಿಮಲಸುಜ್ಞಾನವನ್ನು
ಪಾಮರರಿಗೆ ಪಾಲಿಸಿದೆ ಕಮಂಡಲು ದಂಡಕಾಷ್ಟ
ಸಮೀಚೀನವಾಗಿ ಕರಕಮಲದಲ್ಲಿ ಧರಿಸಿದ-
ಕ್ಷಮಾಲಾ ಕಾಷಾಯಾಂಬರಾಗಮದರ್ಥ ಶಿಷ್ಯರಿಗೆ
ಪ್ರಮೇಯಂಗಳನು ಪೇಳುತ
ಕ್ರಮವರಿತು ಮಾಡಿದ ಕುಮತಿ ಪರಿಹರಿಸಿದ
ಯಮಿಕುಲೋತ್ತಮ ವಿಜಯವಿಠ್ಠಲ ಅನು-
ಪಮಚಾರಿತ್ರ ರಾಜ್ಯ ಕ್ರಮದಿಂದ ಆಳಿಸಿದೆ || ||೫||

|| ಜೊತೆ ||

ಬಾದರಾಯಣ ಸುಖಕಾರಣ ಭುಕುತರ್ಗೆ
ವೇದವ್ಯಾಸನೆ ವಿಷ್ಣು ವಿಜಯವಿಠ್ಠಲ ವ್ಯಾಸ ||



೨೩೭

(ಮೋಹನ ವಿಠ್ಠಲಾಂಕಿತ)

ರಾಗ-ಕಾನಡ ಆದಿತಾಳ

ಏನೋ ಈ ವೇಷ ವೇದವ್ಯಾಸ
ಏನೋ ಈ ವೇಷ || ||ಪ||

ಭಾನುಕೋಟಿಪ್ರಕಾಶ
ಬದರೀ ನಿವಾಸ || ||ಅ||

ದ್ರೌಪದಿ ಕರೆಯಲಪಾರವಸ್ತ್ರವನಿತ್ತೆ
ಕೌಪೀನ ಧರಿಸಿದ ಕೌತುಕವೇನಯ್ಯ || ||೧||

ಮುತ್ತು ಮಾಣಿಕ್ಯ ನವರತ್ನ ಮಕುಟವಿರೆ
ನೆತ್ತಿಲಿ ಕೆಂಜೆಡೆ ಪೊತ್ತುಕೊಂಡಿಪ್ಪುದು || ||೨||

ವರವೈಕುಂಠವ ಬಿಟ್ಟು ಮೋಹನವಿಠ್ಠಲ
ಧರೆಯೊಳು ಬೋರೆಯ ಮರದಡಿಯಲಿರುವುದು || ||೩||



೨೩೭

(ಜಗನ್ನಾಥವಿಠ್ಠಲಾಂಕಿತ)

ರಾಗ-ಅಸಾವೇರಿ ಆದಿತಾಳ

ಮಧ್ವಾಂತರ್ಗತ ವೇದವ್ಯಾಸ ಮಮ
ಹೃದ್ವನರುಹ ಸನ್ನಿವಾಸಾ || ||ಪ||

ಸದ್ವಿದ್ಯಾಕೊಡು ಶ್ರೀಕೃಷ್ಣದ್ವೈಪಾಯನ ಚಿದ
ಚಿದ್ವಿಲಕ್ಷಣ ತ್ವತ್ಪಾದದ್ವಯಾಬ್ಜವ ತೋರೋ || ||ಅ||

ಬಾದಾರಾಯಣ ಬಹುರೂಪಾ-ಸನ
ಕಾದಿಸನ್ನುತ ಧರ್ಮಯೂಪಾ

ವೇದೋದ್ಧಾರನಾದನಾದಿಕರ್ತ-ಪೂರ್ಣ
ಬೋಧ ಸದ್ಗುರುವರರಾಧಿತ ಪದಯುಗ
ಮೇದಿನಿಯೊಳಾನೋರ್ವ ಪಾಮ
ರಾಧಮನು ಕೈಪಿಡಿ ಕರುಣವು-
ಹೋದಧೇ ಕಮನೀಯ ಕಾಯ ಪ್ರ
ಬೋಧಮುದ್ರಾಭಯ ಕರಾಂಬುಜ ॥ ॥೧॥

ಹರಿತೋಪಲಾಭ ಶರೀರಾ-ಪರಾ
ಶರಮುನಿವರ ಸುಕುಮಾರ
ಪರಮಪುರುಷ ಕಾರ್ತಸ್ವರಗರ್ಭ-ಪ್ರಮುಖ ನಿ
ರ್ಜರಗುಣ ಮುನಿಸುತ ವರಪಾದಪಂಕೇಜ
ಕುರುಕುಲದಿ ಧೃತರಾಷ್ಟ್ರ ಪಾಂಡು ವಿ
ದುರರ ಪಡೆದೈವರಿಗೊಲಿದು ಸಂ-
ಹರಿಸಿ ದುರ್ಯೋಧನನ ಭಾರತ
ವಿರಚಿಸಿದ ಸುಂದರ ಕವೀಂದ್ರ ॥ ॥೨॥

ಜಾತರೂಪ ಜಟಾಜೂಟ-ಶ್ರೀನಿ
ಕೇತನ ತಿಲಕ ಲಲಾಟ-
ಪೀತ ಕೃಷ್ಣಾಜಿನ ಶ್ವೇತ-ಶ್ರೀಯಜ್ಞೋಪ
ವೀತಮೇಖಲ ದಂಡಾನ್ವಿತ ಕಮಂಡಲ
ಭೂತಭಾವನ ಭೂತಿಕೃತ್ಸ
ದ್ಭೂತಿದಾಯಕ ಶ್ರೀಜಗನ್ನಾಥವಿಠ್ಠಲನ
ನಾತುತಿಸಬಲ್ಲೆನೆ ನಿನ್ನ ಮಹಿಮೆಯ ಸುಖಾತ್ಮ
ಪಾತಕನು ಅಲ್ಪಾತುಮನು ನಾ ॥ ॥೩॥



## ೨೩೮

(ತಂದೆ ವೆಂಕಟೇಶವಿಠ್ಠಲಾಂಕಿತ)

ರಾಗ-ಆನಂದಭೈರವಿ ಆದಿತಾಳ

ವ್ಯಾಸ ಬದರಿವಾಸ ಪಾಲಿಸೋ । ಮಧ್ವೇಶಮುನಿಪ
ರಾಶರಾತ್ಮಜಾತ ಲಾಲಿಸೋ ॥ ॥ಪ॥

ಶ್ರೀಶ ವಿಧಿ ಸದಾಶಿವಾದ್ಯ । ಶೇಷ ತ್ರಿದಶ ಪೋಷಸುಗುಣ
ಭೂಷ ಕರ್ಮ । ದೋಷದೂರ । ತೋಷಸಾರ । ವೇಷಧಾರ ॥ಅ॥

ನೀಲವರ್ಣ ನಿಗಮಮಂದಿರ । ವಿವಿಧವೇದ। ಜಾಲ ವಿಭಜನಾರ್ಥ ಶ್ರೀಧರ ॥
ಕಾಲ ದೇಶ್ವವಿದ್ಯಾ ಕರ್ಮ । ಜಾಲ ಬದ್ಧ ಬುಧಜನಾನು
ಕೂಲ ಮಿಥ್ಯಕಾಲ । ಲಕ್ಷ್ಮೀಲೋಲ । ಅಜಿನ ಚೇಲ । ಪಾಲ ॥ ॥೧॥

ಕಾರ್ತಸ್ವರಜಟಾವಿರಾಜಿತ । ಕಾಷಾಯ ದಂಡ । ಸ್ವಾರ್ಥರಹಿತ
ಮುನಿಪ್ರವೇಷ್ಟಿತ ॥
ಆರ್ತಜನ ಮನೋಭಿಲಾಷೆ । ಪೂರ್ತಿಸುವ ಪರಾರ್ಥದಾತ
ಪಾರ್ಥಸಖ ವೇದಾರ್ಥಗಮ್ಯ । ಕೀರ್ತಿತವ್ಯ । ತೀರ್ಥಪದನೇ ॥ ॥೨॥

ಶ್ರೀಸತೀಮುಖಾಬ್ಜಭಾನವೇ । ಕಲ್ಯಾದಿ ಮಲಿನ । ನಾಶಕಾರಣಾವತಾರವೇ ॥
ವ್ಯಾಸದೇವ ತಂದೆ ವೆಂಕಟೇಶವಿಠ್ಠಲ ಶ್ರೀ ಸರ್ವಜ್ಞ
ರಾ ಸುಸಮಯ ಸಾರಪಥದಿ । ಮೀಸಲಿಡಿಸೊ । ಲೇಸ ಸಲಿಸೊ ॥ ॥೩॥



## ಶ್ರೀ ವಿದ್ಯಾರತ್ನಾಕರತೀರ್ಥ ಶ್ರೀಪಾದಕೃತ

### ಶ್ರೀಬಾದರಾಯಣ ಸುಪ್ರಭಾತ ಪಂಚಕಂ

ಶ್ರೀಮತ್ಪರಾಶರತಪಃ ಫಲವಾಸವೀಸು ।
ವ್ಯಕ್ತ ಪ್ರಭೂತಸುಖಚಿದ್ಬಲ ವೀರ್ಯ ಮೂರ್ತೇ ॥
ಪ್ರಾಜ್ಯ ಪ್ರಬೋಧ ಪರಿಪೂಜ್ಯ ಪದಾರವಿಂದ ।
ಶ್ರೀಬಾದರಾಯಣ ಹರೇ ತವಸುಪ್ರಭಾತಮ್ ॥ ॥೧॥

ವಿಜ್ಞಾನರೋಚಿರಭಿ ಪೂರಿತ ಪದ್ಮಜಾಂಡ ।
ಬಾಹ್ಯಾಂತರಾಮಗುರೋ ಹರಿತೋಪಲಾಭ ॥
ತರ್ಕಾಭಯೋಜ್ಜ್ವಲಕರಾಂಬುಜ ಯೋಗಿವರ್ಯ ।
ಶ್ರೀಬಾದರಾಯಣ ಹರೇ ತವ ಸುಪ್ರಭಾತಮ್ ॥ ॥೨॥

ಶ್ರೀಭಾರತದ್ವಿನವ ಚಾರುಪುರಾಣ ಕರ್ತಃ ।
ಕ್ಷ್ಮಾಭಾರದುರ್ಮತಿ ಕುವಾದ ಸಮಾಜ ಹರ್ತಃ ॥
ಶ್ರೀಭಾರತೀಶ ಮುಖಕೀರ್ತಿತ ಭವ್ಯವಾರ್ತ
ಶ್ರೀಬಾದರಾಯಣ ಹರೇ ತವ ಸುಪ್ರಭಾತಮ್ ॥ ॥೩॥

ಸಜ್ಜಾಲ ಹೃತ್ತಿಮಿರ ಸಂತತಿ ಪದ್ಮಮಿತ್ರ ।
ವೇದಾರ್ಥನಿರ್ಣಯ ಕೃತೇರಚಿತೋರು ಸೂತ್ರ ॥
ದ್ವೈಪಾಯನ ಶ್ರುತಿತತೀರಿತ ಸಚ್ಚರಿತ್ರ ।
ಶ್ರೀಬಾದರಾಯಣ ಹರೇ ತವ ಸುಪ್ರಭಾತಮ್ ॥ ॥೪॥

ಭೂದಾನ ವಾರಿಹೃದಯಾಂಬುಜ ತಿಗ್ಮ ಭಾನೋ ।
ಪಾದಾರವಿಂದ ನತ ಕಾಮಿತ ಕಾಮಧೇನೋ ॥
ಶ್ರೀದಾಪ್ತಕೀಟಪತಯೇ ಮುನಿವರ್ಯ ಸೂನೋ ।
ಶ್ರೀಬಾದರಾಯಣ ಹರೇ ತವ ಸುಪ್ರಭಾತಮ್ ॥ ॥೫॥

ವಿದ್ಯಾರತ್ನಾಕರೋಕ್ತಂ ।
ಶ್ರುತಿಪತಿ ಸುಪ್ರಭಾತ ಪಂಚಕಂ ಪ್ರಾತಃ ॥
ಭಕ್ತ್ಯಾಪರತ್ಯತಂದ್ರಂ ।
ನಾಮಗಿರೀಣ್ಣ್ಯ ಹರಿಃ ಪ್ರಸೀದತಿ ಕ್ಷಿಪ್ರಮ್ ||೬||

॥ ಇತಿ ಶ್ರೀಬಾದರಾಯಣ ಸುಪ್ರಭಾತ ಪಂಚಕಂ ಸಂಪೂರ್ಣಂ ॥



೨೩೯

(ಅಂಕಿತ ಪ್ರಸನ್ನ)

ರಾಗ-ಬಹುದಾರಿ ಆದಿತಾಳ

ಬಾದರಾಯಣ ಪಾದಕರಗಿದೆನೋ ॥ ||ಪ||

ನೀದಯದಿ ಕಾಮ ಕ್ರೋಧಗಳನೆ ಬಿಡಿಸಿ
ಸಾಧು ಕರ್ಮದಲಿ ಆದರವೀಯೋ ॥ ||ಅ||

ಜ್ಞಾನಿ ಗೌತಮಮೌನಿ ಶಾಪದಿಂದ
ದೈನ್ಯದಲ್ಲಿ ಚತುರಾನನಾದಿಗಳು
ನೀನೆ ಗತಿಯೆನಲು ಮಾನಿಸಿದ ಸುಖಾತ್ಮ ॥ ||೧||

ತಾಪಸೋತ್ತಮ ಆ ಪರಾಶರರು
ದ್ವೀಪದಲ್ಲಿರಲು ನೀ ಪವಳಿಸಿದೆ
ಶಾಪದಿಂದ ಕ್ರಿಮಿರೂಪ ಪೊಂದಿದವಗೆ
ಭೂಪತನವನಿತ್ತ ದ್ವೈಪಾಯನಾಖ್ಯ ॥ ॥೨॥

ಶ್ರುತಿಗಳರ್ಥ ಮುಂದಮತಿಗಳರಿಯದಿರ
ಹಿತದಿ ಬ್ರಹ್ಮಸೂತ್ರತತಿಗಳನ್ನೆ ರಚಿಸಿ
ಅತುಲವಾದ ಭಾಗವತ ವರಮಹಾಭಾ-
ರತಗಳನ್ನು ರಚಿಸಿ ಅತಿ ಪ್ರಸನ್ನರಾದ || ||೩||



## ೨೪೦

(ಅಂಕಿತ-ಇಂದಿರೇಶ)

ಬಾರೋ ಬೇಗನೆ ಬಾದರಾಯಣ-ನಿನ್ನ
ಸಾರುವ ಸತತ ಗ್ರಂಥಗಳನ್ನ || ||ಪ||

ತೋರಿಸು ತವ ಸುಸ್ಮಿತಾನನ-ದೇಹ
ಗಾರದೊಳಗೆ ತಪ್ಪಿಸಭಿಮಾನ || ||ಅ||

ಬಾದರಿ ಸುಖಿ ಪೈಲ ಜೈಮಿನಿ-ಪೂರ್ಣ
ಬೋಧ ವೈಶಂಪಾಯನಮುನಿ ||
ಸಾಧುಸೇವಿತ ಪಾದಾಂಭೋಜನೆ-ಮಮ
ಗಾಧಮಹಿಮೆ ತೋರಿಸೊ ಮೌನಿ || ||೧||

ಹಂಸ ಚಕೋರಮುನಿಗಳಿಗೆ-ಸುಖಿ
ಸಂಶಯದರ್ಥ ಪೇಳುತಾಗ-ಬಂದ ||
ಸಂಶಯ ಹರಿಸುತ ಬೇಗ-ಮಹಾ
ನಂದನೀಡುವಿ ಕೇಳಿದವರಿಗೆ || ||೨||

ಸತ್ಯವತಿಯ ಸೂನು-ಮೂರನೇ
ಧಾತ್ರಿಯೊಳಗೆ ಪುಣ್ಯಕಾಮನೆ-ಸುತ್ತ ||
ಮುತ್ತಲು ಶಿಷ್ಯ ಸೇವ್ಯನೇ-ಎನ್ನ
ನೇತ್ರಕ್ಕೊಳಿಯೋ ಇಂದಿರೇಶನೆ ॥ ॥೩॥



## ೨೪೧

### (ಪ್ರಾಣೇಶವಿಠ್ಠಲಾಂಕಿತ)

ರಾಗ–ಭೈರವಿ ಏಕತಾಳ

ಅಂದುಂಟಿಂದಿಲ್ಲೇ ಮಾಧವ-ನಿನ್ನ
ಹೊಂದಿದವರ ಭಯ ಕಳೆದು ಪೊರೆವದಯ್ಯ ॥ ||ಪ||

ಶಂತನುಭೂಪನರಸಿ ಬಳಲಿ
ಕಂತುಜನಕ ನೀ ಗತಿ ಎನಲೀ
ಅಂತರಿಸದೆ ವಿಧವರೆಲಾಕ್ಷಣ
ಸಂತತಿ ನೆಲೆಸಿದೆ ಮುನ್ನಿಸುತಾ ॥ ॥೧॥

ಕಲಿಯಾಳಿಕೆ ಬಹಳಾಗಿರಲು
ಮಲಿನಯುಕ್ತ ಧರೆಯಾಗಿರಲು
ತಿಳಿದ ಹದಿನೆಂಟು ಪುರಾಣವ ವಿರಚಿಸಿ
ಸಲಹಿದೆಯುತ್ತಮಜೀವರನಾ || ||೨||

ತಿಳಿಯದೆ ನಿನ್ನೊಲುಮೆಯುವಗೆಂದು
ನಳಿನಾನುಜ ನೀ ಬೇಕೆಂದು
ಕೊಳಲರಿದರ ಕರದಿತ್ತಾ ರಣದೊಳು
ಗೆಲಿಸಿದೆ ತೋಂಡನ ಮುದದಿಂದಾ ॥ ||೩||

ಪಾದಜಲರಸ ಬದುಕಿಸಿತು
ಪಾದ ಪೆಸರೇ ಪತಿತನ ಕಾಯ್ತು
ಪಾದಪ ಮುರಿದು ಕುಬೇರಜರೀರ್ವರ
ಪಾದವೇ ಸದ್ಗತಿಗೈದಿಸಿತಾ ॥ ॥೪॥

ಆ ಸೈಂಧವನಳಿದರ್ಜುನನ
ಪೋಷಿಸಿದಂತೆ ಮೃತಾತ್ಮಜನ
ಭೂಸುರಗಿತ್ತಂತೀ ವಿಪ್ರರ ಪ್ರಾ
ಣೇಶವಿಠ್ಠಲ ರಕ್ಷಿಸಬೇಕಾದಯೆ ॥೫॥



೨೪೨

(ಗುರುಗೋವಿಂದವಿಠಲಾಂಕಿತ)

ರಾಗ–ಕಾಂಬೋಧಿ ಝಂಪೆತಾಳ

ಅನಿಲಹೃತ್ಕುಮುದೇಂದು–ವೇದವ್ಯಾಸಾ
ಎನಗಿನ್ನು ತವಧ್ಯಾನ-ಸುಖವೀಯೋ ಶ್ರೀಶಾ ॥ ॥ಪ॥

ಚಿದಚಿದ್ವಿಲಕ್ಷಣನೆ-ಚಿತ್ರಚಾರಿತ್ರನೇ
ಚತುರಾಸ್ಯಪಿತ ನೀನು–ಸುರಚಕ್ರವರ್ತೀ
ಚತುರ ರೂಪವ ಧರಿಸಿ-ಚತುರವ್ಯೂಹವ ರಚಿಸಿ
ಚತುರವಿಧಸೃಷ್ಟಿಯನು-ಚತುರ ವಿರಚಿಸಿದೆ ॥ ॥೧॥

ಮುನಿಪರಾಶರತನುಜ–ಶ್ರೀನಿಕೇತನ ಹರಿಯೆ
ಎನಗರುಹು ವೇದಾರ್ಥ–ವೇದವ್ಯಾಸಾ
ಘನಮಹಿಮಕೋಟಿ–ನಿಖಿಲಾಂಡನಾಯಕನೆ
ಅನಘ ನೀ ಸಲಹಯ್ಯ-ಕಪಿಲ ರೂಪಾತ್ಮಾ ॥ ॥೨॥

ಸಚ್ಛಾಸ್ತ್ರಕರ್ತೃ ಸತ್-ಸೂತ್ರಗಳ ನಿರ್ಮಾತೃ
ಸಚ್ಛಾಸ್ತ್ರಭಾವವರುಹೆ-ಬುಧಜನರಿಗೇ
ಮತ್ಸ್ಯಾದಿರೂಪನಿ-ನ್ನಿಚ್ಛೆಯಿಂದಲಿ ಪೊಂದಿ
ವತ್ಸರ್ಗೆ ಬೋಧಿಸಿದೆ-ಸಚ್ಚಿದಾನಂದಾ ॥೩॥

ಮೂಲಪ್ರಕೃತಿಯ ಮಾನಿ-ಮಹಲಕ್ಷ್ಮಿ ನಿನ್ನಯ
ಶೀಲಗಳನನುಸರಿಸಿ-ಸೇವಿಸುವಳೂ
ಪ್ರಳಯಕಾಲದಿ ನಿನ್ನ-ಒಲುಮೆಗೋಸುಗ ವಟದ
ಎಲೆಯರೂಪದಿ ಮಲ-ಗಲನುವಾದಳಯ್ಯ ॥ ॥೪॥

ಬಾದರಾಯಣಮೂರ್ತಿ-ಬದರಿಕ್ಷೇತ್ರದಿ ಪೂರ್ಣ
ಬೋಧರ ಸುಸೇವೆಯನು-ಸ್ವೀಕರಿಸುವೆ
ಮೋದಗುಣಪೂರ್ಣ ಗುರು-ಗೋಪಿಂದವಿಠಲನೇ
ಹೇ ದಯಾಂಬುಧೆ ನಿನ್ನ-ಪಾದಾಬ್ಜ ತೋರೋ ॥೫॥

